ಕುಲ್ಲಿಹಳ್ಳಿ (ಸಂಖ್ಯೆ 3) ಸನ್ನಿವೇಶದ ನಕ್ಷೆ.




1. ಕಡಕೊಳ್ಳ
2. ಕಳ್ಳಲೆ
3. ಕುಲ್ಲಿಹಳ್ಳಿ
4. ಹಾಡ್ಯ
5. ಕುಲ್ಲಿಹಳ್ಳಿ ಅಣೆಕಟ್ಟೆ
6. ಭೈಲಗಲ ಕಪಿಲಾ ಸಂಗಮ.
7. ಹುಂಡಿಪ್ಪುರ
8. ರಾಂಪುರ
9. ಕಂತೆಮ್ಮದಪ್ಪನ ಬೆಟ್ಟ
10. ಬಾರವಾಳಿ ಅಣೆಕಟ್ಟು.

ಪ್ರೊ. ಲಕ್ಷ್ಮಣ ತೆಲಗಾವಿ
– ನಿವೃತ್ತ ಪ್ರಾಧ್ಯಾಪಕರು
ಇವರ ಕೊಡುಗೆ

# ಅರ್ಪಣೆ









ಹುಲ್ಲಹಳ್ಳಿಯ ರಕ್ಷಣೆಗಾಗಿ ತಮ್ಮ ಅಮೂಲ್ಯ ಜೀವವನ್ನು ಅರ್ಪಿಸಿ ವೀರಗಲ್ಲು ರೂಪದಲ್ಲಿ ಅಮರರಾದ ಅಜ್ಞಾತ ಮಹಾವೀರರಿಗೆ **'ಹುಲ್ಲಹಳ್ಳಿ ದರ್ಶನ'** ಕೃತಿಯನ್ನು ಸದ್ಭಾವನೆಯಿಂದ ಸಮರ್ಪಿಸಲಾಗಿದೆ



ಕಪಿಲಾ ನದಿಯ ತಿರುವು ಹಾಗೂ ಕಂಭದ ಮಡು

# ಹುಲ್ಲಹಳ್ಳಿ ದರ್ಶನ

ಕರ್ನಾಟಕದ ಕಾವೇರಿ ನದಿಯ ಉಪನದಿಗಳಲ್ಲಿ ಅತ್ಯಂತ ದೊಡ್ಡದ್ದು ಕಪಿಲಾ. ಕಪಿಲಾ ನದಿಯು ಬೇಸಗೆಯಲ್ಲಿ ಶಾಂತ ಗಂಭೀರವೂ ಮತ್ತು ಮಳೆಗಾಲದಲ್ಲಿ ರುದ್ರ ಭಯಂಕರವೂ ಆಗಿ ಪ್ರವಹಿಸಿ ರಾಜ್ಯದ ವಿವಿಧ ಯೋಜನೆಗಳಿಗೆ ಸಹಾಯಕವಾಗಿದೆ. ಅಲ್ಲದೆ ಈ ನದಿಯು ಹರಿಯುವ ತೀರ ಪ್ರದೇಶವು ಪವಿತ್ರವೂ, ಪುಣ್ಯಸ್ಥಳವೂ ಮತ್ತು ತೀರ್ಥಕ್ಷೇತ್ರಗಳೂ ಆಗಿವೆ. ಅಂತಹ ಸ್ಥಳಗಳಲ್ಲಿ, ಕಪಿಲಾ ನದಿಯ ಬಲದಂಡೆಯಲ್ಲಿರುವ ಮತ್ತು ಮೈಸೂರು ಜಿಲ್ಲೆಯ ನಂಜನಗೂಡಿನ ಪಶ್ಚಿಮ ಭಾಗದಲ್ಲಿ ಸುಮಾರು ಹನ್ನೆರಡು ಕಿಲೋಮೀಟರ್ ದೂರದಲ್ಲಿರುವ ಹುಲ್ಲಹಳ್ಳಿಯೂ ಒಂದು.

ಹುಲ್ಲಹಳ್ಳಿಗೆ ಈ ಹೆಸರು ಬರಲು ಕಾರಣವೇನು ? ಎಂದು ತಿಳಿಸುವುದಕ್ಕಿಂತ ಮುಂಚೆ, ಹುಲ್ಲಹಳ್ಳಿಗಿದ್ದ ಇತರ ಹೆಸರುಗಳನ್ನು ತಿಳಿಸಲು ಇಚ್ಛಿಸುತ್ತೇನೆ.

## 1. ತೃಣಪುರಿ–ಪೌರಾಣಿಕ ಹಿನ್ನೆಲೆ

ಈ ಹುಲ್ಲಹಳ್ಳಿಯ ಉತ್ತರ ಭಾಗದಲ್ಲಿ ಕಪಿಲಾ ನದಿಯು ವಿಶಾಲವಾದ ಪಾತ್ರವನ್ನು ಹೊಂದಿ ಪೂರ್ವಾಭಿಮುಖವಾಗಿ ಹರಿದು ಬಂದು ಉತ್ತರಾಭಿಮುಖವಾಗಿ ಹರಿದು ಬಂದು ಉತ್ತರಾಭಿಮುಖವಾಗಿ ತಿರುಗುತ್ತದೆ. ಈ ತಿರುವು ಪ್ರದೇಶವನ್ನು 'ಕಪಿಲಾ ಕೊಲ್ಲಿ' ಎಂದು ಕರೆಯುತ್ತಾರೆ. ಈ ಕಪಿಲಾ ಕೊಲ್ಲಿಯ ಬಳಿ ತ್ರೇತಾಯುಗದಲ್ಲಿ ಮಹಾತಪಸ್ವಿಯೂ ಮತ್ತು ಬ್ರಹ್ಮಜ್ಞಾನಿಯೂ ಆದ 'ತೃಣಬಿಂದು' ಎಂಬ ಮಹರ್ಷಿಗಳು ಆಶ್ರಮವನ್ನು ಸ್ಥಾಪಿಸಿಕೊಂಡು ಅದನ್ನು ತಮ್ಮ ತಪೋ ಭೂಮಿಯನ್ನಾಗಿ ಮಾಡಿಕೊಂಡಿದ್ದರು. 'ತೃಣಬಿಂದು' ಮಹರ್ಷಿಗಳಿದ್ದಂತಹ ಈ ಮಹಾಕ್ಷೇತ್ರವೇ ತೃಣಪುರಿ' (ಇಂದಿನ ಹುಲ್ಲಹಳ್ಳಿ) ಎಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಒಮ್ಮೆ ತೃಣಬಿಂದುಗಳ ಆಶ್ರಮಕ್ಕೆ ಬ್ರಹ್ಮಪುತ್ರನಾದ ಪುಲಸ್ತ್ಯಮುನಿಯು ಬಂದು ಇವರಿಂದ ಸತ್ಕೃತನಾಗಿ ಇವರ ಆಶ್ರಮದ ಬಳಿಯಲ್ಲಿಯೇ ತಾನೂ ಒಂದು

ಪರ್ಣಶಾಲೆಯನ್ನು ನಿರ್ಮಿಸಿಕೊಂಡು ತಪಸ್ಸು ಮಾಡುತ್ತಿದ್ದನು. ಸುತ್ತ ಮುತ್ತಣ ಋಷಿ ಕನ್ಯೆಯರೂ ಗಂಧರ್ವ–ನಾಗಕನ್ಯೆಯರೂ ಇಲ್ಲಿಗೆ ಬಂದು ನೃತ್ಯ, ಗೀತ, ಪರಿಹಾಸಾದಿಗಳಿಂದ ಈತನ ಚಿತ್ತ ಸ್ಥೈರ್ಯಕ್ಕೆ ಭಂಗ ವನ್ನುಂಟು ಮಾಡುತ್ತಿದ್ದರು. ಇದರಿಂದ ಕೋಪೋದ್ರಿಕ್ತನಾದ ಪುಲಸ್ತ್ಯನು, "ಇನ್ನು ಮುಂದೆ ನಿಮ್ಮಲ್ಲಿ ಯಾರಾದರೂ ಇಲ್ಲಿಗೆ ಬಂದು ನನ್ನ ಕಣ್ಣಿಗೆ ಕಂಡು ಬಂದರೆ ಗರ್ಭವತಿಯರಾಗುವಿರಿ" ಎಂದು ಶಾಪವಿತ್ತನು. ಅಂದಿನಿಂದ ಆ ಕನ್ಯೆಯರು ಈತನ ಆಶ್ರಮವನ್ನು ಮರೆತುಬಿಟ್ಟರು.

ಹೀಗಿರಲು ತೃಣಬಿಂದುವಿನ ಮಗಳಾದ "ಗೋ" ಎಂಬ ಕನ್ಯೆಯು ಒಂದು ದಿನ ನಿಯಮದಲ್ಲಿದ್ದ ಪುಲಸ್ತ್ಯನ ಆಶ್ರಮಕ್ಕೆ ಹೋಗಿ ಆತನ ಬಳಿಯಲ್ಲಿಯೇ ಸ್ವಲ್ಪ ಹೊತ್ತು ನಿಂತಿರಲು ಒಡನೆಯೇ ಆಕೆಯ ದೇಹದಲ್ಲಿ ಕೆಲವು ವೈಲಕ್ಷಣ್ಯಗಳುಂಟಾಗಲು ಆಕೆಯು ಹೆದರಿ ತಂದೆಯ ಬಳಿಗೆ ಬಂದಳು. ತಂದೆಯು ಮಗಳ ಮುಖವನ್ನು ನೋಡಿ ಸಂದೇಹಪಟ್ಟು, ಇಂತಹ ಮಾರ್ಪಾಡುಗಳಿಗೆ ಕಾರಣವೇನೆಂದು ಪ್ರಶ್ನೆಮಾಡಲಾಗಿ ಆ ಕನ್ಯೆ, ತಾನು ಪುಲಸ್ತ್ಯನ ಆಶ್ರಮವನ್ನು ಹೊಕ್ಕ ಮಾತ್ರದಿಂದಲೇ ಇಂತಹ ಸ್ಥಿತಿಗೆ ಬಂದೆನೆಂದಳು. ತೃಣಬಿಂದು ಮಹರ್ಷಿಗಳು ದಿವ್ಯದೃಷ್ಟಿಯಿಂದ ನಡೆದ ಸಮಾಚಾರವನ್ನು ಅರಿತು, ತಮ್ಮ ಮಗಳೊಂದಿಗೆ ಪುಲಸ್ತ್ಯನ ಬಳಿಗೆ ಬಂದು, "ಅಯ್ಯಾ, ಪುಲಸ್ತ್ಯ ಮುನೀಶ್ವರನೇ, ಚಿರಕಾಲ ತಪಸ್ಸಿನಿಂದ ನಿನ್ನ ದೇಹ ಕೃಶವಾಗಿದೆ. ನಿನ್ನ ಶುಶ್ರೂಷೆಗೂ ಇಲ್ಲಿ ಯಾರೊಬ್ಬರೂ ಇಲ್ಲ. ಆದ್ದರಿಂದ ಈಕೆಯನ್ನು ಶುಶ್ರೂಷೆಗಾಗಿ ಪರಿಗ್ರಹಿಸು." ಎಂದು ಹೇಳಿ ತನ್ನ ಮಗಳನ್ನು ಪುಲಸ್ತ್ಯನಿಗೆ ಕೊಟ್ಟು ವಿವಾಹವನ್ನು ಮಾಡಿದರು.

ತೃಣಬಿಂದು ಮಹರ್ಷಿಗಳಿಗೆ ಈ ಹೆಸರು ಬರಲೂ ಕಾರಣವುಂಟು. ಇವರು ತಮ್ಮ ಇಷ್ಟ ದೈವವಾದ ಶ್ರೀಮನ್ನಾರಾಯಣನನ್ನು ಕುರಿತು ದೀರ್ಘಕಾಲ ತಪಸ್ಸನ್ನಾಚರಿಸಿದರು. ಈ ವೇಳೆಯಲ್ಲಿ ದಿನಕ್ಕೊಮ್ಮೆ ಉಪಯೋಗಿಸುತ್ತಿದ್ದ ಆಹಾರವನ್ನು ತ್ಯಜಿಸಿ, ಕೇವಲ ಫಲಾಹಾರವನ್ನೂ ನಂತರ ಕೇವಲ ಪರ್ಣಗಳನ್ನೂ (ಎಲೆ), ನಂತರ ಬರುಬರುತ್ತಾ ಒಂದು ಹುಲ್ಲುಕಡ್ಡಿಯನ್ನು ನೀರಿನಲ್ಲಿ ಅದ್ದಿ ಅದನ್ನು ಮೇಲೆತ್ತಿದಾಗ ಅದರಿಂದ ಬೀಳುವ ನೀರಿನ ಹನಿಗಳನ್ನು ಒಂದು ಬಾರಿ ಮಾತ್ರ ಸೇವಿಸುತ್ತಿದ್ದರು. ಹೀಗೆ ತೃಣಬಿಂದು

ವನ್ನೇ ಆಹಾರವನ್ನಾಗಿ ಸೇವಿಸಿ ದೀರ್ಘಕಾಲ ತಪಗೈದ ಫಲವಾಗಿ ಇಷ್ಟದೈವ ದರ್ಶನದ ಕಾಲವು ಪ್ರಾಪ್ತವಾಯಿತು. ಶ್ರೀರಾಮಚಂದ್ರನು ತನ್ನ ವನವಾಸದ ಅವಧಿಯಲ್ಲಿ ದಂಡಕಾರಣ್ಯದ ಪಶ್ಚಿಮಭಾಗವಾದ ಈ ಸ್ಥಳದಲ್ಲಿ ಸಂಚಾರ ಮಾಡುತ್ತಿರಲು ಮಹರ್ಷಿಗಳು ಆತನನ್ನು ಭಕ್ತಿ ಪೂರ್ವಕವಾಗಿ ಸತ್ಕರಿಸಿದರು. ಸಂತೋಷಗೊಂಡ ಶ್ರೀರಾಮನನ್ನು ಕುರಿತು, "ಭಗವನ್, ನನಗೆ ನನ್ನ ಜನುಮ ಜನುಮದಲ್ಲೂ ನಿನ್ನ ದರ್ಶನವೊದಗುವಂತೆ ಕರುಣಿಸು" ಎಂದು ಕೇಳಿಕೊಳ್ಳಲು, ಶ್ರೀರಾಮನು "ಎಲೈ ಭಕ್ತಶ್ರೇಷ್ಠನೇ, ಕೇವಲ ತೃಣಬಿಂದುವಿನಿಂದಲೇ ನಿನ್ನ ಶರೀರವನ್ನು ಪೋಷಿಸಿಕೊಂಡು ತಪಸ್ಸುಗೈದ ನಿನಗೆ "ತೃಣಬಿಂದು ಮಹರ್ಷಿ" ಎಂದೂ, ಈ ನಿನ್ನ ತಪೋಭೂಮಿಯು "ತೃಣಪುರಿ" ಎಂದೂ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಲಿ ನನ್ನ ಮುಂದಿನ ಕೃಷ್ಣಾವತಾರದಲ್ಲೂ ನಿನಗೆ ದರ್ಶನವೀಯುತ್ತೇನೆ." ಎಂದು ಆಶೀರ್ವದಿಸಿದನು. ತೃಣಬಿಂದು ಮಹರ್ಷಿಗಳು ದ್ವಾಪರಯುಗದ ಅಂತ್ಯದಲ್ಲಿ ವ್ಯಾಸಮಹರ್ಷಿಗಳಾಗಿ ಜನ್ಮವೆತ್ತಿದರು.

ತ್ರೇತಾಯುಗದ ಕಾಲದಿಂದಲೂ "ತೃಣಪುರಿ" ಎಂದೇ ಪ್ರಸಿದ್ಧಿಯನ್ನು ಪಡೆದಿರುವ ಹುಲ್ಲಹಳ್ಳಿಯು, ಹುಲ್ಲಹಳ್ಳಿ ಮತ್ತು ತೆರಕಣಾಂಬಿಯಲ್ಲಿ ದೊರೆತಿರುವ ಶಿಲಾಶಾಸನಗಳು ಮತ್ತು ಹುಲ್ಲಹಳ್ಳಿಯ ವೀರಶೈವ ಮಠದ ಓಲೆಗರಿಯ ಪ್ರತಿ–ಇವುಗಳ ಉಲ್ಲೇಖಗಳಿಂದಲ್ಲೂ "ತೃಣಪುರಿ" ಎಂಬ ಹೆಸರನ್ನು ದೃಢಪಡಿಸಿಕೊಂಡಿದೆ.

## 2. ಅಲ್ಲಾಳನಾಥ ಪುರ

ಹುಲ್ಲಹಳ್ಳಿ ಶಾಸನ (ಸಂಖ್ಯೆ 138) ದಲ್ಲಿ ಹುಲ್ಲಹಳ್ಳಿಯನ್ನು ಆಳಿದ ಶ್ರೀವೀರಕೇತಯ ದಣ್ಣಾಯಕನನ್ನು "ಅಲ್ಲಾಳನಾಥ ಪಾದ ಪದ್ಮಾರಾಧಕ" ಎಂದೂ, ಹುಲ್ಲಹಳ್ಳಿಶಾಸನ (ಸಂಖ್ಯೆ 140)ದಲ್ಲಿ "ಶ್ರೀ ಅಲ್ಲಾಳನಾಥ ಸ್ವಾಮಿಯವರ ಪದಕೆ ಬಸವರಾಜ ಒಡೆಯರವರು ಸರ್ವಮಾನ್ಯವಾಗಿ...." ಎಂದೂ, ತೆರಕಣಾಂಬಿ ಶಾಸನ (ಸಂಖ್ಯೆ 113) ರಲ್ಲಿ "ಅಲ್ಲಾಳನಾಥಪುರದ ಮೂಡಣ ಗದ್ದೆಯನ್ನು ನರಸಿಂಹಸ್ವಾಮಿಯವರಿಗೆ ಕೊಟ್ಟೆವು" ಎಂದೂ ಉಲ್ಲೇಖಿತವಾಗಿದೆ.

ಅಲ್ಲಾಳನಾಥ ಎಂಬುದು ಶ್ರೀವರದರಾಜ ಸ್ವಾಮಿಯ ಪ್ರಸಿದ್ಧವಾದ ಮತ್ತೊಂದು ಹೆಸರು. ಈ ಅಲ್ಲಾಳನಾಥನಿರುವ ಸ್ಥಳವೇ ಅಲ್ಲಾಳನಾಥಪುರ. ಶ್ರೀವರದರಾಜ ಸ್ವಾಮಿಯ ಬೃಹತ್ ದೇವಾಲಯವನ್ನು ಹೊಂದಿರುವ ಹುಲ್ಲ ಹಳ್ಳಿಯ ಈ "ಅಲ್ಲಾಳನಾಥಪುರ" ಎಂಬ ಹೆಸರು ಕ್ರಿ.ಶ. 1332ರ ಹಿಂದಿನಿಂದಲೂ ರೂಢಿಯಲ್ಲಿ ಇದ್ದಿತೆಂದು ಶಾಸನಗಳಿಂದ ತಿಳಿದು ಬರುತ್ತದೆ.

### 3. ಶ್ರೀ ಶಾಂತಮಲ್ಲಿಕಾರ್ಜುನ ಕ್ಷೇತ್ರ

ಹುಲ್ಲಹಳ್ಳಿಯ ವೀರಶೈವ ವಿರಕ್ತ ಮಠದ ಒಂದು ಓಲೆ ಕಟ್ಟಿನ ಪತ್ರದಲ್ಲಿ "ಸ್ವಸ್ತಿಶ್ರೀವಿಜಯಾಭ್ಯುದಯ ಶಾಲಿ ವಾಹನ ಶಕ ವರುಷ ೧೬೪೫ ಸಂದ ವರ್ತಮಾನ ಶುಭಕಾಲೇ ಕ್ರೋಧಿ ಸಂವತ್ಸರೇ ಉತ್ತರಾಯಣೇ ಮಾಘ ಶುದ್ಧ ಪೌರ್ಣಮಿ ಸೋಮವಾರೇ ಶ್ರೀಮದ್ಗರಳಪುರ ಕ್ಷೇತ್ರೇ ಪಶ್ಚಿಮ ಭಾಗೇ ಯೋಜನಾಂತರ ಪ್ರದೇಶೇ ಕಪಿಲಾ ನದೀ ತೀರೇ ಶಾಂತಮಲ್ಲಿಕಾರ್ಜುನ ಕ್ಷೇತ್ರೇ ಹರಿಣಪುರ ಸ್ಥಳೇ ವರ ಮುರಿಗೆ ಸಿಂಹಾಸನಾಧೀಶ್ವರ ಗುರುಸಿದ್ಧದೇಶಿಕ ಸಾಂಪ್ರದಾಯ ಮಠಸ್ಥಾನೇ...." ಎಂಬುದಾಗಿರುವುದರಿಂದ ಹುಲ್ಲಹಳ್ಳಿಯ ವಿರಕ್ತ ಮಠವು ಚಿತ್ರದುರ್ಗದ ಮುರಿಗೆಯ ಸಾಂಪ್ರದಾಯ ಮಠಸ್ಥಾನವಾಗಿದ್ದಿತೆಂದೂ (ಕ್ರಿ. ಶ. 1723 ರಲ್ಲಿ) ತಿಳಿದು ಬರುತ್ತದೆ. ಆ ಕಾಲದಲ್ಲಿ ಹುಲ್ಲಹಳ್ಳಿಯು ಶ್ರೀ ಶಾಂತಮಲ್ಲಿಕಾರ್ಜುನ ಕ್ಷೇತ್ರವೆಂಬ ಹೆಸರನ್ನು ಪಡೆದಿತ್ತು ಎಂದು ತಿಳಿಯುತ್ತದೆ. ಕ್ರಿ. ಶ. 12 ನೇ ಶತಮಾನದಲ್ಲಿ ಹುಲ್ಲಹಳ್ಳಿಗೆ ಆಗಮಿಸಿದ ರುದ್ರಮುನಿ ಶಿವಯೋಗಿಗಳು ಈ ಹೆಸರನ್ನು ಇಟ್ಟಿರಬಹುದೆಂದು ಇತಿಹಾಸದಿಂದ ತಿಳಿದು ಬರುತ್ತದೆ.

### 4. ಹರಿಣಪುರ

ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ K B 262 ನೇ ಸಂಖ್ಯೆಯ ಶಿವಲಿಂಗ ಚಾರಿತ್ರ ಗ್ರಂಥದ "ಹರಿಣಪುರ–ತೃಣಪುರವೆಂಬುಭಯ ನಾಮವನಾಂತು ರಾರಾಜಿಪ ಹುಲ್ಲಹಳ್ಳಿ ಎಂಬ ಪೊಳಲ್" ಉಲ್ಲೇಖದಿಂದ ಮತ್ತು ಹುಲ್ಲಹಳ್ಳಿ ಮಠದ ಓಲೆ ಕಟ್ಟಿನ "ಶಾಂತ ಮಲ್ಲಿಕಾರ್ಜುನ ಕ್ಷೇತ್ರೇ ಹರಿಣಪುರಸ್ಥಳೇ" ಎಂಬ ವಾಕ್ಯದಿಂದ ನಂಜನಗೂಡು ತಾಲ್ಲೋಕಿನ ಹುಲ್ಲ

ಹಳ್ಳಿಯೇ ಹರಿಣಪುರವೆಂದು ಸಿದ್ಧವಾಗುತ್ತದೆ.

## 5. ಪಂಚನಾರಸಿಂಹ ಕ್ಷೇತ್ರ

ಪವಿತ್ರ ಕಪಿಲಾ ನದಿಯು ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ಮತ್ತು ನಂಜನಗೂಡು ತಾಲ್ಲೋಕುಗಳಲ್ಲಿ ಹರಿದು ತಿರುಮ ಕೂಡಲು ನರಸೀಪುರದಲ್ಲಿ ಕಾವೇರಿ ನದಿಯಲ್ಲಿ ಸಂಗಮವಾಗುತ್ತದೆ. ಈ ಕಪಿಲಾ ನದಿಯ ತೀರದ ಸ್ಥಳಗಳಾದ ಸರಗೂರು, ಕೂಲ್ಯ ಎಂಬ ಗ್ರಾಮದ ಬಳಿಯ ಬೆಟ್ಟಪ್ರದೇಶ, ಕುಂಟನ ಬೆಳತೂರು, ಹುಲ್ಲಹಳ್ಳಿ ಮತ್ತು ತಿರುಮ ಕೂಡಲು ನರಸೀಪುರದ ಕಾವೇರಿ–ಕಪಿಲಾ ಮತ್ತು ಸ್ಫಟಿಕ ಸರೋವರದ ಸಂಗಮ ಸ್ಥಳದಲ್ಲಿ ಶ್ರೀನರಸಿಂಹಸ್ವಾಮಿಯವರ ದೇವಾಲಯಗಳಿವೆ. ಈ ಕ್ಷೇತ್ರಗಳನ್ನು "ಪಂಚನಾರಸಿಂಹ ಕ್ಷೇತ್ರ"ವೆಂದು ಕರೆಯಲಾಗುತ್ತಿದೆ ಈ ರೀತಿಯ ಒಂದೇ ನದಿಯ ತೀರದಲ್ಲಿ ಶ್ರೀನರಸಿಂಹಸ್ವಾಮಿಯವರ ಪಂಚಕ್ಷೇತ್ರಗಳು ಕರ್ನಾಟಕ ಹಾಗೂ ಭಾರತದ ಬೇರೆಲ್ಲೂ ಕಂಡು ಬರುವುದಿಲ್ಲ.

ಹುಲ್ಲಹಳ್ಳಿಯಲ್ಲಿ ಶ್ರೀದೇವಿ ಮತ್ತು ಭೂದೇವಿಯರ ನಡುವೆ ಯೋಗ ಪೀಠದಲ್ಲಿ ಕುಳಿತಿರುವ ಯೋಗಭೋಗ ನರಸಿಂಹಸ್ವಾಮಿಯೂ ಮತ್ತು ಉಳಿದೆಡೆಯಲ್ಲಿ ಲಕ್ಷ್ಮೀನರಸಿಂಹ ಸ್ವಾಮಿಯೂ ಪ್ರತಿಷ್ಠಾಪಿಸಲ್ಪಟ್ಟಿದೆ. ಹುಲ್ಲಹಳ್ಳಿಯ ನರಸಿಂಹಸ್ವಾಮಿಯು ಉತ್ತರಾಭಿಮುಖವಾಗಿದೆ.

## 6. ಹುಲ್ಲನ ಹಳ್ಳಿ

"ಹುಲ್ಲನ ಹಳ್ಳಿ" ಎಂಬುದು ಒಬ್ಬ ವ್ಯಕ್ತಿಯ ಹೆಸರಿನಿಂದ ಕರೆಯಲ್ಪಟ್ಟ ಊರು ಎಂದು ತಿಳಿದು ಬರುತ್ತದೆ.

"ಹುಲ್ಲ" ಎಂಬುವನು ಕ್ರಿ. ಶ. 1100 ರಲ್ಲಿ ಹೊಯ್ಸಳ ಸಾಮ್ರಾಜ್ಯದಲ್ಲಿ ಕೋಶಾಧಿಕಾರಿಯಾಗಿದ್ದನು. ಈತನು ವಿಷ್ಣುವರ್ಧನ, ನರಸಿಂಹ ಮತ್ತು ಒಂದನೇ ವೀರ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿದ್ದನು. ಹುಲ್ಲನು ಜಕ್ಕಿರಾಯ ಮತ್ತು ಲೋಕಾಂಬಿಕೆಯರ ಮಗನು. ಪ್ರಸಿದ್ಧ ಜೈನ ಮುನಿಯಾದ ಮಲಧಾರಿ ಸ್ವಾಮಿಯ ಶಿಷ್ಯನಾಗಿದ್ದನು. ಈತನು ರಾಜ್ಯಾಡಳಿತದಲ್ಲಿ, ರಾಜ್ಯ ಘಟನೆಯ ನಿರ್ಮಾಣದಲ್ಲಿ ಕುಶಲನಾಗಿದ್ದನು. ಶ್ರವಣಬೆಳ್ಗೊಳದಲ್ಲಿ 24

ಜಿನಮಂದಿರಗಳನ್ನು ಕಟ್ಟಿಸಿದನು. ಹುಲ್ಲನಿಗೆ ಭವ್ಯ ಚೂಡಾಮಣಿ ಎಂಬ ಬಿರುದಿತ್ತು. ಹೊಯ್ಸಳ ಚಕ್ರವರ್ತಿಗಳು ಈತನಿಗೆ ಹಲವು ಗ್ರಾಮಗಳನ್ನು ದಾನವಾಗಿ ಕೊಟ್ಟರು ಎಂಬುದಾಗಿ ಶ್ರವಣಬೆಳ್ಗೊಳದ ಶಾಸನವು ತಿಳಿಸುತ್ತದೆ. ಈ ಹುಲ್ಲನಿಂದಲೇ ಈ ಗ್ರಾಮಕ್ಕೆ "ಹುಲ್ಲನ ಹಳ್ಳಿ" ಎಂಬ ಹೆಸರು ಬಂದಿರಬೇಕೆಂದು ಊಹಿಸಲು ಅವಕಾಶವಿದೆ.

ಗುಂಡಲಪೇಟೆ ಶಾಸನ ಸಂ. 17, ತೆರಕಣಾಂಬಿ ಶಾಸನ ಸಂ. 113, ಹುಲ್ಲಹಳ್ಳಿ ಮತ್ತು ಕಣೇನೂರು ಶಾಸನಗಳೂ (ಸಂ. 145, 146) "ಹುಲ್ಲನ ಹಳ್ಳಿ" ಎಂದೇ ಹೆಸರಿಸುತ್ತವೆ.

ಹೊಯ್ಸಳ ಚಕ್ರವರ್ತಿಗಳಾದ ವಿಷ್ಣುವರ್ಧನನ ಕಾಲದಲ್ಲಿ ಹುಲ್ಲಹಳ್ಳಿಯ ಶ್ರೀವರದರಾಜ ಸ್ವಾಮಿದೇವಾಲಯದ ನಿರ್ಮಾಣವೂ ಮತ್ತು ಮೂರನೇ ವೀರಬಲ್ಲಾಳನು ಈ ದೇವಾಲಯಕ್ಕೆ ಕೇತಮ್ಮ ಹಳ್ಳಿಯನ್ನು ದಾನ ನೀಡಿರುವುದೂ, ತಮ್ಮ ಸಾಮ್ರಾಜ್ಯದ ಸೇವೆಯನ್ನು ನಿಷ್ಠೆಯಿಂದ ಮಾಡಿದ "ಹುಲ್ಲ'ನ ಊರಾಗಿರುವುದೇ ಮುಖ್ಯ ಕಾರಣವಿರಬಹುದು. ಈ ಪ್ರಸಿದ್ಧ ಹುಲ್ಲನಿಂದಲೇ ಈ ಊರು "ಹುಲ್ಲನ ಹಳ್ಳಿ" ಯಾಗಿದೆ ಎಂದು ತಿಳಿಯಬಹುದು. ಇಲ್ಲಿನ ಸ್ಥಳ ಮಾಹಿತಿಯ ಪ್ರಕಾರ "ಹುಲ್ಲ"ನೆಂಬ ಪಾಳೆಯಗಾರ ಇದ್ದನೆಂದೂ ತಿಳಿದು ಬರುತ್ತದೆ. ಈ ಹುಲ್ಲನೇ ಜೈನನಾಗಿದ್ದು ಹೊಯ್ಸಳ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸಿರಬಹುದು. ಹುಲ್ಲನಹಳ್ಳಿ ಎಂಬ ಹೆಸರು ಒಂದು ಸಾವಿರ ವರ್ಷಗಳಷ್ಟು ಹಳೆಯದು.

## 7. ಹುಲ್ಲಹಳ್ಳಿ

"ಹುಲ್ಲಹಳ್ಳಿ" ಎಂಬ ಹೆಸರು "ತೃಣಪುರಿ" ಎಂಬ ಸಂಸ್ಕೃತ ಶಬ್ದದ ಕನ್ನಡರೂಪವೆಂದು ಹೇಳುತ್ತಾರೆ. 'ಹುಲ್ಲನಹಳ್ಳಿ' ಎಂಬುದರಲ್ಲಿ 'ನ' ಅಕ್ಷರ ಬಿಟ್ಟು ಹೋಗಿ 'ಹುಲ್ಲಹಳ್ಳಿ' ಆಗಿದೆ ಎಂದು ಶಾಸನಗಳನ್ನು ಗಮನಿಸಿದಾಗ ತಿಳಿದು ಬರುತ್ತದೆ. ಹರಿಣಪುರವೆಂದು ಪ್ರಸಿದ್ಧವಾಗಿದ್ದ ಈ ಊರು ಹುಲ್ಲೆ (ಹರಿಣ) ಹಳ್ಳಿಯಾಗಿ ನಂತರದ ದಿನಗಳಲ್ಲಿ ಹುಲ್ಲೆ ಎಂಬುದು ಹುಲ್ಲವಾಗಿ ಹುಲ್ಲಹಳ್ಳಿಯಾಗಿರಬಹುದು ಎಂದೂ ಊಹಿಸಲು ಅವಕಾಶವಿದೆ.

ಶ್ರೀ ಶಾಂತ ಮಲ್ಲಿಕಾರ್ಜುನ ವಿರಕ್ತ ಮಠ ಮಠಾಧೀಶರಾದ ಶ್ರೀ ಸದಾಶಿವಸ್ವಾಮಿಗಳು

ಶೂನ್ಯ ಸಿಂಹಾಸನಾ ಪರಂಪರೆಯ ಚಿತ್ರದುರ್ಗದ ಮುರಿಗೆ ಮಠದ ಹೊರನೆ



ಶ್ರೀ ಶಾಂತಮಲ್ಲಿಕಾರ್ಜುನ ವಿರಕ್ತ ಮಠದ ಮಠಾಧಿಪತಿ
ಶತಾಯುಷಿಗಳಾಗಿದ್ದ ಶ್ರೀ ಶ್ರೀ ಶ್ರೀ ಚನ್ನಮಲ್ಲಿಕಾರ್ಜುನ ದೇಶಿಕರು

# ಶ್ರೀ ಶಾಂತಮಲ್ಲಿಕಾರ್ಜುನ ವಿರಕ್ತ ಮಠ

ಶರಣ ಪ್ರೇಮಿ ಮಹೇಶ್ವರಂ ಸಕಲ ರಕ್ಷಾಮೂರ್ತಿ ಮಾಹೇಶ್ವರಂ
ಗುರು ಲಿಂಗಾಸ್ಯ ಮಹೇಶ್ವರಂ ಭಸಿತ ರುದ್ರಾಕ್ಷಾಂಗಿ ಮಾಹೇಶ್ವರಂ
ಹರ ಪೂಜಾರ್ಥಿ ಮಹೇಶ್ವರಂ ಜನನ ಜಾಡ್ಯಚ್ಛೇದ ಮಾಹೇಶ್ವರಂ
ಗುರು ಲಿಂಗಾಂಗಿ ಮಹೇಶ್ವರಂ ಗುರುವಲಾ ಶ್ರೀ ಶಾಂತಮಲ್ಲೇಶ್ವರಾ||
(ಅಷ್ಟಾವರಣ ಮಣಿದರ್ಪಣ ಶತಕ-ಶ್ರೀಚನ್ನವೀರಾರ್ಯ)

ಹುಲ್ಲಹಳ್ಳಿಯಲ್ಲಿ ಪವಿತ್ರ ಕಪಿಲಾ ನದಿಯ ಬಲ ದಂಡೆಯ ಮೇಲೆ ಶೋಭಾಯಮಾನವಾಗಿ ಗೋಚರಿಸುತ್ತಿರುವ 'ಶ್ರೀಶಾಂತ ಮಲ್ಲಿಕಾರ್ಜುನ ವಿರಕ್ತ ಮಠವು' ಸುಮಾರು ಏಳುನೂರು ವರ್ಷಗಳಿಂದಲೂ ವೀರಶೈವ ಧರ್ಮದ ಉಳಿವಿಗೆ, ಬೆಳವಣಿಗೆಗೆ ಶ್ರಮಿಸುತ್ತಾ ಬಂದಿದೆ. ಹುಲ್ಲಹಳ್ಳಿಯ ನಾಡ ದೊರೆಗಳ ಗುರುಗಳನ್ನೂ, ಶ್ರೇಷ್ಠ ಶಿವಶರಣರು ಮತ್ತು ಕವಿಪುಂಗವರನ್ನೂ ಮಠಾಧಿಕಾರಿಗಳನ್ನಾಗಿ ಪಡೆದಿದ್ದ ಈ ಮಹಾ ಮಠವು ಕರ್ನಾಟಕದ ಇತಿಹಾಸದಲ್ಲಿ ಒಂದು ಅತ್ಯಂತ ಪ್ರಮುಖ ಸ್ಥಾನವನ್ನುಗಳಿಸಿಕೊಂಡಿದೆ.

ಹನ್ನೆರಡನೆಯ ಶತಮಾನ, ವೀರ ಶೈವ ಧರ್ಮದ ಸುವರ್ಣಯುಗ. ಅಲ್ಲಮ್ಮ, ಬಸವ, ಅಕ್ಕಮಹಾದೇವಿ ಮೊದಲಾದವರ ದಿವ್ಯ ಭವ್ಯ ಜೀವನವನ್ನು ಕಂಡ ಆಧ್ಯಾತ್ಮಿಕ ಯುಗ. ಜಾತಿ-ಕಸುಬು, ಸಿರಿವಂತ–ಬಡವ, ಪುರುಷ–ಸ್ತ್ರೀ, ಇವುಗಳಲ್ಲಿ ಸಮಾನತೆಯನ್ನು ಸಾಧಿಸಿದ ಕ್ರಾಂತಿಯುಗ. ಭೂಕೈಲಾಸವೆಂಬ ಹೆಸರಿನಿಂದ ಪ್ರಸಿದ್ಧಿ ಪಡೆದ ಕಲ್ಯಾಣದ ಉದಯ. ಇಂತಹ ಹಲವು ಸಾಧನೆಗಳ ಕೀರ್ತಿಯ ಶಿಖರವನ್ನು ಮುಟ್ಟಿ ಬಸವ ಧರ್ಮವನ್ನು ಮೈಗೂಡಿಸಿಕೊಂಡಿದ್ದ ಕರ್ನಾಟಕದ ಅಂದಿನ ಸಮಾಜವು ಬಸವಣ್ಣನವರ ಸಮಾಜೋದ್ಧಾರದ ಮಹಾಪ್ರಯೋಗವಾದ ವರ್ಣ ಸಂಕರವನ್ನು ಅರಗಿಸಿಕೊಳ್ಳಲಾಗಲಿಲ್ಲ. ಅಗ್ರ ಜನ್ಮದ ಮಧುವರಸ ಮತ್ತು ಅಂತ್ಯಜ ಹರಳಯ್ಯ ಉಗ್ರ ಶಿಕ್ಷೆಗೆ ಒಳಗಾದರು. ಕಲ್ಯಾಣದಲ್ಲಿ ಜಾತಿ ವೈಷಮ್ಯದ ದಳ್ಳುರಿ ಹಬ್ಬಿತು. ಹಲವು ಕಡೆ ರಕ್ತಪಾತಗಳೂ ಸಂಭವಿಸಿದವು.

ಕಲ್ಯಾಣದ ದೊರೆ ಬಿಜ್ಜಳನ ಕೊಲೆಯಾಯಿತು. ಬಸವಣ್ಣನವರು ತಮ್ಮ ನವನವೀನ ಕರ್ನಾಟಕದ ಮಹಾನ್ ಕಲ್ಪನೆ ತಮ್ಮೆದುರೇ ನುಚ್ಚುನೂರಾದುದನ್ನು ಕಂಡು, ಮನನೊಂದು ತಮ್ಮ ಅವತಾರವು ಮುಗಿಯಿತು ಎಂದು ತಿಳಿದು ಕಪ್ಪಡಿಯ ಸಂಗಮದಲ್ಲಿ ಜಲ ಸಮಾಧಿಯನ್ನು ಹೊಂದಿ ಪರಮೇಶ್ವರನ ಸನ್ನಿಧಿಯನ್ನು ಸೇರಿದರು.

ಬಸವಣ್ಣನವರ ಅನುಯಾಯಿಗಳು ಮತ್ತು ಶಿವ ಶರಣರು ಕಲ್ಯಾಣದಿಂದ ಕಾಲ್ತೆಗೆದು ಕರ್ನಾಟಕದ ಮೂಲೆ ಮೂಲೆಗಳತ್ತ ಧಾವಿಸಿದರು. ಹೀಗೆ ಕಲ್ಯಾಣದಿಂದ ಹೊರಟು ಬಂದ ಸಾವಿರಾರು ಶರಣರಲ್ಲಿ ರುದ್ರಮುನಿ ಶಿವಯೋಗಿ"ಯೂ ಒಬ್ಬರು. ಇವರು ಕನ್ನಡ ನಾಡಿನ ಹಲವಾರು ಸ್ಥಳಗಳನ್ನು ಸಂದರ್ಶಿಸಿ ಬರುತ್ತಿರಲು ಶ್ರೀಮದ್ಗರಳಪುರ (ನಂಜನಗೂಡು) ಕ್ಷೇತ್ರದ ಪಶ್ಚಿಮ ಭಾಗದಲ್ಲಿರುವ ತೃಣಪುರಿಗೆ (ಹುಲ್ಲ ಹಳ್ಳಿಗೆ, ಆಗಮಿಸಿದರು.

ಕಲ್ಯಾಣದ ಜಾತೀಯತೆಯ ಮತ್ತು ಮತಾಂಧತೆಯ ಅಗ್ನಿ ಮರ್ತುಲದಿಂದ ಹೊರಬಂದ ರುದ್ರಮುನಿ ಶಿವಯೋಗಿಗಳಿಗೆ ತೃಣಪುರಿಯು ತಂಪಿನ ಧಾರೆಯನ್ನೆರೆಯಿತು. ಜೈನ, ಶೈವ ಮತ್ತು ವೈಷ್ಣವ ಧರ್ಮಗಳ ನೆಲೆಬೀಡಾಗಿ ಶ್ರೀವರದರಾಜಸ್ವಾಮಿ ಮತ್ತು ಕಪಿಲ ಮಲ್ಲಿಕಾರ್ಜುನ ಸ್ವಾಮಿಯವರ ಬೃಹತ್ ದೇವಾಲಯಗಳನ್ನು ಹೊಂದಿ, ತನ್ನ ಸುತ್ತಲೂ ಹಸಿರು ವನರಾಜಿಯನ್ನು ಹರಡಿ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದ್ದ ತೃಣಪುರಿಯನ್ನು ರುದ್ರ ಮುನಿಗಳು ಶಾಂತಮಲ್ಲಿಕಾರ್ಜುನ ಕ್ಷೇತ್ರವೆಂದು ಕರೆದರು. ತಮ್ಮ ಮುಂದಿನ ಜೀವಿತಾವಧಿಯನ್ನು ಕಳೆಯಲು ಇದೇ ಸೂಕ್ತ ಸ್ಥಳವೆಂದು ಭಾವಿಸಿ ಇಲ್ಲಿಯೇ ನೆಲೆ ನಿಂತರು. ತೃಣ ಪುರಿ ಮತ್ತು ಸುತ್ತಲ ಪ್ರದೇಶಗಳಲ್ಲಿ ಬಸವ ದೀವಿಗೆಯನ್ನು ಬೆಳಗಿದರು.

ಮುಂದಿನ ದಿನಗಳಲ್ಲಿ ಮಹದೇಶ್ವರ ದೇವರು ಎಂಬುವವರು ರುದ್ರಮುನಿ ಶಿವ ಯೋಗಿಗಳ ಕಾರ್ಯವನ್ನು ಮುಂದುವರಿಸಿದರು. ಮಹದೇಶ್ವರ ದೇವರು ತಮ್ಮ ಇಷ್ಟಲಿಂಗ ಪೂಜಾ ವಿಶೇಷದ ಸಮಯದಲ್ಲಿ ಅಮೂಲ್ಯ ರತ್ನವಾದ ಪಚ್ಚೆ ಕಂತೆಯನ್ನು ಅಂದರೆ ಪಚ್ಚೆಗಳಿಂದಲೇ ನೇಯ್ದ ಉಡುಪನ್ನು ಧರಿಸುತ್ತಿದ್ದರು. ಆದ್ದರಿಂದ ಇವರನ್ನು ಭಕ್ತಾದಿಗಳು ಪಚ್ಚೆಕಂತೆ ಶಿವಯೋಗಿಗಳು ಎಂದೇ ಕರೆಯುತ್ತಿದ್ದರು. ಇವರು ಇದೇ ಹೆಸರಿನಲ್ಲಿ

ಪ್ರಸಿದ್ಧಿಯನ್ನು ಪಡೆದು ತಮ್ಮ ಜೀವನದ ಅಂತ್ಯವನ್ನು ಹೊಂದಿದರು. ನಂತರ ಈ ಕ್ಷೇತ್ರಕ್ಕೆ ಚೆನ್ನವೀರಾರ್ಯರೆಂಬ ತಪೋಧನರ ಆಗಮನವಾಯಿತು.

ಬಂದಾ ತೃಣ ಪುರಮಂ ಕಡು
ಚಂದದೊಳ್ ಪೊಕ್ಕು ತತ್ಪುರದಾಧೀಶ್ವರ ಬಸ
ವೇಂದ್ರ ಸುಕುಮಾರ ವೀರಮ
ಹೇಂದ್ರನ ಘನ ಸಭೆಯು ಪೊಕ್ಕನಾ ಚೆನ್ನಾರ್ಯಂ
—ಶಿವಲಿಂಗ ಚಾರಿತ್ರ–೩–೨

ತೃಣಪುರಿಯಲ್ಲಿ ಕೀರ್ತನ ಮತ್ತು ಪುರಾಣ ಪಠನಗಳಿಂದ ಚೆನ್ನಾ ವೀರಾರ್ಯರ ನಿತ್ಯವಿಧಿ ಸಾಗುತ್ತಿತ್ತು. ಈ ಅಪೂರ್ವ ವ್ಯಕ್ತಿಯು ತೇಜಸ್ಸು, ವಾಗ್ಝರಿ ಮತ್ತು ವಿದ್ಯಾ ಪ್ರೌಢಿಮೆಯನ್ನು ಕಂಡ ಅಂದಿನ ತೃಣ ಪುರಾಧೀಶ್ವರ ಬಸವೇಂದ್ರ ಅರಸನ ಮಗನಾದ ವೀರ ಮಹೇಂದ್ರನೆಂಬ ಅರಸನು ತನ್ನ ಸಭೆಗೆ ಬರಮಾಡಿಕೊಂಡನು. ಆ ವಿದ್ವತ್ ಸಭೆಯಲ್ಲಿ ಜೈನ, ವೈಷ್ಣವ ಮತ್ತು ವೀರಶೈವ ಪಂಡಿತರು ಅಲಂಕರಿಸಿದ್ದರು. ಕನ್ನಡ ಮತ್ತು ಸಂಸ್ಕೃತ ದ್ವಿಭಾಷಾ ಪಂಡಿತರಾಗಿದ್ದ ಚೆನ್ನವೀರಾರ್ಯರು ಆ ಸಭೆಯಲ್ಲಿ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಮಂಡಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಅರಸನಾದ ವೀರಮಹೇಂದ್ರನು ಚೆನ್ನವೀರಾರ್ಯರ ಪೂರ್ವೇತಿಹಾಸವನ್ನು ಮತ್ತು ತೃಣ ಪುರಿಗೆ ಆಗಮಿಸಿದ ಉದ್ದೇಶವನ್ನೂ ತಿಳಿಯಲಿಚ್ಛಿಸಿದನು.

ಚೆನ್ನವೀರಾರ್ಯರು ರಾಜನ ಮಾತಿಗೆ ಸಂತೋಷವನ್ನು ವ್ಯಕ್ತಪಡಿಸಿ ತಮ್ಮ ಮುನ್ನಿನ ವೃತ್ತಾಂತವನ್ನು ಅರುಹಿದರು.

ಸುಪ್ರಸಿದ್ಧವಾದ ಪೆನುಗೊಂಡೆ ಎಂಬ ದೇಶದಲ್ಲಿ ಅಪ್ಪೆಯಕೆರೆ ಎಂಬ ಪೊಳಲು. ಶಿವಲಿಂಗಾರ್ಯನೆಂಬ ಯತಿ ಹಲವು ಶಿಷ್ಯರಿಂದೊಡಗೂಡಿ ವಿರಾಜಮಾನನಾಗಿ ಬೆಳಗುತ್ತಿದ್ದನು. ಅಪ್ಪೆಯ ಕೆರೆ ಗುರುಕುಲವಾಗಿ ಹಲವಾರು ವಿದ್ಯಾರ್ಥಿಗಳನ್ನು ಆಕರ್ಷಿಸಿತ್ತು. ಒಮ್ಮೆ ಶಿವಲಿಂಗಾರ್ಯನು ಪತ್ನೀ ಪುತ್ರ ಶಿಷ್ಯರಾದಿಯಾಗಿ ಯಾತ್ರಾರ್ಥವಾಗಿ ಸಂಚಾರವನ್ನು ಕೈಗೊಂಡನು. ಹಲವು ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಭಕ್ತಿ ಜ್ಞಾನ ವೈರಾಗ್ಯ ಮಾರ್ಗವನ್ನು **ಬೋಧಿಸುತ್ತಾ**, ಶಿವಪುರಾಣಾರ್ಥವನ್ನು ವಿವರಿಸುತ್ತಾ ತಮ್ಮ ಅಪ್ಪೆಯ ಕೆರೆಗೆ

ಹಿಂದಿರುಗಿದನು. ಸದಾಚಾರ ಶೀಲ ಸಂಪನ್ನನಾದ ಶಿವಲಿಂಗಾರ್ಯನು ತನ್ನ ಅಂತ್ಯ ದಿನವನ್ನು ಗಮನಿಸಿ ತನ್ನ ಮಗನಾದ ವೀರಣಾರ್ಯನಿಗೆ ಗುರುಪಟ್ಟ ವನ್ನು ಕಟ್ಟಿ ಲಿಂಗೈಕ್ಯನಾದನು.

ವೀರಣಾರ್ಯನೂ ಸಹಾ ಸಕಲ ವಿದ್ಯಾ ಪಾರಂಗತನೂ ಮತ್ತು ತಪೋನಿಷ್ಠನೂ ಆಗಿದ್ದನು. ಈತನೂ ಕೂಡ ಒಂದೆಡೆ ನಿಲ್ಲದೆ ಯಾತ್ರೆ ಯನ್ನು ಮುಂದುವರಿಸಿ ಬಿಜ್ಜಾವರವನ್ನು(ತಲಕಾಡು ಬಳಿ?) ತಲುಪಿದನು. ಇಲ್ಲಿ ಗುರು ಶಿಷ್ಯರಿಗೆ ವಾಗ್ವಾದ ಪ್ರಾರಂಭವಾಯಿತು. ಕಿರುಕುಳ ದೈವದ ಪೂಜೆಯು ವ್ಯಕ್ತಿಯ ಆತ್ಮೋನ್ನತಿಗೆ ಅಡ್ಡಿಯನ್ನುಂಟುಮಾಡುತ್ತದೆ. ಕಿರುಕುಳ ದೈವವನ್ನು ಒಲಿಸಿಕೊಳ್ಳುವುದರಿಂದ ಉಂಟಾಗುವ ಲಾಭ ಕ್ಷಣಿಕ. ಅದರಿಂದ ಅಜ್ಞಾನಿಗಳನ್ನು ಮೆಚ್ಚಿಸಬಹುದೇ ಹೊರತು, ಪರಾತ್ಪರ ತತ್ವ ವನ್ನಾಗಲೀ ಮತ್ತು ಪರಬ್ರಹ್ಮನನ್ನಾಗಲಿ ಅರಿಯಲು ಸಾಧ್ಯವಿಲ್ಲವೆಂದು ವೀರ ಣಾರ್ಯನು ಶಿಷ್ಯರಿಗೆ ಬೋಧಿಸಿದನು. ಕೆಲವು ಶಿಷ್ಯರು ಕಿರುಕುಳ ದೈವ ವನ್ನು ಒಲಿಸಿಕೊಂಡು ಅನೇಕ ಪವಾಡಗಳನ್ನು ಪ್ರದರ್ಶಿಸಲು ಸಿದ್ಧರಿದ್ದರು. ಅದೇ ತಮ್ಮ ಬಹು ದೊಡ್ಡ ಸಾಧನೆಯೆಂದು ಭಾವಿಸಿದ್ದ ಅವರಿಗೆ ತಮ್ಮ ಗುರುವಿನ ಉಪದೇಶ ರುಚಿಸಲಿಲ್ಲ. ಇದನ್ನು ಮನಗಂಡ ವೀರಣಾರ್ಯನು, ಇಂತಹ ಮೂರ್ಖ ಶಿಷ್ಯರ ಬಳಿ ಇರುವುದಕ್ಕಿಂತ ಏಕಾಂಗಿಯಾಗಿರುವುದೇ ಉತ್ತಮವೆಂದು ಭಾವಿಸಿ ತಾನೊಬ್ಬನೇ ಯಾತ್ರೆಯನ್ನು ಮುಂದುವರಿಸಿ ದನು.ಸಂಚರಿಸುತ್ತಾ ಪದಿನಾಡನ್ನು (ಯಳಂದೂರು) ಸೇರಿದನು. ಪದಿನಾಡು ರಣಧೀರ ಕಂಠೀರವ ನರಸಿಂಹರಾಜ ಒಡೆಯರ ವಂಶಸ್ಥರ ಪಾಳೆಯ ಪಟ್ಟಾ ಗಿತ್ತು. ಕೆಲವು ದಿನ ಅಲ್ಲಿ ತಂಗಿದ್ದು ನಂತರ ಉಯ್ಯಂಬಳ್ಳಿಗೆ ಆಗಮಿಸಿ ದನು. ಅಲ್ಲಿನ ದೊರೆಯಾದ ಶಿವಪೂಜೆಯರಸನೆಂಬುವನು ವೀರಣಾರ್ಯ ನನ್ನು ಬಹು ಗೌರವದಿಂದ ಸನ್ಮಾನಿಸಿ ಸಕಲ ಸೌಲಭ್ಯಗಳನ್ನೂ ಒದಗಿಸಿ ಕೊಟ್ಟು ಅಲ್ಲಿಯೇ ನೆಲೆ ನಿಲ್ಲುವಂತೆ ಮಾಡಿದನು.

ವೀರಣಾರ್ಯನ ಚಾರಿತ್ರ್ಯವನ್ನು ಮೆಚ್ಚಿ ಉಯ್ಯಂಬಳ್ಳಿಯ ಮಠ ಸ್ಥರ ಕನ್ಯೆ ನಂಜಾಂಬಿಕೆಯನ್ನು ಕೊಟ್ಟು ವಿವಾಹವನ್ನೂ ಮಾಡಲಾಯಿತು. ವೀರಣಾರ್ಯ ಮತ್ತು ನಂಜಾಂಬಿಕೆಯರ ಸುಖದಾಂಪತ್ಯದಿಂದ ಚೆನ್ನವೀರದೇವನೆಂಬ ಮಗನ ಜನನವಾಯಿತು. ಆ ಚೆನ್ನವೀರದೇವನೇ

ನಾನು–ಎಂಬುದಾಗಿ ವೀರಮಹೇಂದ್ರನಿಗೆ ತಿಳಿಸಿದರು. ವೃತ್ತಾಂತವನ್ನು ಮುಂದುವರಿಸಿ ವೀರಣಾರ್ಯನು ಪತ್ನೀ ಪುತ್ರ ಸಮೇತನಾಗಿ ಬೆಂಗಳೂರಿಗೆ ಆಗಮಿಸಿದನು.

ಬೆಂಗಳೂರಿನ ಒಡೆಯ ಕೆಂಪೇಗೌಡನು ವೀರಣಾರ್ಯನನ್ನು ಮೊದಲೇ ಬಲ್ಲವನಾಗಿ ಆತನನ್ನು ಆದರಿಸಿ ಸತ್ಕರಿಸಿದನು. ವೀರಣಾರ್ಯನು ಬೆಂಗಳೂರಿನಲ್ಲೇ ನೆಲೆಸಿರಲು ಈತನ ಮಗನಾದ ಚೆನ್ನವೀರಾರ್ಯನು ಬೆಳೆದು ವಿದ್ಯಾ ಸಂಪನ್ನನಾದನು. ಪ್ರೌಢ ಬಸವಾರ್ಯನೆಂಬುವರು ಒಡೆಯ ಕೆಂಪೇಗೌಡನ ಸಹಾಯ ಮತ್ತು ಅನುಮತಿಯನ್ನು ಪಡೆದು ಚೆನ್ನವೀರ ದೇವನಿಗೆ ತನ್ನ ಮಗಳಾದ ಗಿರಿಜಾಂಬಿಕಾ ಎಂಬ ಸುಂದರ ಕನ್ಯೆಯನ್ನು ಕೊಟ್ಟು ವಿವಾಹವನ್ನು ಮಾಡಿದರು. ಕಾಲವು ಉರುಳಿತು. ವೀರಣಾರ್ಯನು ಕೈಲಾಸ ವಾಸಿಯಾದನು.

ಚೆನ್ನವೀರಾರ್ಯನಾದ ನಾನು ಬೆಂಗಳೂರಿನಿಂದ ಬಿಡುಗಡೆ ಹೊಂದಿ ಮೈಸೂರು ಚಾಮರಾಜೇಂದ್ರ ಒಡೆಯರ (ಕ್ರಿ. ಶ. 1618) ಆಸ್ಥಾನ ದಲ್ಲಿ ರಾಮದೀಕ್ಷಿತನೆಂಬ ವಿದ್ವಾಂಸನನ್ನು ವಾದದಲ್ಲಿ ಸೋಲಿಸಿ, ಒಡೆಯ ರಿಂದ ಸನ್ಮಾನಿತನಾಗಿ ತಮ್ಮ ತೃಣಪುರಿಗೆ (ಹುಲ್ಲಹಳ್ಳಿಗೆ) ಆಗಮಿಸಿದ್ದೇನೆ. ವೀರ ಮಹೇಂದ್ರರ ಅಪ್ಪಣೆಯಾದರೆ ಇಲ್ಲಿಯೇ ನೆಲೆಸಿ ಕಪಿಲ ಮಲ್ಲಿಕಾರ್ಜುನ ಸೇವೆಯನ್ನು ಮಾಡಿಕೊಂಡಿರುತ್ತೇನೆಂದು ಚೆನ್ನವೀರಾರ್ಯರು ಕೇಳಿ ಕೊಂಡರು. ಅರಸನಾದ ವೀರಮಹೇಂದ್ರನು, ಈ ತಪಸ್ವಿಗಳ ಇರುವಿಕೆಯು ತೃಣಪುರಿಯ ಭಾಗ್ಯವೆಂದು ಭಾವಿಸಿ, ಇವರಿಗೆ ನಗರದ ಉತ್ತರ ಭಾಗದಲ್ಲಿ ಈ ಕಪಿಲಾನದಿಯ ಬಲದಂಡೆಯ ಮೇಲ್ಭಾಗದಲ್ಲಿ ಲಿಂಗಾಂಕ ಭೂಭಾಗ ವನ್ನು ದಾನ ಮಾಡಿ "ಸರಸ ಕವಿಕರ್ಣಾಟ ಚಕ್ರೇಶ್ವರ"–ಎಂಬ ಬಿರುದ ನ್ನಿತ್ತು, ಪಚ್ಚೆ ಕಂತೆ ಶಿವಯೋಗಿಗಳು ಬಿಟ್ಟು ಹೋಗಿದ್ದ ಮೌಲ್ಯಗಳನ್ನು ಮುಂದುವರಿಸುವಂತೆ ವಿನಂತಿಸಿ ಕೊಂಡನು. ಚೆನ್ನವೀರಾರ್ಯರು ಒಂದು ಪರ್ಣಶಾಲೆಯನ್ನು ನಿರ್ಮಿಸಿಕೊಂಡು ಪತ್ನೀ ಸಮೇತರಾಗಿ ಇರತೊಡಗಿ ದರು.

ಚೆನ್ನವೀರಾರ್ಯರು ತಮ್ಮ ನಿತ್ಯ ವಿಧಿಯಾದ ಶಿವತತ್ವ ಸಂಕೀ ರ್ತನಾ ಕಾರ್ಯವಾಗಿ ಸಂಚರಿಸುತ್ತಿರುವ ಸಮಯದಲ್ಲಿ ಗುರುಪುರದ

ಶಂಭುಲಿಂಗೇಗೌಡನು. ಕೊಡಗಾಲತ್ತೂರಿಗೆ ಬಂದಾಗ ಅಲ್ಲಿಯೇ ಆತನಿಗೆ ಕಾಣಿಸಿಕೊಳ್ಳಲು ಗೌಡನಿಂದ ಸತ್ಕರಿಸಲ್ಪಟ್ಟರು (ಚನ್ನವೀರಾರ್ಯರು ಕೊಡಗಾಲತ್ತೂರಿನಲ್ಲೂ ಒಂದು ವೀರಶೈವ ಮಠವನ್ನು ಸ್ಥಾಪಿಸಿರುವರೆಂದು ತಿಳಿದು ಬರುತ್ತದೆ.) ಶಂಭುಲಿಂಗೇಗೌಡನು ಇವರಿಗೆ, ಹುಲ್ಲಹಳ್ಳಿಯಲ್ಲಿ ಒಂದು ಮಠವನ್ನು ಕಟ್ಟಿಕೊಳ್ಳಲೆಂದು ಅನೇಕ ಬೆಲೆ ಬಾಳುವ ಮರದ ಸಾಮಗ್ರಿಗಳನ್ನು ಒದಗಿಸಿಕೊಟ್ಟನು. ಚೆನ್ನವೀರಾರ್ಯರು ಮೂಲಲಿಂಗಾಂಕದ ಭಾಗದ ಸುತ್ತಲೂ ಮಹಾಸ್ಮಶದ ಭವನವನ್ನು ನಿರ್ಮಿಸಿದರು. ಈ ಮಠದ ನಿರ್ಮಾಣ ಕಾಲ ಸುಮಾರು ಕ್ರಿ. ಶ. 1618 ಎಂದು ತಿಳಿದು ಬರುತ್ತದೆ.

ಮುಂದೆ ಹುಣಸಿನ ಹಾಳಿನಲ್ಲಿ ಚೆನ್ನವೀರಾರ್ಯರು ಜ್ಞಾನಕ್ರಿಯಾ ಸಮನ್ವಯವನ್ನು ಸಾರಿ, ಶಿವತತ್ವವನ್ನು ಬೋಧಿಸುತ್ತಿರಲು ಅಲ್ಲಿನ ದೊರೆಯಾದ ನಂಜರಾಜೇಂದ್ರನು ಇವರಿಗೆ ಗದ್ದೆಯನ್ನು ದಾನವಾಗಿ ನೀಡಿ, ಪ್ರತಿ ಗೌರಿ ಹಬ್ಬಕ್ಕೆ ಬಾಳೆಯ ಗೊನೆ ಮತ್ತು ತೆಂಗಿನ ಕಾಯಿಗಳನ್ನು ಒದಗಿಸುತ್ತಿದ್ದನು.

ಹುಲ್ಲಹಳ್ಳಿಯ ಮಠದಲ್ಲಿ ಚೆನ್ನವೀರಾರ್ಯರಿಗೆ ಪತ್ನಿ ಗಿರಿಜಾಂಬಿಕೆಯ ಗರ್ಭದಲ್ಲಿ ಒಬ್ಬ ಸುಪುತ್ರನ ಜನನವಾಯಿತು. ಈ ಮಗುವಿಗೆ ತಾವು ವಾಸಿಸುವ ಕ್ಷೇತ್ರದ ದೆಸೆಯಾಗಿ ಶಾಂತವೀರಾಚಾರ್ಯನೆಂದು ನಾಮಕರಣವನ್ನು ಮಾಡಿದರು.

ಚೆನ್ನ ವೀರಾರ್ಯರು 'ಅಷ್ಟಾವರಣ ಮಣಿದರ್ಪಣ ಶತಕ' ಮತ್ತು 'ಈಶ್ವರ ಓಲಗ ಶತಕ'ವನ್ನು ರಚಿಸಿ ಶಿವತತ್ವ ರಹಸ್ಯಗಳನ್ನು ತಮ್ಮ ಶಿಷ್ಯವರ್ಗಕ್ಕೆ ಬೋಧಿಸಿದರು. ತಮ್ಮ ಮಗನಾದ ಶಾಂತವೀರನಿಗೆ ಸಕಲ ಶಾಸ್ತ್ರಗಳನ್ನೂ ಬೋಧಿಸಿ, ಹುಲ್ಲಹಳ್ಳಿಯ ಮಠವನ್ನೂ, ಗುರು ಪೀಠವನ್ನೂ ಒಪ್ಪಿಸಿ ಶಿವ ಸಾನ್ನಿಧ್ಯವನ್ನು ಸೇರಿದರು. ಶಾಂತವೀರನು ತೋಂಟದ ಸಿದ್ಧಲಿಂಗನ ಶಿಷ್ಯನಾದ ಬೋಳ್ಳ ಬಸವನ ಅನುಗ್ರಹವನ್ನೂ ಮತ್ತು ಕಟ್ಟಿಗೆಹಳ್ಳಿಗೆ ಹಳ್ಳಿದೇವನಿಂದ ಉನ್ನತ ಜ್ಞಾನವನ್ನೂ ಸಂಪಾದಿಸಿದನು. ಮುಂದಿನ ದಿನಗಳಲ್ಲಿ ಶಾಂತವೀರನು ಬ್ರಹ್ಮಚರ್ಯಾಶ್ರಮದಿಂದ ನೇರವಾಗಿ ಸಂನ್ಯಾಸಾಶ್ರಮವನ್ನು ಪಡೆದು ಶಾಂತವೀರಾಚಾರ್ಯರಾಗಿ ಹುಲ್ಲಹಳ್ಳಿಗೆ ಕಲಶಪ್ರಾಯರಾಗಿ ಶೋಭಿಸುತ್ತಿದ್ದರು. ಇವರು ತಮ್ಮ ಮುತ್ತಾತನೂ, ಮೂಲ

ಗುರುವೂ ಆದ ಶಿವಲಿಂಗಾರ್ಯರ ಜೀವನ ಚರಿತ್ರೆಯನ್ನು "ಶಿವಲಿಂಗ ಚಾರಿತ್ರ್ಯ" ಎಂಬ ಹೆಸರಿನಲ್ಲಿ ಬರೆದರು. ಅಲ್ಲದೇ ಸೌಂದರೇಶ್ವರ ಯಕ್ಷಗಾನ, ಶಿವಗಣ ಚಾರಿತ್ರ, ಶಿವಮಹತ್ವಸಾರ ಶಿಖಾಮಣಿ ಸಂಗ್ರಹ ಶತಕ, ಗಿರಿಜಾ ದೇವಿಯು ಸಂಕೀರ್ತನ ಎಂಬ ಗ್ರಂಥಗಳನ್ನೂ ಬರೆದರು. ಶಾಂತ ವೀರಾ ಚಾರ್ಯರು ತೃಣಪುರಾಧೀಶನ ರಾಜಗುರುವಾಗಿಯೂ ಮತ್ತು ತಮ್ಮ ಮಠ ದಲ್ಲಿ ಶಿಷ್ಯಗಣಂಗಳಿಗೆ ಶೈವಾಗಮಗಳನ್ನು ಬೋಧಿಸುತ್ತಲೂ ಇರುತ್ತಿದ್ದರು. ಇವರ ಶಿಷ್ಯತ್ವವನ್ನು ಬಯಸಿ ಬಂದವರಲ್ಲಿ ಗುರುಸಿದ್ಧ ಎಂಬುವನು ಪ್ರಮು ಖನು.

ಈ ಗುರುಸಿದ್ಧನು ದನುಗೂರಿನಲ್ಲಿ ಉದ್ದಾನ ಯೋಗೀಶ್ವರ ಪರಂಪರೆ ಯಲ್ಲಿ ಬಂದ ಸೋಮಶೇಖರ ಶಿವಯೋಗಿಯಿಂದ ಚಿಕ್ಕಂದಿನಲ್ಲಿ ದೀಕ್ಷೆಯನ್ನು ಪಡೆದು ಕುಂಭಪಲ್ಲಿಯ ಚಿದ್ಬಸವೇಶನಿಂದ ವಿದ್ಯಾವಂತನಾಗಿ, ತನ್ನ ಗುರುವಿನ ಅಪ್ಪಣೆಯನ್ನು ಪಡೆದು ಶಾಂತಮಲ್ಲಿಕಾರ್ಜುನ ಕ್ಷೇತ್ರದ (ಹುಲ್ಲಹಳ್ಳಿಯ) ಶಾಂತ ವೀರಾಚಾರ್ಯರರ ಬಳಿಗೆ ಬಂದು ಶಿಷ್ಯತ್ವವನ್ನು ಸ್ವೀಕರಿಸಿದನು. ಬಹುಕಾಲ ಗುರುಸೇವೆಯಲ್ಲಿಯೇ ನಿರತನಾಗಿದ್ದ ಈ ಗುರುಸಿದ್ಧನಿಗೆ "ಗುರು ಸಿದ್ಧದೇಶಿಕ" ಎಂಬ ಹೆಸರಿನಲ್ಲಿ ಶಾಂತವೀರಾಚಾರ್ಯರು ತಮ್ಮ ಮಠವನ್ನೂ ಗುರುಪೀಠವನ್ನೂ ವಹಿಸಿ ಸುಮಾರು ಕ್ರಿ. ಶ. 1630 ರಲ್ಲಿ ಶೂನ್ಯ ಸಿಂಹಾ ಸನಾ ಪರಂಪರೆಯ ಚಿತ್ರದುರ್ಗದ ಮುರಿಗೆ ಮಠಾಧಿಕಾರಿಯಾಗಿ, "ಶ್ರೀಮುರಿಗೆ ಶಾಂತವೀರಾಚಾರ್ಯ"ರೆಂದು ಪ್ರಸಿದ್ಧರಾದರು. ಹಾಗೂ ವೀರಶೈವ ಸಿದ್ಧಾಂತ ಸ್ಥಾಪನಾಚಾರ್ಯ, ಷಟ್‌ಸ್ಥಲ ಚಕ್ರವರ್ತಿ, ಮಾಯಾ ಕೋಲಾಹಲ, ವಿರಕ್ತ ಶಿಖಾಮಣಿ ಎಂದೂ ಖ್ಯಾತಿಗಳಿಸಿದರು.

ಶ್ರೀಶಾಂತವೀರಾಚಾರ್ಯರ ಶಿಷ್ಯಪರಂಪರೆಯಲ್ಲಿ, ಅನಿಮಿಷ ದೇವ ನನ್ನು ಕುರಿತು 'ರಾಜೇಂದ್ರವಿಜಯ'(ಹವಿಮ್ಮಾರ ಕಾವ್ಯ) ಎಂಬ ಗ್ರಂಥವನ್ನು ರಚಿಸಿದ ಗುಳೇದಗುಡ್ಡದ ಶ್ರೀ ಮುರಿಗೆ ದೇಶಿಕೇಂದ್ರರು ಪ್ರಮುಖರು. ಈ ಸತ್ಸಂಬಧವೇ ಶ್ರೀ ಶಾಂತವೀರಾಚಾರ್ಯರು ಚಿತ್ರದುರ್ಗದ ಮುರಿಗೆ ಮಠಾಧಿಪತಿಯಾಗಲು ಕಾರಣವಾಯಿತು. ಅಲ್ಲದೆ ಶ್ರೀಶಾಂತವೀರಾ ಚಾರ್ಯರು ಮೂಲ ಮುರಿಗೆ ಮಠದ ಶಾಖೆಯವರು ಎಂಬುದಾಗಿ ಡಾ|| ಎಂ. ಎಸ್. ಸುಂಕಾಪುರ್ ಅವರು ಗುರುತಿಸಿದ್ದಾರೆ.

ಶ್ರೀ ಗುರುಸಿದ್ಧದೇಶಿಕರು ಕರ್ನಾಟಕದ ಹಲವು ಸ್ಥಳಗಳಲ್ಲಿ ಸಂಚರಿಸಿ ಶಿವತತ್ವ ಸಾರವನ್ನು ಬೀರಿ, ಹುಲ್ಲಹಳ್ಳಿಗೆ ಹಿಂದಿರುಗಿ ಸಾಹಿತ್ಯ ಸೇವೆಯಲ್ಲಿ ತೊಡಗಿದರು. ಸುಮಾರು ಕ್ರಿ. ಶ. 1690 ರ ವೇಳೆಯಲ್ಲಿ ಚಿತ್ರದುರ್ಗದ ಮಠಾಧಿಪತಿಯಾಗಿದ್ದ ಶ್ರೀಮುರಿಗೆ ಮಹಾಂತ ಸ್ವಾಮಿಯವರು ಹುಲ್ಲಹಳ್ಳಿಯ ಗುರುಸಿದ್ಧ ದೇಶಿಕರನ್ನು ಗೌರವ ಪೂರ್ವಕವಾಗಿ ಬರಮಾಡಿಕೊಂಡು, ತಮ್ಮ ಉತ್ತರಾಧಿಪತ್ಯವನ್ನು ವಹಿಸಿಕೊಳ್ಳುವಂತೆ ಕೇಳಿಕೊಂಡರು. ಈಗಾಗಲೇ ಹುಲ್ಲಹಳ್ಳಿಯಲ್ಲಿ ಹಲವು ಶಿಷ್ಯಗಣಂಗಳನ್ನು ಗಳಿಸಿಕೊಂಡಿದ್ದ ಶ್ರೀ ಗುರುಸಿದ್ಧ ದೇಶಿಕರು ತಮ್ಮ ಶಾಂತಮಲ್ಲಿಕಾರ್ಜುನ ಕ್ಷೇತ್ರದ ಮಠವನ್ನು ತಮ್ಮ ಪ್ರಿಯಶಿಷ್ಯರಲ್ಲಿ ಒಬ್ಬರಾದ ಸರ್ಪಭೂಷಣ ಸ್ವಾಮಿಗಳವರಿಗೆ ವಹಿಸಿಕೊಟ್ಟು ಚಿತ್ರದುರ್ಗದಲ್ಲಿ "ಇಮ್ಮಡಿ ಶಾಂತವೀರ ಗುರುಸಿದ್ಧ ದೇಶಿಕ"ರೆಂಬ ಹೆಸರಿನಲ್ಲಿ ವಿಧಿಪೂರ್ವಕವಾಗಿ ಒಂಬತ್ತನೇ ಮಠಾಧಿಪತಿಯಾಗಿ ಅಧಿಕಾರವನ್ನು ಸ್ವೀಕರಿಸಿದರು.

ಇಮ್ಮಡಿ ಗುರುಸಿದ್ಧದೇಶಿಕರು ತಮ್ಮ ಕೃತಿಗಳಾದ ಹೋಳಿ ಪದ, ಬಿಜ್ಜಮಹಾದೇವಿ ಚಾರಿತ್ರ, ಕೈವಲ್ಯ ಸೋಪಾನ, ನಾಮೈಕೋತ್ತರ ಶತಸ್ಥಲ, ಶೂನ್ಯ ಮಂತ್ರ ಗೋಪ್ಯ, ಶಿವಲಿಂಗ ಮಹಿಮಾ ಷಟ್ಪದಿ, ಮಿಶ್ರಾರ್ಪಣ ವಾರ್ಧಿಕ, ಶಿವಲಿಂಗನಾಂದ್ಯ, ಯೋಗ ಕಲಾಪ ಸಾರ, ಸ್ಕಂದ ಪುರಾಣ, ವಿರೂಪಾಕ್ಷ ಪಂಚ ಶಿಖಾಗಮ, ನಂದೀಶ್ವರ ಜಯ ದಂಡಕ (ಸಂಸ್ಕೃತ), ಪ್ರಭುಲೀಲಾ (ಸಂಸ್ಕೃತ), ಲಿಂಗಾಚಾರರ ರಚನಾಗಮ (ಸಂಸ್ಕೃತ ಕೃತಿಗೆ ಕನ್ನಡ ಟೀಕು) ಗ್ರಂಥಗಳನ್ನು ಪೂರ್ಣಗೊಳಿಸಿದರು. ತಮ್ಮ ಅಂತ್ಯದಿನಗಳನ್ನು ಶಿವಮೊಗ್ಗ ಜಿಲ್ಲೆಯ ಆನಂದ ಪುರ ಅಥವ ಅನಂತ ಪುರದಲ್ಲಿ ಕಳೆದರು.

ತೃಣಪುರಿ ಮಠದ ಅಧಿಕಾರಸ್ಥರಾದ ಸರ್ಪಭೂಷಣ ಸ್ವಾಮಿಗಳು (1710) ಯಾವಾಗಲೂ ಏಕಾಂತವನ್ನೆ ಬಯಸುತ್ತಿದ್ದರು. ಲೌಕಿಕವಲ್ಲಿ ಬೆರೆಯದೆ ಕಂಭದ ಕೊಲ್ಲಿಯ ಬಳಿ ಆಶ್ರಮವನ್ನು ಸ್ಥಾಪಿಸಿಕೊಂಡು ಧ್ಯಾನ, ಸಮಾಧಿಯಲ್ಲಿಯೆ, ತಮ್ಮ ದಿನಗಳನ್ನು ಕಳೆಯತೊಡಗಿದರು. ಉಪ್ಪು ಖಾರವಿಲ್ಲದ ಸಪ್ಪೆ ಆಹಾರವನ್ನು ಸೇವಿಸುತ್ತಿದ್ದ ಇವರನ್ನು ಜನರು ಸಪ್ಪೆ ಸ್ವಾಮಿಗಳೆಂದು ಕರೆಯುತ್ತಿದ್ದರು. ಸಪ್ಪೆ ಸ್ವಾಮಿಗಳು ತಮ್ಮ ಧ್ಯಾನಾವಸ್ಥೆ

ಯಲ್ಲಿ ಕಂಡ ಅನುಭವಗಳನ್ನು ವಚನ ರೂಪದಲ್ಲಿ ಚಿತ್ರಿಸಿದ್ದರು. ಆದರೆ ನಮ್ಮ ದೌರ್ಭಾಗ್ಯ, ವಚನವ ಕಟ್ಟು ನೀರು ಪಾಲಾದವು. ಇವರ ನಂತರ ಮಠಾಧಿಕಾರವನ್ನು ಕಲ್ಯಾಣ ಸ್ವಾಮಿಗಳು (1750) ವಹಿಸಿಕೊಂಡರು. ಮುಂದಿನ ದಿನಗಳಲ್ಲಿ ಬಸವಲಿಂಗಸ್ವಾಮಿಗಳೂ (1800), ಮಠಾಧಿಪತಿಯಾಗಿದ್ದರು. ಇವರ ಕಾಲಾನಂತರ ಮಠಕ್ಕೆ ಅಧಿಕಾರಿಗಳೇ ಇಲ್ಲದೆ ಸ್ವಲ್ಪ ಕಾಲ ಶೂನ್ಯ ಪೀಠವಾಗಿತ್ತು. ಕ್ರಿ. ಶ. 1838 ರಲ್ಲಿ ಈ ಮಠವು ಮತ್ತೋರ್ವ ತಪಸ್ವಿಯಾದ ಶ್ರೀ ಚೆನ್ನಮಲ್ಲಿಕಾರ್ಜುನ ದೇಶಿಕರನ್ನು ಅಲಂಕರಿಸಿತು. ಇವರು ಸತತವಾಗಿ ಒಂದು ನೂರು ವರ್ಷಗಳ ಕಾಲ ಮಠಾಧಿಪತಿಯಾಗಿದ್ದು ಪರಂಪರಾನುಗತವಾದ ಕಾರ್ಯಗಳನ್ನು ಮುಂದುವರಿಸಿದರು.

ಶ್ರೀ ಚೆನ್ನಮಲ್ಲಿಕಾರ್ಜುನ ದೇಶಿಕರು ಹುಟ್ಟಿದ ಸ್ಥಳ "ಹಟ್ನ ಚೀಮ್ಕಲ್ಲು." ಚೆನ್ನ ಎಂಬ ಹೆಸರಿನಲ್ಲಿ ಸೋಸಲೆ ಬಳಿಯ ಸಿದ್ಧರ ಹಳ್ಳಿಯ ಗವಿ ಮಠದಲ್ಲಿ ಗುರು ರುದ್ರ ಶಿವಯೋಗಿಗಳ ಸನ್ನಿಧಿಯಲ್ಲಿ ಶಿಷ್ಯವೃತ್ತಿ ಸಾಗುತ್ತಿರುವಾಗಲೇ ಇವರ ಎಂಟನೇ ವಯಸ್ಸಿನಲ್ಲಿ ಗುರು ಪರೀಕ್ಷೆಯ ದಿನ ಒದಗಿ ಬಂದಿತು. ಗುರು ರುದ್ರ ಶಿವಯೋಗಿಗಳು ತ್ರಿಕಾಲಗಳಲ್ಲೂ ಸಮಾಧಿ ಸ್ಥಿತಿಯನ್ನು ಹೊಂದುತ್ತಿದ್ದರು. ಸಮಾಧಿ ಸ್ಥಿತಿಯಿಂದ ಎಚ್ಚೆತ್ತು ತಮ್ಮ ಕೊಠಡಿಯಿಂದ ಹೊರ ಬರುವಾಗ ಅವರಿಗಾಗಿ ಒಂದು ಬಟ್ಟಲಿನಲ್ಲಿ ಹಾಲು, ಎರಡು ಬಾಳೆ ಹಣ್ಣು ಸಿದ್ಧವಾಗಿರುತ್ತಿತ್ತು. ಅದರ ಪಕ್ಕದಲ್ಲೇ ಒಂದು ಘನಾಕಾರದ ವಿಭೂತಿ ಘಟ್ಟಿಯೂ ಇಡಲ್ಪಡುತ್ತಿತ್ತು. ಈ ವ್ಯವಸ್ಥೆಯನ್ನು ಶಿಷ್ಯ ವೃತ್ತಿ ಮಾಡಿಕೊಂಡಿದ್ದ ಹುಡುಗರು ಸರದಿಯಂತೆ ಏರ್ಪಡಿಸಿ ಗುರುಗಳ ಆಗಮನಕ್ಕೆ ಮುಂಚೆಯೇ ಹೊರಟು ಹೋಗುತ್ತಿದ್ದರು.ಗುರುಗಳು ಸಮಾಧಿ ಸ್ಥಿತಿಯಿಂದ ಹೊರಬಂದಾಗ ಹಣ್ಣು-ಹಾಲನ್ನು ಸೇವಿಸಿ, ವಿಭೂತಿ ಘಟ್ಟಿಯಿಂದ ತ್ರಿಪುಡ್ರವನ್ನು ಧರಿಸಿ ಮತ್ತೆ ತಮ್ಮ ಸಮಾಧಿಯ ಕೊಠಡಿಯನ್ನು ಪ್ರವೇಶಿಸುತ್ತಿದ್ದರು. ಇದು ನಿತ್ಯ ವಿಧಿಯಾಗಿತ್ತು.

ಅಂದು ಬಾಲಕ ಚೆನ್ನನ ಸರದಿ. ಹಾಲು ಹಣ್ಣುಗಳನ್ನು ಸಿದ್ಧಪಡಿಸಿದ. ವಿಭೂತಿ ಘಟ್ಟಿಯನ್ನು ತಂದಿಡುವಾಗ ಕೈಜಾರಿ ಬಿದ್ದು ಎರಡು ಹೋಳಾಯಿತು. ಬಾಲಕ ಚೆನ್ನನಿಗೆ ಹೆದರಿಕೆಯಾಗಿ ಶರೀರವು ಕಂಪಿಸತೊಡಗಿತು. ಗುರುಗಳು ಏನು ಹೇಳುವರೋ ? ಯಾವ ಶಿಕ್ಷೆ ಕಾದಿದೆಯೋ ? ಎಂಬ ಭಯ

ಕ್ಕಿಂತ, ಇಂದು ತನ್ನ ಗುರು ಸೇವೆಯಲ್ಲಿ ವಿಘ್ನವೊದಗಿತಲ್ಲಾ ಎಂಬ ಸಂಕಟ ದಿಂದ ಕಂಠ ತುಂಬಿ ಬಂದಿತು. ಆ ಎರಡು ಹೋಳಾದ ವಿಭೂತಿ ಘಟ್ಟಿಯನ್ನು ಹಾಗೆಯೇ ಜೋಡಿಸಿದಂತೆ ಇಟ್ಟು, ಹತ್ತಿರವಿದ್ದ ಒಂದು ಕಂಭದ ಬಳಿ ಕಣ್ಣೀರು ಸುರಿಸುತ್ತಾ ನಿಂತನು. ಗುರುಗಳು ಸಮಾಧಿ ಸ್ಥಿತಿಯಿಂದ ಹೊರ ಬರುವ ಸಮಯವಾಯಿತು. ಚೆನ್ನನು ಕೊಠಡಿಯತ್ತಲೇ ನೋಡುತ್ತಿದ್ದನು. ಕೊಠಡಿಯ ಬಾಗಿಲು ತೆರೆಯಿತು. ಗುರುಗಳ ದಿವ್ಯದೃಷ್ಟಿ ನೇರವಾಗಿ ಚೆನ್ನನ ಮೇಲೆ ಹರಿಯಿತು. ಮುಗ್ಧ ಚೆನ್ನನ ಕಣ್ಣುಗಳು ನೀರಿನಿಂದ ತುಂಬಿದ್ದವು. ಕಾಲುಗಳು ಕಂಪಿಸುತ್ತಿದ್ದವು. ಕೈಗಳು ಕಮಲದ ಮೊಗ್ಗಿನಂತೆ ಜೋಡಿಸಿದ್ದವು. ಕೊಠಡಿಯಿಂದ ಹೊರಬಂದ ಗುರುಗಳು ಹಾಲು ಹಣ್ಣುಗಳನ್ನು ಸೇವಿಸಿದರು. ಚೆನ್ನನು ತದೇಕ ದೃಷ್ಟಿಯಿಂದ ಗುರುಗಳನ್ನೇ ನೋಡುತ್ತಿದ್ದನು. ಗುರುವಿನ ಬಲಗೈ ಹಸ್ತವು ವಿಭೂತಿ ಘಟ್ಟಿಯ ಮೇಲೆ ಹೋಯಿತು. ಚೆನ್ನನ ಎದೆ ಹೊಡೆದುಕೊಳ್ಳಲಾರಂಭಿಸಿತು. ಗುರುಗಳು ವಿಭೂತಿಯನ್ನು ಮೂರು ಬೆರಳುಗಳಿಂದ ಉಜ್ಜಿ ಹಣೆಯಲ್ಲಿ ಧರಿಸಿದರು. ಚೆನ್ನನಿಗೆ ಆಶ್ಚರ್ಯ, ವಿಭೂತಿ ಘಟ್ಟಿಯ ಹೋಳುಗಳು ಕೂಡಿಕೊಂಡಿದ್ದವು. ಗುರುಗಳು ಚೆನ್ನನತ್ತ ನೋಡಿ ಹೇಳಿದರು. "ಮಗೂ, ನಿನ್ನ ಶಿಷ್ಯವೃತ್ತಿ ಇಂದಿಗೆ ಮುಗಿಯಿತು. ನೀನು ಹೋಗಬಹುದು". ಬಾಲಕ ಚೆನ್ನ ಓಡಿ ಬಂದು ಗುರುಗಳ ಪಾದವನ್ನು ಹಿಡಿದುಕೊಂಡನು. "ಗುರುಗಳೇ, ನನ್ನನ್ನು ಕ್ಷಮಿಸಿ, ತಪ್ಪಾಯ್ತು. ನಿಮ್ಮ ಸನ್ನಿಧಿಯನ್ನು ಬಿಟ್ಟು ಬೇರೆಲ್ಲೂ ಹೋಗಲಾರೆ" ಎಂದು ಅಂಗಲಾಚಿದನು. ಗುರುಗಳು ಬಾಲಕನ ತಲೆಯನ್ನು ಸವರಿ, "ಮಗೂ ನಾನು ನಿನಗೆ ಶಿಕ್ಷೆಯನ್ನು ವಿಧಿಸುತ್ತಿಲ್ಲ. ನಿನ್ನ ಗುರುಭಕ್ತಿಗೆ ಮೆಚ್ಚಿದ್ದೇನೆ. ನೀನು ಇನ್ನು ಮುಂದೆ ಒಂದು ಮಠದ ಅಧಿಪತಿಯಾಗುವ ಯೋಗವನ್ನು ಹೊಂದಿದ್ದೀಯೆ ಇದು ಶಿವೇಚ್ಛೆ, ನಮ್ಮದಲ್ಲ. ಇಂದೇ ನೀನು ಮೈಸೂರಿನ ಹೊಸಮಠಕ್ಕೆ ಹೋಗು. ಅಲ್ಲಿ ನಿನಗೆ ಮುಂದಿನ ಮಾರ್ಗವು ತಿಳಿಯುತ್ತದೆ"—ಎಂದು ಹೇಳಿ ಬಾಲಕ ಚೆನ್ನನನ್ನು ಸಂತೈಸಿ, ಆಶೀರ್ವದಿಸಿ ಕಳುಹಿಸಿಕೊಟ್ಟರು.

ಚೆನ್ನನು ಮೈಸೂರಿನ ಹೊಸಮಠದಲ್ಲಿರುವ ಸಮಯದಲ್ಲಿ ತೃಣಪುರಿಯಿಂದ (ಹುಲ್ಲಹಳ್ಳಿಯಿಂದ) ಕೆಲವರು ಮಠದ ಭಕ್ತರು ಬಂದು ಅಲ್ಲಿನ

ಗುರುಗಳಾದ ಸಿದ್ಧಬಸವ ಸ್ವಾಮಿಗಳವರಲ್ಲಿ ತಾವು ಬಂದ ಉದ್ದೇಶವನ್ನು ತಿಳಿಸಿದರು. ಸಿದ್ಧಬಸವ ಸ್ವಾಮಿಗಳು ಚೆನ್ನನನ್ನು ಕರೆದು, "ತೃಣಪುರಿಯ ಶ್ರೀಶಾಂತಮಲ್ಲಿಕಾರ್ಜುನ ವಿರಕ್ತ ಮಠದ ಅಧಿಕಾರವನ್ನು ವಹಿಸಿಕೊಂಡು ಅದರ ಹಿರಿಮೆಯನ್ನು ಉಳಿಸು"-ಎಂಬುದಾಗಿ ಹೇಳಿ, ಆಶೀರ್ವದಿಸಿ ಆತ ನನ್ನು ಕಳುಹಿಸಿಕೊಟ್ಟರು. ಎಂಟು ವರ್ಷದ ಬಾಲಕ ಹುಲ್ಲಹಳ್ಳಿಯ ಮಠಾಧಿಕಾರವನ್ನು ವಹಿಸಿಕೊಂಡು "ಶ್ರೀಚೆನ್ನಮಲ್ಲಿಕಾರ್ಜುನ ದೇಶಿಕರು" ಎಂಬ ನಾಮಾಂಕಿತವನ್ನು ಧರಿಸಿದನು.

ಈ ಬಾಲಯತಿಯು ಅಷ್ಟಾಂಗ ಯೋಗವನ್ನು ಸಾಧಿಸುತ್ತಾ ತೇಜೋವಂತರಾಗಿ ಬೆಳಗುತ್ತಿದ್ದರು. ದಿನಗಳುರುಳಿದಂತೆ ಇವರ ತಪಃ ಪ್ರಭಾವವು ಜನರಿಗೆ ಅರಿವಾಗುತ್ತಿತ್ತು.

ಮಾದಪ್ಪನವರು ಹುಲ್ಲಹಳ್ಳಿಯ ಪಟೇಲರು. ಅಂದಿನ ಕಾಲದಲ್ಲಿ ಅಧಿಕಾರ ಸಣ್ಣದಾದರೂ ಪ್ರಭಾವಯುತವಾಗಿತ್ತು. ಮಾದಪ್ಪನವರಿಗೆ ದೈವ ಕೃಪೆ ಕಡಿಮೆಯಾಯಿತೋ ಏನೋ ಅವರ ಆರು ಜನ ಮಕ್ಕಳಿಗೂ ಒಂದೇ ದಿನ ಅವಸಾನ ಕಾಲವೊದಗಿತು. ಗಾಬರಿಗೊಂಡ ಪಟೇಲ ಮಾದಪ್ಪನವರು ಮಠಕ್ಕೆ ಬಂದು ಗುರುಗಳಿಗೆ ಶರಣಾಗಿ ಪುತ್ರಭಿಕ್ಷೆಯನು ಬೇಡಿದರು. ಚೆನ್ನಮಲ್ಲಿಕಾರ್ಜುನರು ತಮ್ಮ ದಿವ್ಯ ದೃಷ್ಟಿಯಿಂದ ಪರಿಸ್ಥಿತಿ ಯನ್ನು ಅರಿತರು. "ಶಿವೇಚ್ಛೆಯಾಗಿದೆ. ಒಬ್ಬ ಪುತ್ರ ಉಳಿಯುತ್ತಾನೆ." ಎಂದು ಹೇಳಿ ಆಶೀರ್ವದಿಸಿದರು.

ಗುರುವಿನ ಆಶೀರ್ವಾದ ಫಲಿಸಿದ ನೆನಪಿಗಾಗಿ ಹುಲ್ಲಹಳ್ಳಿಯಲ್ಲಿ ಒಂದು ಭಿಕ್ಷದ ಮಠವನ್ನು ಸ್ಥಾಪಿಸಿ ಅದನ್ನು ವೀರಶೈವ ಜನಾಂಗದವರ ಅನುಕೂಲ ಕ್ಕಾಗಿ ಬಿಟ್ಟುಕೊಟ್ಟರು.

ಬಸವಲಿಂಗ ಶರಣ ಮತ್ತು ವೀರಮ್ಮನವರು ಚೆನ್ನಮಲ್ಲಿಕಾರ್ಜುನರ ನಿಷ್ಠಾವಂತ ಶಿಷ್ಯ ದಂಪತಿಗಳು. ಇವರ ಮಗಳಾದ ಶಾಂತ ವೀರಮ್ಮನನ್ನು ಚೆನ್ನಬಸವದೇವರಿಗೆ ಕೊಟ್ಟು ವಿವಾಹವನ್ನು ಮಾಡಿದ್ದರು. ಈ ನವ ದಂಪತಿಗಳೂ ಮಹಾಮಠದಲ್ಲೇ ಇದ್ದು ಗುರುಸೇವೆಯನ್ನು ಮಾಡಿ ಕೊಂಡಿದ್ದರು. ಈ ನವದಂಪತಿಗಳಿಗೆ ಸದಾಶಿವನೆಂಬ ಮಗನ ಜನನ ವಾಯಿತು. ಸದಾಶಿವ ನಾಲ್ಕು ತಿಂಗಳ ಮಗುವಾಗಿರಲು ಸರ್ಪಕಂಟಕ

ವೊಂದು ಆ ಮಗುವಿಗೆ ಎದುರಾಯಿತು. ತಾಯಿ ಶಾಂತವೀರಮ್ಮ ತನ್ನ ಮಗ್ಗುಲಲ್ಲಿ ಮಗುವನ್ನು ಮಲಗಿಸಿಕೊಂಡು ತಾನೂ ನಿದ್ದೆ ಮಾಡುತ್ತಿದ್ದಳು. ಇದ್ದಕ್ಕಿದ್ದ ಹಾಗೆಯೇ ಮಗು ಗಟ್ಟಿಯಾಗಿ ಅಳತೊಡಗಿತು. ತಾಯಿಗೆ ಎಚ್ಚರವಾಗಿ ಎದ್ದು ನೋಡಿದಾಗ ಒಂದು ಸರ್ಪವು ಮಠದ ಹೊಸ್ತಿಲನ್ನು ದಾಟಿ ಹೊರಗೆ ಹೋಗುತ್ತಿತ್ತು. ಶಾಂತವೀರಮ್ಮ ಗಾಭರಿಯಿಂದ ತನ್ನ ತಂದೆ-ತಾಯಿಯನ್ನೂ, ಗುರುಗಳನ್ನೂ ಕೂಗಿಕೊಂಡಳು. ಎಲ್ಲರೂ ಓಡಿ ಬಂದರು. ಅಳುತ್ತಿದ್ದ ಮಗುವನ್ನು ಗುರುಗಳು ಕೈಗೆತ್ತಿಕೊಂಡರು. ಪರೀಕ್ಷಿಸಿ ನೋಡಲಾಗಿ ಮಗುವಿನ ಕಾಲಿನ ಬಲಮುಂಡಿಯ ಹಿಂಭಾಗದಲ್ಲಿ ಹಾವು ಕಚ್ಚಿದ ಗುರುತು ಗೋಚರಿಸಿತು. ಗುರುಗಳು ಕೂಡಲೇ ವಿಭೂತಿಯನ್ನು ಮಗುವಿನ ಮೈಮೇಲೆಲ್ಲಾ ಸವರಿ ಮಠದಲ್ಲಿ ಪ್ರತಿಷ್ಠಿತವಾಗಿದ್ದ ಶಿವಲಿಂಗದ ಮುಂದೆ ಮಗುವನ್ನು ಮಲಗಿಸಿದರು. ಇಷ್ಟರಲ್ಲಿ ಮಗುವು ಅಳುವುದನ್ನು ನಿಲ್ಲಿಸಿ ನಿಶ್ಚೇಷ್ಟಿತವಾಗಿತ್ತು. ಗುರುಗಳು ಪಂಚಾಕ್ಷರಿ ಮಂತ್ರವನ್ನು ಪಠಿಸಿ ಧ್ಯಾನ ಮುದ್ರೆಯಲ್ಲಿ ಕುಳಿತರು.

ಹೃದಯಾಂತರಂಗ ಅಂಗಳದಲ್ಲಿ ಒಂದು ಮುದ್ದಾದ ಮಗುವು ಅಂಬೆಗಾಲಿಡುತ್ತಾ ಬಂದು ತಮ್ಮ ತೊಡೆಯ ಮೇಲೆ ಕುಳಿತ ಅನುಭವವಾಯಿತು. ಗುರುಗಳು ಆನಂದವದನರಾಗಿ ಬಾಹ್ಯ ಲೋಕಕ್ಕೆ ಬಂದರು. ಶಿವಲಿಂಗದ ಎದುರು ಮಲಗಿಸಿದ್ದ ಮಗುವು ಅಳುತ್ತಿತ್ತು. ಕಾತರತೆಯಿಂದ ಬಳಿಯಲ್ಲೇ ನಿಂತಿದ್ದ ಮಗುವಿನ ತಂದೆ ತಾಯಿಗಳ ಆನಂದಕ್ಕೆ ಮಿತಿಯೇ ಇರಲಿಲ್ಲ. ಗುರುಗಳು ಶಾಂತವೀರಮ್ಮನನ್ನು ಕುರಿತು, "ತಾಯಿ, ಈ ಮಗು ನಿನ್ನದು ಎನ್ನದೆ ಮಠದ ಮಗುವೆಂದು ಬೆಳೆಸು. ಶಿವನ ಅಪ್ಪಣೆಯಾಗಿದೆ. ಈತನೇ ಈ ಮಠದ ಉತ್ತರಾಧಿಕಾರಿ" ಎಂದು ಹೇಳಿ ತಮ್ಮ ಕೊಠಡಿಯತ್ತ ನಡೆದರು.

ಮಗು ಸದಾಶಿವನು ತಂದೆ ತಾಯಿಗಳಿಗೆ ಮುದ್ದಿನ ಮಗನಾಗಿ, ಗುರುವಿಗೆ ಪ್ರಿಯ ಶಿಷ್ಯನಾಗಿ, ಮಠದ ಮಾಣಿಕ್ಯವಾಗಿ ಬೆಳೆಯತೊಡಗಿದನು. 4 ನೇ ವಯಸ್ಸಿನಲ್ಲಿ ಚೌಲೋಪನಯನವೂ, 6 ನೇ ವಯಸ್ಸಿನಲ್ಲಿ ಗುರುಗಳಿಂದಲೇ ಇಷ್ಟಲಿಂಗ ದೀಕ್ಷೆಯೂ, ಕೊಡಲ್ಪಟ್ಟು ಮಗುವಿಗೆ ಶಾಸ್ತ್ರಾಭ್ಯಾಸವನ್ನು ಪ್ರಾರಂಭಿಸಲಾಯಿತು. ಬಾಲಕ ಸದಾಶಿವನಿಗೆ ಹತ್ತು ಸಂವತ್ಸರ

ಗಳು ತುಂಬಿದುವು. ಮಠದ ಗುರುಪೀಠವನ್ನು ಸಾಂಕೇತಿಕವಾಗಿ ಶ್ರೀಚೆನ್ನ ಮಲ್ಲಿಕಾರ್ಜುನರು ಈ ಬಾಲಕನಿಗೆ "ಸದಾಶಿವ ದೇಶಿಕ" ಎಂಬ ಹೆಸರಿನಲ್ಲಿ ವಹಿಸಿಕೊಟ್ಟರು.

1924 ನೇ ಇಸವಿಯ ಮಳೆಗಾಲ. ಎಲ್ಲಿಡೆ ಧಾರಾಕಾರವಾದ ಮಳೆ. ತುಂಬು ಪ್ರವಾಹದ ಕಪಿಲಾ ಭೋರ್ಗರೆಯುತ್ತಾ ಸಾಗುತ್ತಿದ್ದಾಳೆ. ಎಲ್ಲೆಯನ್ನು ಮೀರಿ ಇಕ್ಕೆಡೆಗಳಲ್ಲೂ ತನ್ನ ದೀರ್ಘಬಾಹುಗಳನ್ನು ಚಾಚಿದ್ದಾಳೆ. ಅತ್ಯುತ್ಸಾಹದಿಂದ ಕಪಿಲೆಯು ಹುಲ್ಲಹಳ್ಳಿಯ ದಕ್ಷಿಣ ಭಾಗದ ಎತ್ತರದ ಪ್ರದೇಶದಲ್ಲಿರುವ ಶ್ರೀವರದರಾಜಸ್ವಾಮಿಯ ಪಾದ ಪದ್ಮಗಳನ್ನು ತೊಳೆಯುತ್ತಿದ್ದಾಳೆ. ಇವಳ ಈ ಸಂಭ್ರಮದಲ್ಲಿ ಪ್ರಾಚೀನ ವಿರಕ್ತ ಮಠವು ಸಂಪೂರ್ಣವಾಗಿ ನೀರಿನಲ್ಲಿ ಮುಳುಗಿ ಮಠದ ಗುರುಗಳು ಮತ್ತು ಶಿಷ್ಯರು ಎತ್ತರವಾದ ಪ್ರದೇಶದಲ್ಲಿ ಆಶ್ರಯವನ್ನು ಪಡೆಯುವಂತಾಯಿತು. ಮಠದಲ್ಲಿ ರಕ್ಷಿಸಿಕೊಂಡು ಬಂದಿದ್ದ ಪ್ರಾಚೀನ ಗ್ರಂಥಗಳು ನೀರು ಪಾಲಾದುವು. ಜಲಪ್ರವಾಹದಲ್ಲಿ ಮಠದ ಗೋಡೆಗಳು ನೆನೆದು ಕರಗಿ ಹೋದವು. ಮೇಲ್ಛಾವಣಿಯೂ ಪ್ರವಾಹದ ಜೊತೆಯಲ್ಲೇ ಕೊಚ್ಚಿ ಹೋಯಿತು. ಎಂಟು–ಹತ್ತು ದಿನಗಳ ಮೇಲೆ ಕಪಿಲೆಯು ತನ್ನ ರೌದ್ರ ರೂಪವನ್ನು ಕಳೆದು ಶಾಂತವಾಗಿ ತನ್ನ ಮೊದಲಿನ ಸ್ಥಾನದಲ್ಲಿ ಹರಿಯ ತೊಡಗಿದಳು. ಮಠದ ಗುರುಗಳೂ, ಶಿಷ್ಯರೂ ಮತ್ತು ಭಕ್ತಾದಿಗಳೂ ಬಂದು ನೋಡಲು ಮಠದ ಸ್ಥಳದಲ್ಲಿ ಕೇವಲ ಕಂಭಗಳೂ, ತೊಲೆಗಳೂ ಮತ್ತು ಶಿವಲಿಂಗವು ಸಾಕ್ಷಿಯಾಗಿ ಉಳಿದಿದ್ದವು. ಸುಮಾರು ಮುನ್ನೂರೈವತ್ತು ವರ್ಷಗಳ ಹಿಂದೆ ಮಹಾತಪಸ್ವಿಗಳಾದ ಶ್ರೀ ಚೆನ್ನವೀರಾರ್ಯರಿಂದ ನಿರ್ಮಾಣಗೊಂಡಿದ್ದ ಮಹಾಮಠವು ಇಂದು ನೀರು ಪಾಗಿದೆ. ಪ್ರಕೃತಿಯನ್ನೂ, ಜೀವರಾಶಿಗಳನ್ನೂ, ಸಾಧಕರ ಸಾಧನೆ ಸಾಮರ್ಥ್ಯಗಳನ್ನೂ ಹಿಡಿತದಲ್ಲಿಟ್ಟುಕೊಂಡು ತನ್ನ ಮನೋವ್ಯಾಪಾರಕ್ಕೆ ತಕ್ಕಂತೆ ನಡೆಸಿಕೊಳ್ಳುವ ಆ ಕಾಲನಿಗೆ ನಮಸ್ಕರಿಸಿದ ಗುರುಗಳು ತಮ್ಮ ವಾಸಸ್ಥಾನಕ್ಕೆ ಬೇಕಾಗುವಷ್ಟು ಸ್ಥಳವನ್ನು ಸಿದ್ಧಪಡಿಸಿ ಅಲ್ಲಿಯೇ ಇರತೊಡಗಿದರು.

ಮಹಾಲಿಂಗನಿಷ್ಠರೂ ಮತ್ತು ತ್ರಿಕಾಲಜ್ಞಾನಿಗಳೂ ಆಗಿದ್ದ ಶ್ರೀ ಚೆನ್ನಮಲ್ಲಿಕಾರ್ಜುನ ದೇಶಿಕರು ತಮ್ಮ ಅಂತ್ಯ ದಿನವನ್ನು ತಾವೇ ಕಂಡು

ಕೊಂಡರು. ಪರಶಿವನ ಕರೆಯನ್ನು ಮನ್ನಿಸಿ ಅವನ ಬಳಿಗೆ ಹೊರಟ ಆ ಮಹಾದಿನವು ಸುವರ್ಣಾಕ್ಷರಗಳಲ್ಲಿ ಬರೆದಿಡಬಹುದಾದಂಥ ಸುದಿನವು.

ಗುರುಗಳು ತಮ್ಮ ಉತ್ತರಾಧಿಕಾರಿಯಾದ ಸದಾಶಿವಸ್ವಾಮಿಯವರನ್ನೂ ಮತ್ತು ಶಿಷ್ಯವರ್ಗದವರನ್ನೂ ಕುರಿತು, "ನಾಳೆ ಸಂಜೆ ನಾಲ್ಕು ಘಂಟೆಗೆ ಸರಿಯಾಗಿ ನಿಮ್ಮ ಗುರುವು ಶಿವೈಕ್ಯರಾಗಲಿದ್ದಾರೆ. ಯಾರೂ ದುಃಖಿಸಬಾರದು. ದರ್ಶನಾಕಾಂಕ್ಷಿಗಳು ಯಾರಾದರೂ ಇದ್ದರೆ, ಬರಬಹುದು ಎಂದು ತಿಳಿಸಿರಿ"–ಎಂದು ಹೇಳಿ ಧ್ಯಾನಮಗ್ನರಾದರು.

ಈ ಸುದ್ದಿ ಊರಲ್ಲೆಲ್ಲಾ ಹರಡಿತು. ಅಂದು ಸ್ವಭಾನು ಸಂವತ್ಸರದ ಚೈತ್ರ ಶುದ್ಧ ಷಷ್ಠಿ ಶನಿವಾರ, ಇಸವಿ 1938. ಬೆಳಗಿನಿಂದಲೇ ಭಕ್ತಾದಿಗಳು ಮಠದ ಬಳಿ ಸೇರತೊಡಗಿದರು. ಗುರುಗಳು ತಮ್ಮ ಪ್ರಾತರ್ವಿಧಿಗಳನ್ನು ಪೂರೈಸಿಕೊಂಡು ಮಠದ ಅಂಗಳದಲ್ಲಿ ಆಸೀನರಾದರು. ಕೀರ್ತನಕಾರರಾದ ವಾಟಾಳ್ ಸಿದ್ಧಲಿಂಗ ಶಾಸ್ತ್ರಿಗಳು ಮತ್ತು ಬೆಟ್ಟದ ಪುರದ ಚನ್ನವೀರ ದೇಶಿಕೇಂದ್ರರು ಆಗಮಿಸಿದುದು ಮಠದಲ್ಲಿದ್ದವರಿಗೆಲ್ಲಾ ಆಶ್ಚರ್ಯವನ್ನುಂಟು ಮಾಡಿದರೂ, ಗುರುಗಳಿಗೆ ಇವರ ಬರುವಿಕೆಯು ಮೊದಲೇ ತಿಳಿದಿತ್ತು. ಹುಲ್ಲಹಳ್ಳಿಯ ಅಹಮದ್ ಸಾಹೇಬರು ಮೈಸೂರಿಗೆ ಹೋಗಿದ್ದು ಆಗತಾನೆ ಬಂದಿದ್ದರು. ಗುರುಗಳ ವಿಷಯವನ್ನು ತಿಳಿದು ತಾವು ಮೈಸೂರಿನಿಂದ ತಂದಿದ್ದ ಖರ್ಬೂಜದ ಹಣ್ಣನ್ನು ಒಂದು ತಟ್ಟೆಯಲ್ಲಿಟ್ಟು ಅದರ ಮೇಲೆ ಅಲಂಕರಿತ ಕಸೂತಿ ವಸ್ತ್ರವನ್ನು ಹೊದಿಸಿಕೊಂಡು ಬಂದು ಗುರುಗಳಿಗೆ ಸಮರ್ಪಿಸಿದರು. ಗುರುಗಳು ಪ್ರೀತಿಯಿಂದ ಆ ಹಣ್ಣಿನ ಮೇಲೆ ತಮ್ಮ ಹಸ್ತವನ್ನು ಇಟ್ಟು, "ಸ್ವೀಕರಿಸಿದ್ದೇನೆ" ಎಂದರು. ಅಹಮದ್ ಸಾಹೇಬರಿಗೆ ಅಷ್ಟರಿಂದಲೇ ತೃಪ್ತಿಯಾಗದೇ ಮಠದ ಶಿಷ್ಯರಲ್ಲಿ ಒಬ್ಬರನ್ನು ಕರೆದು ಚಾಕು ವಿನಿಂದ ಆ ಹಣ್ಣನ್ನು ಹೋಳುಮಾಡಿಸಿದರು. ಆ ಹಣ್ಣಿನ ಹೋಳನ್ನು ನೋಡಿದವರು ಆಶ್ಚರ್ಯದಿಂದ ಹೌಹಾರಿದರು. ಖರ್ಬೂಜದಲ್ಲಿ ಹಣ್ಣಿನ ತಿರುಳೇ ಇಲ್ಲದೆ ಕೇವಲ ತೊಗಟೆ ಮಾತ್ರ ಇದ್ದಿತು. ಯೋಗ ಶಕ್ತಿಯಿಂದ ಗುರುಗಳು ಮೊದಲೇ ಹಣ್ಣನ್ನು ಸೇವಿಸಿದ್ದರು.

ಮಠದ ಅಂಗಳದಲ್ಲಿ ಸೇರಿದ್ದ ಭಕ್ತ ಸಮೂಹವನ್ನೂ, ಶಿಷ್ಯಗಣವನ್ನೂ, ಆಶೀರ್ವದಿಸಿದ ಗುರುಗಳು, "ಇಂದು ಸಂಜೆ ನಾಲ್ಕು ಘಂಟೆಗೆ

ಸರಿಯಾಗಿ ನಮ್ಮ ಪ್ರಯಾಣವು ಕೈಲಾಸಾಭಿಮುಖವಾಗಿ ಸಾಗುತ್ತದೆ. ಈ ಮಠದ ಮೇಲಿರುವ ನಿಮ್ಮ ಅಭಿಮಾನವು ಮುಂದೆಯೂ ಇರಲಿ". ಎಂದು ಕಳಕಳಿಯಿಂದ ವಿನಂತಿಸಿಕೊಂಡರು.

ಒಂದು ನೂರ ಹತ್ತು ವಸಂತಗಳನ್ನು ಕಂಡಿದ್ದ ಗುರುಗಳ ಶಾರೀರಕ ಆರೋಗ್ಯವನ್ನು ಅಂದಿನ ಸುಪ್ರಸಿದ್ಧ ಆಯುರ್ವೇದ ವೈದ್ಯರಾದ ವೆಂಕಟ ಸುಬ್ಬಾ ಪಂಡಿತರು ಪರೀಕ್ಷಿಸುತ್ತಿದ್ದರು. ಗುರುಗಳ ಶರೀರದ ಯಾವ ಭಾಗ ದಲ್ಲೂ ನಾಡಿ ಮಿಡಿತವು ಸಿಗುತ್ತಲೇ ಇಲ್ಲ. ವ್ಯಕ್ತಿಯ ಶರೀರದ ಸ್ಥಿತಿಗತಿ ಗಳನ್ನು ತಿಳಿಸಿಕೊಡುವಂಥ ಪ್ರಮುಖ ಪ್ರಮಾಣವಾದ ನಾಡಿಯೇ ಕಾಣ ದಿರುವುದು ದೈವ ನಿಯಮಕ್ಕೆ ವಿರುದ್ಧವಾದುದು. ಹೀಗಿದ್ದರೂ ಗುರುಗಳು ಮಾತನಾಡುತ್ತಿದ್ದುದೂ, ಎಲ್ಲರಂತೆ ಚೈತನ್ಯದಾಯಕರಾಗಿದ್ದುದೂ ವೆಂಕಟಸುಬ್ಬಾ ಪಂಡಿತರಿಗೆ ಆಶ್ಚರ್ಯವೂ ಮತ್ತು ಗುರುಗಳ ಮೇಲೆ ಅಪಾರ ಭಕ್ತಿಯೂ ಉಂಟಾದುವು.

ಅಂತ್ಯಸಮಯ ಸನ್ನಿಹಿತವಾಗುತ್ತಾ ಬಂದಿತು. ಗುರುಗಳ ಆದೇಶ ದಂತೆ ಶಿಷ್ಯರು ಮಠದ ಪಡಸಾಲೆಯಲ್ಲಿ ವಿಭೂತಿ ಘಟ್ಟಿಗಳಿಂದ ಮಂಚದೋ ಪಾದಿಯ ಒಂದು ಪೀಠವನ್ನು ಸಿದ್ಧ ಪಡಿಸಿ ಅದರ ಮೇಲೆ ಬಿಲ್ವ ಪತ್ರೆಗಳನ್ನು ಹರಡಿದರು. ಗುರುಗಳು ಆ ವಿಭೂತಿಯ ಪೀಠದಲ್ಲಿ ಪದ್ಮಾಸನಸ್ಥರಾಗಿ ಕುಳಿ ತರು. ಇವರ ಇಚ್ಛೆಯಂತೆ ಬೆಟ್ಟದಪುರದ ಸ್ವಾಮಿಗಳಾದ ಚೆನ್ನ ವೀರ ದೇಶಿಕೇಂದ್ರರು, ಇಮ್ಮಡಿ ಗುರುಸಿದ್ಧ ದೇಶಿಕರಿಂದ ರಚಿಸಲ್ಪಟ್ಟ "ಪ್ರಭು ಲೀಲೆ" ಎಂಬ ಗ್ರಂಥದಲ್ಲಿನ "ಐಕ್ಯ ಸ್ಥಲ"ವನ್ನು ಓದಿದರು. ಗುರುಗಳು ತಮ್ಮ ಉತ್ತರಾಧಿಕಾರಿಯಾದ ಸದಾಶಿವ ದೇಶಿಕರಿಂದ ಲಿಂಗಾರ್ಚನೆ ಮತ್ತು ಮಹಾಮಂಗಳಾರತಿಯನ್ನು ಮಾಡಿಸಿ ತಾವೂ ತೆಗೆದುಕೊಂಡು ನೆರೆದಿದ್ದ ಭಕ್ತರಿಗೆಲ್ಲ ಕೊಡಿಸಿದರು. ಸಭೆ ಶಾಂತವಾಗಿತ್ತು. ಶ್ರೀ ಚೆನ್ನ ಮಲ್ಲಿಕಾರ್ಜುನ ದೇಶಿಕರು ಪದ್ಮಾಸನದತ್ತ ಕುಳಿತು, ಎದೆಯ ಭಾಗದಲ್ಲಿ ಎಡಗೈ ಹಸ್ತದ ಮೇಲೆ ಇಷ್ಟಲಿಂಗವನ್ನಿಟ್ಟು, ಬಲಗೈಯಲ್ಲಿ ರುದ್ರಾಕ್ಷಿಸರವನ್ನು ಹಿಡಿದು ಒಮ್ಮೆ ಪಂಚಾಕ್ಷರಿ ಮಂತ್ರವನ್ನು ಪಠಿಸಿದರು. ಇಡೀ ಸಭೆಯು "ಓ ನಮಃ ಶಿವಾಯ" ಎಂದು ಒಕ್ಕೊರಲಿನಿಂದ ದನಿಗೈದಿತು. ಶ್ರೀಚೆನ್ನಮಲ್ಲಿಕಾರ್ಜುನ ದೇಶಿಕರ ಬಾಹ್ಯದೃಷ್ಟಿ ಅಂತರಂಗದಲ್ಲಿ ಹರಿಯಿತು. ವೇಳೆ ನಾಲ್ಕು ಘಂಟೆ

ಯಾಯಿತು. ಒಂದು ನೂರ ಹತ್ತು ವರ್ಷಗಳ ತುಂಬು ವಯಸ್ಸಿನ ತಪಸ್ವಿ ಕಾಲ ಪುರುಷನ ಹಿಡಿತದಿಂದ ಬಿಡಿಸಿಕೊಂಡು ಕಾಲಾತೀತ ವ್ಯಕ್ತಿಯಾದರು. ಆತ್ಮ ಜ್ಯೋತಿಯು ಪಂಚ ಭೂತಗಳಿಂದ ನಿರ್ಮಿತವಾದ ದೇಹವನ್ನು ಅಗಲಿ ಶಿವಲಿಂಗದ ಪರಂಜ್ಯೋತಿಯಲ್ಲಿ ಲೀನವಾಯಿತು.

ಸದಾಶಿವ ಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡು ಇಂದಿಗೆ ನಲವತ್ತೆಂಟು ವರ್ಷಗಳು ತುಂಬಿವೆ. ಈ ವೇಳೆಯಲ್ಲಿ ಇವರು ಮೈಸೂರಿನ ಹೊಸಮಠದಲ್ಲಿ ಆಸ್ಥಾನ ವಿದ್ವಾನ್ ಬಸವಲಿಂಗ ಸ್ವಾಮಿಗಳ ಬಳಿಯಲ್ಲಿ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಾಭ್ಯಾಸವನ್ನೂ, ಆಸ್ಥಾನ ವಿದ್ವಾನ್ ಪಂಡಿತರತ್ನಂ ಗುರುಶಾಂತ ಶಾಸ್ತ್ರಿಗಳ ಸನ್ನಿಧಿಯಲ್ಲಿ ವ್ಯಾಕರಣ, ಅಲಂಕಾರ, ಛಂದಸ್ಸುಗಳನ್ನು ಅಭ್ಯಾಸಮಾಡಿ ದ್ವಿಭಾಷಾ ಪಾಂಡಿತ್ಯವನ್ನು ಗಳಿಸಿ ಮಠದ ಅಭಿವೃದ್ಧಿಗೆ ದುಡಿಯುತ್ತಾ ಬಂದಿದ್ದಾರೆ. ಮಠಕ್ಕೆ ಸೇರಿದ ಹದಿನಾರು ಎಕರೆ ಜಮೀನಿನಲ್ಲಿ ಬಂದ ಉತ್ಪತ್ತಿಯ ಹಣದಿಂದ ಸಂಪೂರ್ಣ ವಾಗಿ ಶಿಥಿಲಗೊಂಡಿದ್ದ ಈ ಮಹಾಮಠವನ್ನು ಪುನರ್ನಿರ್ಮಿಸಿ ಎಂಟುನೂರು ವರ್ಷಗಳಷ್ಟು ಪುರಾತನವಾದ, ಹುಲ್ಲಹಳ್ಳಿಯ ಹಿರಿಮೆಯ ಸಂಕೇತವಾದ ಈ ಮಠದ ಉಳಿವಿಕೆಗೆ ಬಹುವಾಗಿ ಶ್ರಮಿಸಿದ್ದಾರೆ.

ಈ ವೀರಶೈವ ವಿರಕ್ತ ಮಹಾಮಠವು ಇಂದಿಗೂ ಶಾಂತವಾದ ಪ್ರದೇಶ ದಲ್ಲಿ, ಕಪಿಲಾ ತೀರದ ಬಲದಂಡೆಯಲ್ಲಿ ಮಾವು ಬೇವು ಬಿಲ್ವವೃಕ್ಷಗಳ ನಡುವೆ ಹುಲ್ಲಹಳ್ಳಿಯ ಇತಿಹಾಸದ ನೆನಪನ್ನು ಮರುಕಳಿಸುವ ಸುಂದರ ಮಂದಿರವಾಗಿ ರಾರಾಜಿಸುತ್ತಿದೆ.

## ದಾಸೋಹ ಮಠ

1925 ರ ಕಾಲ. ಮಾದಪ್ಪನವರು ಹುಲ್ಲಹಳ್ಳಿಯ ವೀರಶೈವರಲ್ಲಿ ಹಿರಿಯರೂ, ಜನಾನುರಾಗಿಗಳೂ ಆಗಿದ್ದು ಗ್ರಾಮದ 'ತಾತ್ಕಾಲಿಕ ಪಟೇಲ್ ಹುದ್ದೆ'ಯನ್ನು ಅಲಂಕರಿಸಿ 'ಪಟೇಲ್ ಮಾದಪ್ಪ'ನೆಂದೇ ಪ್ರಸಿದ್ಧ ರಾಗಿದ್ದರು. ಪಟೇಲ್ ಮಾದಪ್ಪನವರ ಸಂಸಾರದಲ್ಲಿ ಉಂಟಾದ ಒಂದು ಬಹುದೊಡ್ಡ ಆಘಾತವು ಅವರನ್ನು ಅಂತರ್ಮುಖಿಗಳಾಗುವಂತೆ ಮಾಡಿತು. ತಮ್ಮ ಅಶಾಶ್ವತವಾದ ಜೀವನವನ್ನು ಸಾರ್ಥಕಪಡಿಸಿಕೊಳ್ಳುವುದು ಹೇಗೆಂದು ಚಿಂತಿಸತೊಡಗಿದರು.

ಆ ಕಾಲದಲ್ಲಿ ಹೊರ ಊರುಗಳಿಂದ ಕಾರ್ಯಾರ್ಥವಾಗಿ ಅಥವಾ ಪ್ರಯಾಣಾರ್ಥವಾಗಿ ಬಂದ ವೀರಶೈವ ಬಂಧುಗಳಿಗೆ ಊಟ ಮತ್ತು ವಸತಿಯ ಸೌಕರ್ಯವನ್ನು ಒದಗಿಸುವ ಸಲುವಾಗಿ ಪಟೇಲ್ ಮಾದಪ್ಪ ನವರು ತಮ್ಮದೇ ಆದ ಮನೆಯೊಂದನ್ನು ವೀರಶೈವ ಸಮಾಜಕ್ಕೆ ಬಿಟ್ಟು ಕೊಟ್ಟು ಅದನ್ನು 'ವೀರಶೈವ ದಾಸೋಹಮಠ'ವೆಂದು ಕರೆದು, ಗಟ್ಟವಾಡಿ ಪುರದ 'ಪತ್ರಿಮಲ್ಲಪ್ಪ'ನವರನ್ನು ಮಠದ ಸ್ವಾಮಿಗಳನ್ನಾಗಿ ಮಾಡಿದರು. ಈ ಸ್ವಾಮಿಗಳು ವೀರಶೈವರ ಮನೆಗಳಲ್ಲಿ ಭಿಕ್ಷವನ್ನು ತಂದು ಮಠಕ್ಕೆ ಬರುವ ಅತಿಥಿಗಳಿಗೆ ದಾಸೋಹವನ್ನು ಮಾಡುವ ಪವಿತ್ರ ಕಾರ್ಯವನ್ನು ಪ್ರಾರಂಭಿಸಿದರು. ಪಟೇಲ್ ಮಾದಪ್ಪನವರ ಮನೆ 'ಅನ್ನದಾನ ಹಾಗೂ ಆಶ್ರಮದ ಮಂದಿರ'ವಾಯಿತು, 'ಅತಿಥಿ ದೇವೋಭವ' ಎಂಬ ಭಾರತೀಯ ಧರ್ಮದ ಸಿರಿನುಡಿ ಸಾರ್ಥಕವಾಯಿತು.

ಅಂದಿನಿಂದ ಇಂದಿನವರೆಗೆ ಜೇಕವಾಡಿ ಸ್ವಾಮಿಗಳು, ಹೊಮ್ಮರದ ಬಸವಲಿಂಗ ಸ್ವಾಮಿಗಳು, ಗದುಗಿನ ಶಂಕರಪ್ಪನವರು, ರುದ್ರ ಶೆಟ್ಟಿ ದೊಡ್ಡಿಯ ಶಿವಪ್ಪದೇವರು (82 ವರ್ಷದ ವೃದ್ಧರು), ಮಠದ ದಾಸೋಹ ಕಾರ್ಯವನ್ನು ನಡೆಸಿಕೊಂಡು ಬಂದರು. ಇಂದು ಹುಲ್ಲಹಳ್ಳಿಯ ನಂಜೇ ದೇವರು ಮಠದ ದಾಸೋಹ ಕಾರ್ಯವನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಪಟೇಲ್ ಮಾದಪ್ಪನವರು ಇಂದು ಇಲ್ಲ. ಆದರೆ ಅವರು ಎಸಗಿದ ಸತ್ಕಾರ್ಯ ಇಂದಿಗೂ ನಡೆದು ಬರುತ್ತಿದೆ.



ಶ್ರೀ ಕಪಿಲ ಮಲ್ಲಿಕಾರ್ಜುನಸ್ವಾಮಿ ಮೂಲದೇವರು



ಭ್ರಮರಾಂಬಾ ಅಮ್ಮನವರು
(ಶ್ರೀ ಕಪಿಲ ಮಲ್ಲಿಕಾರ್ಜುನಸ್ವಾಮಿ ದೇವಾಲಯ)



ಶ್ರೀ ವರದರಾಜಸ್ವಾಮಿ ದೇವಾಲಯದ ಬಾಗಿಲುವಾಡದಲ್ಲಿ
ಶ್ರೀಕೃಷ್ಣನ ಬಾಲಲೀಲೆಯ ಕೆತ್ತನೆ



ಶ್ರೀ ಪೆರುಂದೇವಿ (ರಂಗನಾಯಕಿ) ಅಮ್ಮನವರು

(ಶ್ರೀ ವರದರಾಜಸ್ವಾಮಿ ದೇವಾಲಯ)



ಶ್ರೀ ವರದರಾಜಸ್ವಾಮಿ ಮೂಲದೇವರು



ಶ್ರೀ ಪ್ರಸನ್ನಾಂಜನೇಯಸ್ವಾಮಿ ದೇವಾಲಯ



ಪೇಟೆಗಣಪತಿ ದೇವಾಲಯ



ಶ್ರೀ ಪ್ರಸನ್ನ ಗಣಪತಿ ದೇವಾಲಯ



ಮಂಡಿ ಮಾರಮ್ಮ

# ಹುಲ್ಲಹಳ್ಳಿಯ ದೇವಾಲಯಗಳು

ಹುಲ್ಲಹಳ್ಳಿಯ ಪ್ರಾಚೀನತೆಯನ್ನೂ, ಸಂಸ್ಕೃತಿ ಮತ್ತು ಧರ್ಮಸಮನ್ವಯವನ್ನೂ, ಹರಿಹರರಲ್ಲಿ ಅಭೇದ ಕಲ್ಪನೆಯನ್ನೂ ಅರಿಯಲು ನಿತ್ಯಸಾಕ್ಷಿಯಾಗಿರುವ ಕುರುಹುಗಳೆಂದರೆ ಇಲ್ಲಿಯ ಮನಮೋಹಕ ದೇವಾಲಯಗಳು.

ತೃಣಬಿಂದು ಮಹರ್ಷಿಗಳಿಂದ ಆರಾಧಿಸಲ್ಪಟ್ಟ ಕಂಬದ ಕೊಲ್ಲಿ ವೆಂಕಟರಮಣ ಸ್ವಾಮಿಯ ದೇವಾಲಯ, ನಿರ್ನಾಮಗೊಂಡು ಕಣ್ಮರೆಯಾಗಿ ಕೇವಲ ಶಾಸನೋಕ್ತವಾಗಿರುವ ಹಾಗೂ ಭೂಖನನದಿಂದ ದೊರೆತ ಶಿಲಾವಿಗ್ರಹ ಮೂರ್ತಿಗಳಿಂದ ತಿಳಿಯಲ್ಪಡುವ ಆದಿ ಪರಮೇಶ್ವರ (ವೃಷಭನಾಥ) ಮತ್ತು ತ್ರಿಜಗನ್ಮಂಗಲವೆಂಬ ಜೈನ ಚೈತ್ಯಾಲಯಗಳು, ಶ್ರೀವರದರಾಜ ಮತ್ತು ಕಪಿಲ ಮಲ್ಲಿಕಾರ್ಜುನ ಬೃಹತ್ ದೇವಾಲಯಗಳು, ವಿಘ್ನೇಶ್ವರ, ಪ್ರಸನ್ನಆಂಜನೇಯ, ಬಸವೇಶ್ವರ, ಸೋಮೇಶ್ವರ, ಕಾಡಬಸವೇಶ್ವರ, ಕಾಳಿಕಾದೇವಿ, ಚಿಕ್ಕದೇವಿ ಹಾಗೂ ಮಾರಮ್ಮನ ಗುಡಿಗಳೂ, ಮಸೀದಿ ಮತ್ತು ಗೋರಿಗಳೂ ಹುಲ್ಲಹಳ್ಳಿಯ ಜನಮನದ ಆಧ್ಯಾತ್ಮಿಕ ಅಂತರ್ಯವನ್ನು ಬಿಚ್ಚಿತೋರಿಸುವುದರ ಜೊತೆಗೆ, ಹುಲ್ಲಹಳ್ಳಿಯ ಇತಿಹಾಸದ ಪುಟಗಳನ್ನೂ ತೆರೆಯುತ್ತವೆ.

## 1. ಕಂಬದಕೊಲ್ಲಿ ವೆಂಕಟರಮಣ ದೇವಾಲಯ

ಇದು ಹುಲ್ಲಹಳ್ಳಿಯ ಕಪಿಲಾ ಕೊಲ್ಲಿಯ ಬಳಿ ಇರುವ ಒಂದು ಸಣ್ಣ ದೇವಾಲಯ. ಈ ದೇವಾಲಯವಿರುವ ಸ್ಥಳದಲ್ಲಿ ಇತಿಹಾಸ ಪೂರ್ವದ ಕಾಲದಲ್ಲಿ ತೃಣಬಿಂದು ಮಹರ್ಷಿಗಳ ಆಶ್ರಮವಿದ್ದಿತು. ಈ ಮಹರ್ಷಿಗಳು ತಮ್ಮ ಆಶ್ರಮದಲ್ಲಿದ್ದ ಸ್ತಂಭಾಕಾರದ ಒಂದು ಕಪ್ಪು ಶಿಲೆಯಲ್ಲಿ ಮಹಾವಿಷ್ಣುವಿನ ರೂಪವನ್ನು ಭಾವಿಸಿಕೊಂಡು ಉಪಾಸನೆ ಮಾಡುತ್ತಿದ್ದರು. ಈ ಮೂಲಕವಾಗಿಯೇ ತೃಣಬಿಂದು ಮಹರ್ಷಿಗಳು ಪರಂಧಾಮವನ್ನೈದಿದರು. ಬಹುಕಾಲದವರೆಗೆ ಈ ಕಂಬದ ಮೂರ್ತಿಗೆ ಬಿಸಿಲು ಮತ್ತು

ಮಳೆಯ ಅಭಿಷೇಕವೇ ಆಗುತ್ತಿತ್ತು. ಈ ಪ್ರಾಚೀನವಾದ ಶಿಲೆಯು ಶಿಥಿಲವಾಗುವುದೆಂದು ತಿಳಿದ ಅಂದಿನ ಭಕ್ತಾದಿಗಳು ಚತುರ ರೂವಾರಿಯನ್ನು ಕರೆಸಿ ಸುಂದರವಾದ ಶ್ರೀಮನ್ನಾರಾಯಣ ಮೂರ್ತಿಯನ್ನಾಗಿ ಕೆತ್ತಿಸಿ ಶ್ರೀವೆಂಕಟರಮಣಸ್ವಾಮಿ ಎಂದು ಕರೆದರು. ಇದರ ಸುತ್ತ ಗುಡಿಯನ್ನು ನಿರ್ಮಿಸಿ ಪೂಜಾದಿಗಳು ನಡೆಯುವಂತೆ ಮಾಡಿದರು.

ಈ ದೇವರ ಅರ್ಚನೆಗೆಂದು ಗುಡಿಯ ಪಕ್ಕದ ಜಮೀನುದಾರ ಗುಡ್ಡಪ್ಪ ಎಂಬುವರು ತುಲಸೀವನವನ್ನು ಮಾಡಿಸಿ, ಪಾದರಿ ಮರಗಳನ್ನು ಬೆಳೆಸಿದರು. ಇಂದಿಗೂ ಈ ಗುಡಿಯನ್ನು "ಕಂಬದರಾಯನ ಗುಡಿ" ಎಂದೇ ಕರೆಯುತ್ತಾರೆ. ಕಂಬದರಾಯನ ಗುಡಿ ಇರುವುದರಿಂದ ಕಪಿಲಾಕೊಲ್ಲಿಯು ಕಂಬದ ಕೊಲ್ಲಿಯಾಯಿತು. ಇಲ್ಲಿನ ಮಡುವನ್ನು ಕಂಬದ ಮಡುವೆನ್ನಲಾಯಿತು.

ಪ್ರಾಚೀನತೆಯ ಪ್ರಪ್ರಥಮ ಸಾಕ್ಷಿಯಾಗಿ ಈ ಕಂಬದರಾಯ ಅಥವಾ ವೆಂಕಟರಮಣಸ್ವಾಮಿ ದೇವಾಲಯವು ಉಳಿದುಬಂದಿರುವುದು ಹುಲ್ಲಹಳ್ಳಿಯ ಸುದೈವ.

## 2. ಆದಿಪರಮೇಶ್ವರ ಚೈತ್ಯಾಲಯ

ಹುಲ್ಲಹಳ್ಳಿಯಲ್ಲಿ ಭವ್ಯವಾದ ಆದಿ ಪರಮೇಶ್ವರ ಚೈತ್ಯಾಲಯವೊಂದಿತ್ತು. ಈ ಜೈನ ದೇವಾಲಯವು ಬಹುಶಃ ಗಂಗರಿಂದ ನಿರ್ಮಾಣವಾಗಿದ್ದಿರಬಹುದು. ಕ್ರಿ. ಶ. 1330 ರಲ್ಲಿ ಹುಲ್ಲಹಳ್ಳಿಯನ್ನು ಆಳುತ್ತಿದ್ದ ಪೆರುಮಾಳು ದೇವರಸನು ಈ ಪರಮೇಶ್ವರ ಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡಿಸಿದನು ಎಂಬುದಾಗಿ ಹುಲ್ಲಹಳ್ಳಿಯ ಶಿಲಾಶಾಸನವು ತಿಳಿಸುತ್ತದೆ. ಈ ಚೈತ್ಯಾಲಯದ ನೈವೇದ್ಯಗಳಿಗಾಗಿ ಸೈವಳ್ಳಿ, ನಾಗ ಸಮುದ್ರ ಮತ್ತು ಹುಲ್ಲಹಳ್ಳಿಯ ಸ್ವಲ್ಪ ಜಮೀನನ್ನೂ ಬಿಟ್ಟು ಕೊಟ್ಟಿದ್ದನು. ಕಾಲದ ವೈಪರೀತ್ಯಗಳಿಗೆ ಒಳಗಾಗಿ ಈ ಚೈತ್ಯಾಲಯವು ಇಂದಿನ ಜನಾಂಗದ ಸ್ಮರಣೆಗೂ ಬಾರದಂತೆ ನಾಶವಾಗಿದೆ.

### 3. ಶ್ರೀಕಪಿಲ ಮಲ್ಲಿಕಾರ್ಜುನ ದೇವಾಲಯ

ಶ್ರೀ ಮದ್ರಾಜಾಧಿರಾಜಂ ರಜತಗಿರಿವರಂ ರಾಜ ರಾಜ ಪ್ರಸೇವ್ಯಂ
ಸೋಮಾರ್ಕ ಶ್ರೇಯಸ್ಸಾಕ್ಷಂ ಸುರನರ ಭುಜಗಾದೀಶ
ಭೂ ಭೃದ್ಧರಂ ಸು
ತ್ರಾಮಂ ಬ್ರಹ್ಮಾ ಸುರಾದ್ಯೈರ್ಘಕುತಿ ರತಿಯೋಳೋಲೈಸ
ಲೊಪ್ಪಿರ್ದನಾರ್ಯಾ
ವಾಮಂ ವಂದ್ಯ ಪ್ರಸನ್ನಂ ಹರಿಣ ಪುರವರಂ ಶಾಂತಮಲ್ಲೇಶ ಲಿಂಗಂ
(ಶ್ರೀ ಚೆನ್ನವೀರಾರ್ಯ)

ಪರಶಿವನ ಪರಮ ಭಕ್ತನಾದ ಚೋಳರಾಜನು ತಮಿಳುನಾಡನ್ನು ಆಳುತ್ತಿದ್ದ ಕಾಲ. ಈ ಚೋಳರಾಜನು ಬಾಲಕನಾಗಿದ್ದಾಗ ಅಗ್ನಿಯ ಅಪಘಾತಕ್ಕೆ ಒಳಗಾಗಿ ಈತನ ಕಾಲುಗಳು ಸುಟ್ಟುಕಪ್ಪಾಗಿದ್ದುವು. ಅಂದಿನಿಂದ ಇವನು ಕರಿಕಾಲ ಚೋಳನೆಂದೇ ಪ್ರಸಿದ್ಧನಾದನು. ಇವನ ಜನ್ಮದೋಷದ ಫಲವಾಗಿ ಇವನಿಗೆ ಬ್ರಹ್ಮಪಿಶಾಚಿಯು ಹಿಡಿದುಕೊಂಡಿರಲು, ಪರಮೇಶ್ವರನು ಈ ಚೋಳನ ಕನಸಿನಲ್ಲಿ ಕಾಣಿಸಿಕೊಂಡು "108 ಪಂಚಾಯತನವನ್ನು (ಶಿವಲಿಂಗವನ್ನು) ಪ್ರತಿದಿನವೂ ಪ್ರತಿಷ್ಠಾಪಿಸುತ್ತಿದ್ದರೆ ಬ್ರಹ್ಮಪಿಶಾಚಿಯು ಪರಿಹಾರವಾಗುವುದು." ಎಂದು ತಿಳಿಸಿದನು. ಸಿಂಹಳದ್ವೀಪವನ್ನು ಗೆದ್ದು ಕಪ್ಪಕಾಣಿಕೆಯನ್ನು ಪಡೆದಿದ್ದ ಚೋಳರಾಜನು ತನ್ನ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಶಿವದೇವಾಲಯವನ್ನು ನಿರ್ಮಿಸುತ್ತಾ ಬಂದನು. ಈತನ ನಂತರದ ಚೋಳ ರಾಜರೂ ಈ ಪವಿತ್ರ ಕಾರ್ಯವನ್ನೇ ಮುಂದುವರಿಸಿದರು. ಕ್ರಿ. ಶ. 1016 ರಿಂದ 1044 ರ ವರೆಗೆ ಇದ್ದ ಒಂದನೇ ರಾಜೇಂದ್ರ ಚೋಳನ ಕೀರ್ತಿ ಸಿಂಹಳದಿಂದ ಗಂಗಾನದಿಯ ಮುಖಜ ಭೂಮಿಯವರೆಗೂ, ಅರಬ್ಬೀಸಮುದ್ರದಿಂದ ಮಲಯ ಪರ್ಯಾಯ ದ್ವೀಪದವರೆಗೂ ವ್ಯಾಪಿಸಿತು. ಕನ್ನಡ ನಾಡಿನಲ್ಲಿ ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಈ ರಾಜೇಂದ್ರಚೋಳನು ಪ್ರಸಿದ್ಧಗರಳಪುರಿಯ (ನಂಜನಗೂಡು) ಪಶ್ಚಿಮ ಭಾಗದಲ್ಲಿನ ಕಪಿಲಾ ನದಿಯ ಬಲದಂಡೆಯಲ್ಲಿನ ತೃಣಪುರಿಯು (ಹುಲ್ಲಹಳ್ಳಿ) ಶಿವಾಲಯವನ್ನು ಹೊಂದಲು ಸೂಕ್ತಸ್ಥಳವೆಂದು ಭಾವಿಸಿ, ಶಿವಾಲಯ ನಿರ್ಮಾಣಕ್ಕೆ ಸಕಲ ಸೌಲಭ್ಯಗಳನ್ನೂ ಒದಗಿಸಿ ರೂವಾರಿಗಳನ್ನು ನೇಮಿಸಿದನು. ಕೆಲವೇ ದಿನಗಳಲ್ಲಿ

ದೇವಾಲಯದ ನಿರ್ಮಾಣವೂ ಆಯಿತು. ಶುಭ ಮುಹೂರ್ತದಲ್ಲಿ ಶಿವ ಲಿಂಗದ ಪ್ರತಿಷ್ಠೆಯನ್ನು ಮಾಡಿ "ಶ್ರೀಕಪಿಲ ಮಲ್ಲಿಕಾರ್ಜುನ ಸ್ವಾಮಿ" ಎಂದು ಕರೆದನು.

ಭ್ರಮರಾಂಬ (ಪಾರ್ವತಿ) ಅಮ್ಮನವರ ಮೂರ್ತಿಯನ್ನು ಪ್ರತಿಷ್ಠಾಪಿಸಲು, ಕೂವಾರಿಗಳು ವಿಗ್ರಹವನ್ನು ಸುಂದರವಾಗಿ ಎಷ್ಟು ಬಾರಿ ಕಡೆದರೂ ಭಿನ್ನವಾಗುತ್ತಿತ್ತು. ಚೋಳರಾಜನು ಚಿಂತೆಗೊಳಗಾದನು. ಭ್ರಮರಾಂಬ ದೇವಿಯೇ ಈತನ ಕನಸಿನಲ್ಲಿ ಕಾಣಿಸಿಕೊಂಡು, "ತೃಣಬಿಂದು ಆಶ್ರಮದ ಉತ್ತರ ಭಾಗದ ಕಂಬದ ಮಡುವಿನ ಬಳಿ ಇದ್ದೇನೆ"-ಎಂಬುದಾಗಿ ಹೇಳಲು ಕೂಡಲೇ ರಾಜನು ಆ ಭೂಭಾಗವನ್ನು ಅಗೆಸಿ ನೋಡಲಾಗಿ ಅಮ್ಮನವರ ವಿಗ್ರಹವು ದೊರೆಯಿತು. ಅದನ್ನು ತಂದು ದೇವಾಲಯದಲ್ಲಿ ಪ್ರತಿಷ್ಠಾಪಿಸಿದನು. ಅಮ್ಮನವರು ಉತ್ತರ ಭಾಗದಿಂದ, ಷೋಡಶಕಲಾ ಪರಿಪೂರ್ಣತೆಯಿಂದ ದೇವಾಲಯದಲ್ಲಿ ನೆಲೆಸಿದ ಗುರುತಿಗೆ, ಅಮ್ಮನವರ ಎಡಗಾಲು ಉತ್ತರ ಭಾಗಕ್ಕೆ ತಿರುಗಿರುವುದನ್ನು ಈಗಲೂ ನೋಡಬಹುದು. ಭಾರತದ ಯಾವ ದೇವಾಲಯಗಳಲ್ಲಿಯೂ ಈ ರೀತಿಯ ವೈಶಿಷ್ಟ್ಯವುಳ್ಳ ಅಮ್ಮನವರ ವಿಗ್ರಹವನ್ನು ಕಾಣಲಾಗುವುದಿಲ್ಲ.

**ದೇವಾಲಯದ ಗರ್ಭಾಂಕಣ**

ಮೂಲ ದೇವರಾದ ಶ್ರೀಕಪಿಲ ಮಲ್ಲಿಕಾರ್ಜುನ ಸ್ವಾಮಿ ಅಥವಾ ಮಲ್ಲೇಶ್ವರ ಎಂಬ ಹೆಸರಿನ ಶಿವಲಿಂಗವಿದೆ. ಗರ್ಭಗುಡಿಯು ಪ್ರದಕ್ಷಿಣ ಪಥವನ್ನು ಹೊಂದಿದ್ದು ಹಂತ ಹಂತವಾಗಿ ಮೇಲೇರಿ ನಕ್ಷತ್ರಾಕಾರದ ತಳವುಳ್ಳ ವಿಮಾನವನ್ನು ಹೊಂದಿದೆ. ಮೂಲದೇವರು ಪೂರ್ವಾಭಿಮುಖವಾಗಿದ್ದು ಚಂಡ ಪ್ರಚಂಡರ ಭಿತ್ತಿ ಮೂರ್ತಿಯ ದ್ವಾರ ಪಾಲಕರನ್ನು ಹೊಂದಿದೆ.

**ನವರಂಗ**

ಗರ್ಭಗುಡಿಯ ಮುಂಭಾಗದಲ್ಲಿ ನವರಂಗವಿದೆ. ನವರಂಗವು, ನಡುವೆ ದುಂಡಗಿರುವ ಹೂದಾನಿಯಂತಹ ಆಕಾರದ ನಾಲ್ಕು ಕಂಬಗಳನ್ನು ಹೊಂದಿದೆ. ನವರಂಗದಲ್ಲಿ ಗರ್ಭಾಂಕಣದ ದ್ವಾರದ ಎಡಭಾಗದಲ್ಲಿ ನಾಗರ ಪ್ರತಿಷ್ಠೆಯನ್ನು ಮಾಡಲಾಗಿದೆ.

## ಶುಕನಾಶಿನಿ

ನವರಂಗವನ್ನು ದಾಟಿ ಬಂದರೆ ಶುಕನಾಶಿನಿ ಇದೆ. ಇದರ ಮಧ್ಯ ಭಾಗದಲ್ಲಿ ಮೂಲ ದೇವರಿಗೆ ಮುಖ ಮಾಡಿ ಕುಳಿತಿರುವ ಸುಂದರ ವೃಷಭನ ವಿಗ್ರಹವಿದೆ. ಶುಕನಾಶಿನಿಯಲ್ಲಿ ನವರಂಗ ದ್ವಾರದ ಬಲಭಾಗದಲ್ಲಿ ಗಣಪತಿಯ ಮೂರ್ತಿಯೂ, ಎಡಭಾಗದಲ್ಲಿ ಸುಬ್ರಹ್ಮಣ್ಯ ಮತ್ತು ನಾರಾಯಣಸ್ವಾಮಿಯ ಮೂರ್ತಿಗಳೂ ಇವೆ. ಉತ್ತರ ಭಾಗದ ಭಿತ್ತಿಯ ಬಳಿ, ಒಂದು ಮಂಟಪದಲ್ಲಿ ದಕ್ಷಿಣಾಭಿಮುಖವಾಗಿ ದುರ್ಗಿ ಅಮ್ಮನವರ ವಿಗ್ರಹವಿದೆ. ಶುಕನಾಶಿನಿಯು ಹೊರ ಪ್ರಾಕಾರದ ಪ್ರದಕ್ಷಿಣ ಪಥಕ್ಕೆ ಹೋಗಲು ದಕ್ಷಿಣ ದ್ವಾರವನ್ನೂ ಮತ್ತು ಮುಖಮಂಟಪಕ್ಕೆ ಬರಲು ಪೂರ್ವದ್ವಾರವನ್ನೂ ಹೊಂದಿದೆ.

## ಮುಖಮಂಟಪ

ಶುಕನಾಶಿನಿಯನ್ನು ದಾಟಿ ಬಂದರೆ ಪೂರ್ವ ದ್ವಾರದ ಎರಡೂ ಪಕ್ಕಗಳಲ್ಲಿ ಎತ್ತರವಾದ ಜಗಲಿ ಇದೆ. ಈ ಜಗಲಿಯ ಮೇಲೆ ಸುಮಾರು ಆರಡಿ ಎತ್ತರದ ಕಾಳ ಮತ್ತು ಮಹಾಕಾಳ ಭವ್ಯಮೂರ್ತಿಗಳು ದ್ವಾರಪಾಲಕರಾಗಿ ಶೋಭಿಸುತ್ತಿವೆ. ಎಡಭಾಗದ ಜಗಲಿಯ ಮೇಲೆ ನವಗ್ರಹ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ಇದೇ ಜಗಲಿಯ ನೈರುತ್ಯ ಮೂಲೆಯ ಸಣ್ಣ ಗುಡಿಯೊಂದರಲ್ಲಿ ವೀರಭದ್ರನ ಸುಂದರ ಮೂರ್ತಿಯಿದೆ. ಈ ಜಗಲಿಗಳಿಗೆ ಸೇರಿದಂತೆ ಮುಂದಿನ ಸ್ಥಳವು ಮುಖಮಂಟಪವನ್ನು ಹೊಂದಿದ್ದು ಮಧ್ಯಭಾಗದಲ್ಲಿ ಬಲಿ ಪೀಠವಿದೆ. ಮುಖಮಂಟಪದ ಕಂಬಗಳು ಸುಮಾರು ಹನ್ನೆರಡು ಅಡಿ ಎತ್ತರವಿದ್ದು ಉಬ್ಬು ಶಿಲ್ಪಗಳ ಸುಂದರ ಕೆತ್ತನೆಯನ್ನು ಹೊಂದಿದೆ.

ಈ ದೇವಾಲಯದ ವಿಗ್ರಹಗಳು ಕೃಷ್ಣಶಿಲೆಯಿಂದಲೂ, ಕಂಬ, ಭಿತ್ತಿ, ಮತ್ತು ಮೇಲು ಹಾಸುಗಳು ಕಗ್ಗಲ್ಲುಗಳಿಂದಲೂ ನಿರ್ಮಾಣಗೊಂಡಿದೆ.

## ಪ್ರದಕ್ಷಿಣ ಪಥ

ಮುಖಮಂಟಪದಿಂದ ಬಲಭಾಗದಲ್ಲಿ ಹೊರಟು ದೇವಾಲಯದ ಸುತ್ತಲೂ ವಿಶಾಲವಾದ ಪ್ರದಕ್ಷಿಣ ಪಥವಿದೆ. ಮೂಲದೇಗುಲದ ಹಿಂಭಾಗ

ದಲ್ಲಿ ಪ್ರದಕ್ಷಿಣ ಪಥವನ್ನು ಬಿಟ್ಟು ಎತ್ತರವಾದ ಜಗಲಿಯ ಮೇಲೆ ಒಂಭತ್ತು ಶಿವಲಿಂಗಗಳನ್ನು ಪ್ರತ್ಯೇಕ ಪ್ರತ್ಯೇಕ ಕೋಣೆಗಳಲ್ಲಿ ಪ್ರತಿಷ್ಠಿಸ ಲಾಗಿದೆ. ಮೂಲದೇಗುಲದ ಉತ್ತರ ಭಾಗದಲ್ಲಿ ಪ್ರದಕ್ಷಿಣ ಪಥವನ್ನು ಬಿಟ್ಟು, ಭ್ರಮರಾಂಬ ದೇವಿಯ ಗರ್ಭಗುಡಿಯಿದೆ. ಈ ಗುಡಿಯು ಪಾತಾಳಾಂಕಣ ಮತ್ತು ಮುಖಮಂಟಪವನ್ನೂ, ನಕ್ಷತ್ರಾಕಾರದ ತಳವುಳ್ಳ ವಿಮಾನವನ್ನೂ ಹೊಂದಿದೆ. ನವರಂಗದ ಭಿತ್ತಿಯ ಹೊರಭಾಗದಲ್ಲಿ ನೈರುತ್ಯ ಮೂಲೆಯಲ್ಲಿ ಚಂಡಿಕೇಶ್ವರನ ಗುಡಿಯಿದೆ.

### ಹೊರಪ್ರಾಕಾರದ ಭಿತ್ತಿ

ಮೂಲದೇಗುಲ, ಭ್ರಮರಾಂಬ ದೇಗುಲ ಮತ್ತು ಪಶ್ಚಿಮ ಭಾಗ ದಲ್ಲಿ ಪ್ರತಿಷ್ಠಿತ ಒಂಭತ್ತು ಲಿಂಗಗಳನ್ನೂ ಒಳಗೊಂಡಂತೆ ಪೂರ್ವದ ಮಹಾ ದ್ವಾರದಿಂದ ಸುತ್ತಲೂ ಸುಮಾರು ಹನ್ನೆರಡು ಅಡಿ ಎತ್ತರದ ಹೊರ ಪ್ರಾಕಾರದ ಗೋಡೆಯಿದೆ.

ಮಹಾದ್ವಾರದ ಹೊರಗೆ ಮತ್ತು ಒಳಭಾಗದಲ್ಲಿ ಎರಡೂ ಪಕ್ಕಗಳಲ್ಲಿ ಎತ್ತರವಾದ ಜಗಲಿಯಿದೆ. ಮಹಾದ್ವಾರದ ಹೊರಗೆ ಮುಂಭಾಗದಲ್ಲಿ ಸುಮಾರು ಮೂವತ್ತು ಅಡಿ ಎತ್ತರದ ದೀಪಸ್ತಂಭವಿದೆ. ದೀಪಸ್ತಂಭಕ್ಕೂ ಮಹಾದ್ವಾರಕ್ಕೂ ನಡುವೆ ಒಂದು ವಸಂತ ಕೊಳವಿದೆ.

### ಈ ದೇವಾಲಯದಲ್ಲಿ ನಡೆಯುವ ವಿಶೇಷೋತ್ಸವಗಳು

ಹಿಂದಿನ ದಿನಗಳಲ್ಲಿ ನಾಡದೊರೆಗಳ ಆಶ್ರಯದಲ್ಲಿ ವಿಶೇಷೋತ್ಸವ ಗಳು ವೈಭವದಿಂದ ನಡೆಯುತ್ತಿದ್ದವು. ವೃಷಭವಾಹನವೆಂಬ ಸುಂದರ ರಥವು ಈ ದೇವಾಲಯದಲ್ಲಿದ್ದು ಕಾರ್ತಿಕ ಮಾಸದಲ್ಲಿ ಹಾಗೂ ಶಿವರಾತ್ರಿ ಯಂದು ಊರಿನ ಪ್ರಮುಖ ಬೀದಿಗಳಲ್ಲಿ ರಥೋತ್ಸವವು ಜರುಗುತ್ತಿತ್ತು. ಕೃತ್ತಿಕೋತ್ಸವದಂದು ಲಕ್ಷದೀಪ ಮತ್ತು ಶಿವದೀಪಗಳು ಬೆಳಗುತ್ತಿದ್ದವು. ಚೈತ್ರ ಮಾಸದಲ್ಲಿ ವಸಂತೋತ್ಸವವು ನಡೆಯುತ್ತಿತ್ತು. ಇಂದು ರಥೋತ್ಸವಾದಿಗಳು ನಡೆಯುತ್ತಿಲ್ಲವಾದರೂ ಶಿವರಾತ್ರಿಯಂದು ನಾಲ್ಕು ಜಾವಗಳಲ್ಲೂ ವಿಶೇಷ ಪೂಜೆ, ಭಕ್ತಾದಿಗಳಿಂದ ಜಾಗರಣೆ ಮತ್ತು ಶಿವ ಧ್ಯಾನಾದಿಗಳು ನಡೆಯುತ್ತವೆ. ನಿತ್ಯಾಭಿಷೇಕ, ಅರ್ಚನೆಗಳೂ ನಡೆಯು ತ್ತವೆ.

## ಇತರ ಅಂಶಗಳು

ಕ್ರಿ. ಶ. 1619ರಲ್ಲಿ ಹುಲ್ಲಹಳ್ಳಿಯ ದೊರೆಯಾಗಿದ್ದ ಶ್ರೀ ಬಸವರಾಜ ಒಡೆಯರ್ ಎಂಬುವನು ಈ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಪೂಜಾದಿಗಳ ಸೌಕರ್ಯಕ್ಕಾಗಿ ಸ್ವಲ್ಪ ಭಾಗ ಭೂಮಿಯನ್ನು ಬಿಟ್ಟುಕೊಟ್ಟಿರುತ್ತಾನೆ ಎಂಬುದಾಗಿ ಈ ದೇವಾಲಯದ ಶಿಲಾಶಾಸನವು (ಸಂ–139) ತಿಳಿಸುತ್ತದೆ.

ಕ್ರಿ.ಶ. 1963ರಲ್ಲಿ 'ಧರ್ಮಕಾರ್ಯ ಧುರೀಣ' ಶ್ರೀ ಬಿ. ಚಂದ್ರಶೇಖರಪ್ಪನವರಿಂದ ಈ ದೇವಾಲಯವು ಮತ್ತೊಮ್ಮೆ ಜೀರ್ಣೋದ್ಧಾರಗೊಂಡು ಸುಣ್ಣ ಬಣ್ಣವನ್ನು ಹೊಂದಿತು.

ಸರ್ಕಾರದ ಮುಜರಾಯಿ ಇಲಾಖೆಯಿಂದ ಪ್ರತಿ ತಿಂಗಳೂ ಪೂಜೆಗಾಗಿ ಒಂಭತ್ತು (9–00) ರೂಪಾಯಿಗಳನ್ನು ಕೊಡಲಾಗುತ್ತಿದೆ. ದಿವಂಗತ ಶ್ರೀ ಕುಮಾರಸ್ವಾಮಿ ಪಂಡಿತರು ಬಹುಕಾಲ ಈ ದೇವಾಲಯದ ಅರ್ಚಕರಾಗಿ ತುಂಬು ನಿಷ್ಠೆಯಿಂದ ದುಡಿದರು. ಇಂದು ಅವರ ಮಕ್ಕಳಾದ ಶ್ರೀಕಂಠಪ್ರಸಾದ್ ಅವರು ತಂದೆಯ ಕಾರ್ಯವನ್ನು ಮುಂದುವರಿಸುತ್ತಿದ್ದಾರೆ. ಊರಿನ ಭಕ್ತಾದಿಗಳ ನೆರವಿನಿಂದಲೇ ಇಂದು ದೇವಾಲಯದ ಪೂಜಾದಿಗಳು ನಡೆಯುತ್ತಿವೆ.

ಹುಲ್ಲಹಳ್ಳಿಯು ಈ ಶಿವಾಲಯದ ಮುಂಭಾಗದಲ್ಲಿರುವುದು ಇಲ್ಲಿಯ ಮತ್ತೊಂದು ವಿಶೇಷವಾಗಿದೆ.

## 4 ತ್ರಿಜಗನ್ಮಂಗಲ ಚೈತ್ಯಾಲಯ

ಹುಲ್ಲಹಳ್ಳಿಯ ಶಿಲಾಶಾಸನ (ಸಂ. 138) ವು ತಿಳಿಸುವಂತೆ ಕ್ರಿ.ಶ. 1300ರಲ್ಲಿ ಹುಲ್ಲಹಳ್ಳಿಯನ್ನು ಆಳುತ್ತಿದ್ದ ಮಾಚೀರಾಜನ ಮಕ್ಕಳಾದ ಪೆರ್ಮಿದೇವರಸು ಮತ್ತು ಪೆರುಮಾಳು ದೇವರಸು ಎಂಬುವರು ಹೊಯ್ಸಳ ರಾಜಧಾನಿಯಾದ ದ್ವಾರಸಮುದ್ರದಿಂದ ಚತುರ ಶಿಲ್ಪಿಗಳನ್ನು ಕರೆಸಿಕೊಂಡು ಹುಲ್ಲಹಳ್ಳಿಯಲ್ಲಿ ತ್ರಿಜಗನ್ಮಂಗಲವೆಂಬ ಉತ್ತುಂಗ ಚೈತ್ಯಾಲಯವನ್ನು ಕಟ್ಟಿಸಿ ಮಾಣಿಕ್ಯದೇವರನ್ನು ಪ್ರತಿಷ್ಠಾಪಿಸಿದರು. ಈ ಮಾಣಿಕ್ಯದೇವರು ಚಿಂತಾಮಣಿಯಂತೆ ಭಕ್ತಾದಿಗಳ ಇಷ್ಟಾರ್ಥವನ್ನು ನೇರವೇರಿಸುತ್ತಿತ್ತು ಎಂದು ಶಾಸನವು ತಿಳಿಸುತ್ತದೆ. ಈ ತ್ರಿಜಗನ್ಮಂಗಲ ಚೈತ್ಯಾಲಯವು ಉದ್ಯಾನವನ, ಮಾನಸ್ತಂಭ, ನಾಲ್ಕೂ ದಿಕ್ಕುಗಳಲ್ಲಿ

ಶಿಲಾಬಾಲಿಕೆಯರಿಂದ ಕೂಡಿದ ಮಣಿಮಂಟಪಗಳೂ ಮತ್ತು ರಂಗ ಮಂದಿರವೇ ಮೊದಲಾದ ವಿವಿಧ ಭಾಗಗಳನ್ನು ಹೊಂದಿ ಮೃದು ಶಿಲೆಯ ವಿಗ್ರಹಗಳಿಂದ ಅಳವಡಿಸಲ್ಪಟ್ಟು ಶ್ರೇಷ್ಠ ಕಲಾಗಾರವೆಂಬಂತೆ ಕಣ್ಮನ ಗಳನ್ನು ತಣಿಸುವಂತಿತ್ತು. ಶ್ರುತಮುನಿ ಮತ್ತು ಚಂದ್ರಕೀರ್ತಿ ವ್ರತಿಗಳೇ ಮೊದಲಾದ ಜೈನ ಸಂನ್ಯಾಸಿಗಳ ತಪೋತಾಣವಾಗಿದ್ದ ಈ ಚೈತ್ಯಾಲಯವು ಆಗಮ-ಶಾಸ್ತ್ರಗಳ ವಿದ್ಯಾಲಯವೂ ಆಗಿತ್ತು. ಈ ಚೈತ್ಯಾಲಯವನ್ನು ನಿರ್ಮಿಸಿದ ಹುಲ್ಲಹಳ್ಳಿಯ ಅರಸರು ಅಮೃತ ಪಡಿಗಾಗಿ ಅಂದರೆ ಅಭಿಷೇಕ, ನೈವೇದ್ಯಗಳಿಗಾಗಿ ನೈವಳ್ಳಿಯ ಜಮೀನು, ನಾಗಸಮುದ್ರದ ತೋಟ ಮತ್ತು ಹುಲ್ಲಹಳ್ಳಿಗೆ ಸೇರಿದ ಜಮೀನನ್ನು ಬಿಟ್ಟು ಕೊಟ್ಟಿದ್ದರು. ಅಂದು ಜನಜೀವನದ ಕೇಂದ್ರ ಸ್ಥಾನವಾಗಿದ್ದ ಈ ಉತ್ತುಂಗ ಚೈತ್ಯಾಲಯವು ಕ್ರಿ.ಶ. 1750ರ ವೇಳೆಗೆ ಅರಸರು ಮತ್ತು ಜೈನ ಮುನಿಗಳ ಮರಣ ದಿಂದಲೂ, ಉಳಿದ ಜೈನಮತಾವಲಂಬಿಗಳು ಹುಲ್ಲಹಳ್ಳಿಯನ್ನು ಬಿಟ್ಟು ಹೋದ ಕಾರಣದಿಂದಲೂ ಯಾರ ರಕ್ಷಣೆಯೂ ಇಲ್ಲದೆ ಮಣ್ಣುಪಾಲಾ ಯಿತು. ಈ ವೇಳೆಯಲ್ಲಿ ಧಾರ್ಮಿಕ ಸಂಘರ್ಷವೋ ಅಥವಾ ರಾಜಕೀಯ ವಿಪ್ಲವವೋ ನಡೆದಿರುವ ಸಾಧ್ಯತೆ ಇದೆ. ಕೆಲವು ದಿನಗಳ ಹಿಂದೆ ವರದರಾಜಸ್ವಾಮಿ ದೇವಾಲಯದ ಜೀರ್ಣೋದ್ಧಾರದ ಕಾಲದಲ್ಲಿ ನೆಲ ವನ್ನು ಅಗೆಯುತ್ತಿದ್ದಾಗ ಕೆಲವು ಭಿನ್ನಗೊಂಡ ಜೈನ ವಿಗ್ರಹಗಳು ದೊರೆತಿರುವುದು ಈ ಎಲ್ಲ ಸಂಗತಿಗಳಿಗೆ ಪೂರಕವಾಗಿದೆ. ಮತ್ತು ಪರಿ ಶೋಧಿಸಿದರೆ ಸತ್ಯಾಂಶವು ಬೆಳಕಿಗೆ ಬರುವುದರಲ್ಲಿ ಸಂದೇಹವಿಲ್ಲ.

## 5 ಶ್ರೀ ವರದರಾಜಸ್ವಾಮಿ ದೇವಾಲಯ

ಶ್ರೀ ವಿನೋದ ಸುವೈಭವನೆ ಜಗ
ಜೀವನನೆ ನತಭಕುತರನು ನೆರೆ
ಕಾವವನೆ ಸುಮನಸರಿಗತ್ಯಂತ ಪ್ರಿಯತಮನೆ ।
ಕಾವ ಕರುಣಾರ್ಣವನೆ ನಿಗಮದ
ಜೀವನೆನಿಪನೆ ಶಾಮಲಾಂಗನೆ
ದೇವ ದೇವನೆ ತೃಣಪುರೀಶನೆ ವರದ ಸಲಹೆನ್ನ ।

(ಮನ್ನಾರು ಕೃಷ್ಣಯ್ಯ)

ಹನ್ನೊಂದನೇ ಶತಮಾನದ ಪ್ರಾರಂಭ. ದ್ವಾರಸಮುದ್ರದಲ್ಲಿ (ಹಳೇಬೀಡು) ರಾಜ್ಯಭಾರ ಮಾಡುತ್ತಿದ್ದ ಹೊಯ್ಸಳ ದೊರೆಯಾದ

ಒಂದನೇ ವಿನಯಾದಿತ್ಯನ ಮೊಮ್ಮಕ್ಕಳಾದ ಒಂದನೇ ಬಲ್ಲಾಳ, ಬಿಟ್ಟಿ ದೇವ ಮತ್ತು ಉದಯಾದಿತ್ಯರೆಂಬ ಮೂವರೂ ತಮ್ಮ ತಾತನ ರಾಜ್ಯ ವನ್ನು ವಿಸ್ತರಿಸತೊಡಗಿದರು. ಆ ಸಮಯದಲ್ಲಿ ಕರ್ನಾಟಕದಲ್ಲಿ ಚೋಳರ ಪ್ರಾಬಲ್ಯವಿತ್ತು. ಇವರು ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡಿದ್ದರು. ಚೋಳರನ್ನು ಸೋಲಿಸಿ ತಲಕಾಡನ್ನು ವಶಪಡಿಸಿಕೊಂಡ ಬಿಟ್ಟಿದೇವನು 'ತಲಕಾಡು ಕೊಂಡ' ಎಂಬ ಬಿರುದನ್ನು ಧರಿಸಿ ಕನ್ನಡ ನಾಡನ್ನು ಆಳತೊಡಗಿದನು. ಬಿಟ್ಟಿದೇವನು ಹೊಯ್ಸಳಾಧಿಪತಿಯಾದ ಅವಧಿಯಲ್ಲಿ ತಮಿಳು ನಾಡಿನಲ್ಲಿ ಮಹಾಶಿವಭಕ್ತನಾದ ಕುಲೋತ್ತುಂಗ ನೆಂಬ ಚೋಳನು ರಾಜ್ಯಭಾರವನ್ನು ಮಾಡುತ್ತಿದ್ದನು. ವಿಶಿಷ್ಟಾದ್ವೈತ ತತ್ವವನ್ನು ಸ್ಥಾಪಿಸಿ ಪ್ರಚಾರ ಮಾಡುತ್ತಿದ್ದ ವಿಷ್ಣುಭಕ್ತರಾದ ಶ್ರೀ ರಾಮಾನುಜಾಚಾರ್ಯರು ಕುಲೋತ್ತುಂಗ ಚೋಳನ ಹಿಂಸೆಯನ್ನು ತಡೆಯಲಾರದೆ ಕರ್ನಾಟಕವನ್ನು ಪ್ರವೇಶಿಸಿದರು. ಬಿಟ್ಟಿದೇವನು ಇವರಿಗೆ ಆಶ್ರಯ ನೀಡಿ ಕನ್ನಡನಾಡಿನಲ್ಲಿ ವಿಶಿಷ್ಟಾದ್ವೈತ ಧರ್ಮವನ್ನು ಪ್ರಚಾರ ಮಾಡಲು ಪ್ರೋತ್ಸಾಹವನ್ನು ನೀಡಿ ತಾನೂ ಸಹಾ ಶ್ರೀ ರಾಮಾನುಜಾ ಚಾರ್ಯರ ಶಿಷ್ಯತ್ವವನ್ನು ಹೊಂದಿದನು. ಮೂಲತಃ ಜೈನನಾದ ಬಿಟ್ಟಿ ದೇವನು ವೈಷ್ಣವ ಧರ್ಮಾವಲಂಬಿಯಾಗಿ ಕನ್ನಡನಾಡಿನಲ್ಲಿ ವಿಷ್ಣು ದೇವಾಲಯಗಳನ್ನು ನಿರ್ಮಿಸಿ ವಿಷ್ಣುವರ್ಧನನೆಂಬ ಹೆಸರಿಗೆ ಕಾರಣ ನಾದನು.

ಕ್ರಿ.ಶ. 1114 ರಿಂದ 1142 ರವರೆಗೆ ರಾಜ್ಯಭಾರವನ್ನು ನಿರ್ವಹಿಸಿದ ವಿಷ್ಣುವರ್ಧನನ ಆಳ್ವಿಕೆಯು ಸಾಂಸ್ಕೃತಿಕ ವೈಭವದ ಕಾಲವಾಗಿತ್ತು. ವಿಷ್ಣುವರ್ಧನನು ತನ್ನ ಆಳ್ವಿಕೆಗೆ ಒಳಪಟ್ಟ ಹುಲ್ಲಹಳ್ಳಿಯಲ್ಲೊಂದು ವಿಷ್ಣುದೇವಾಲಯವನ್ನು 'ಶ್ರೀ ವರದರಾಜಸ್ವಾಮಿ' ಎಂಬ ಹೆಸರಿನಲ್ಲಿ ನಿರ್ಮಾಣ ಮಾಡಿದನು. ಶ್ರೀ ರಾಮಾನುಜಾಚಾರ್ಯರ ಶಿಲಾಮೂರ್ತಿ ಯನ್ನೂ ಪ್ರತಿಷ್ಠಿಸಿ ತನ್ನ ಗುರುಭಕ್ತಿಯನ್ನೂ ವ್ಯಕ್ತಪಡಿಸಿದನು.

ವಿಷ್ಣುವರ್ಧನನ ಆಸ್ಥಾನದಲ್ಲಿ 'ಹುಲ್ಲ' ನೆಂಬುವನು ಕೋಶಾಧಿ ಕಾರಿಯಾಗಿದ್ದುದು ಒಂದು ವಿಶೇಷ. ಈ ಹುಲ್ಲನು ಹುಲ್ಲಹಳ್ಳಿಯವ ನಾಗಿದ್ದು ಇವನ ಸೇವೆಯನ್ನು ಗಮನಿಸಿ 'ಹುಲ್ಲನ' ಹಳ್ಳಿಯಲ್ಲಿ ವಿಷ್ಣು ದೇವಾಲಯವನ್ನು ನಿರ್ಮಿಸಿರಬಹುದೆಂಬುದು ಸಂಶೋಧನಾರ್ಹವಾಗಿದೆ.

ಈ ದೇವಾಲಯವು ಹೊಯ್ಸಳ ಶೈಲಿಯಲ್ಲಿರದೆ ದ್ರಾವಿಡ ಶೈಲಿಯಲ್ಲಿ

ರುವುದರಿಂದ ಈ ಹಿಂದೆ ಇದು ಒಂದು ಜೈನ ಬಸದಿಯಾಗಿದ್ದು ವಿಷ್ಣು ವರ್ಧನನ ಕಾಲಕ್ಕೆ ವೈಷ್ಣವ ದೇವಾಲಯವಾಗಿ ಪರಿವರ್ತನೆ ಹೊಂದಿರುವ ಸಾಧ್ಯತೆಯೂ ಇದೆ.

## ದೇವಾಲಯದ ಗರ್ಭಾಂಕಣ

ಮೂಲದೇವರಾದ ಶ್ರೀವರದರಾಜ ಸ್ವಾಮಿಯು ಶಂಖಚಕ್ರ ಗದಾ ಧಾರಿಯಾಗಿ, ಅಭಯ ಹಸ್ತದಿಂದ ಕೂಡಿ, ಬೆಂಗಡೆಯಲ್ಲಿ ವಿಷ್ಣುವಿನ ದಶಾವತಾರದ ಕೆತ್ತನೆಯುಳ್ಳ ಪ್ರಭಾವಳಿಯನ್ನು ಹೊಂದಿ ಸುಂದರ ನಿಲು ಭಂಗಿಯಲ್ಲಿ ಕಂಗೊಳಿಸುತ್ತಿದೆ.

ಈ ಮೂರ್ತಿಯನ್ನು ಮೊದಲಿಗೆ 'ಸೌಮ್ಯ ನಾರಾಯಣ'ನೆಂದೂ ಮತ್ತು ಹುಲ್ಲಹಳ್ಳಿಯ ಶಾಸನದ ಪ್ರಕಾರ 'ಅಲ್ಲಾಳನಾಥ ಸ್ವಾಮಿ' ಎಂದೂ ಕರೆಯಲ್ಪಡುತ್ತಿದ್ದು, ಕಂಚಿಯಿಂದ ತರಲ್ಪಟ್ಟ ವಿಗ್ರಹವೆಂದು ಪ್ರತೀತಿ ಯಿದೆ. ಗರ್ಭಾಂಕಣವು ಪ್ರದಕ್ಷಿಣ ಪಥವನ್ನು ಹೊಂದಿ, ಪಾತಾಳಾಂಕಣ ವನ್ನೂ ಹೊಂದಿದೆ.

## ನವರಂಗ

ಪಾತಾಳಾಂಕಣವನ್ನು ದಾಟಿ ಬಂದರೆ, ಇರುವುದೇ ನವರಂಗ ಮಂಟಪ. ನವರಂಗದಲ್ಲಿ ಪಾತಾಳಾಂಕಣ ಪ್ರವೇಶದ್ವಾರದ ಇಕ್ಕೆಡೆ ಗಳಲ್ಲೂ ದ್ವಾರಪಾಲಕರಾಗಿ ಜಯ-ವಿಜಯರ ಬೃಹತ್ ಮೂರ್ತಿಗಳನ್ನು ನಿಲ್ಲಿಸಲಾಗಿದೆ. ನವರಂಗದಲ್ಲಿ ನಿಂತು ದರ್ಶನ ಪಡೆಯಬಹುದಾದ ರೀತಿ ಯಲ್ಲಿ ನವರಂಗದ ಬಲಭಾಗದಲ್ಲಿ ಉತ್ತರಾಭಿಮುಖವಾಗಿ ಉಗ್ರನರಸಿಂಹ ಸ್ವಾಮಿಯ ಗರ್ಭಗುಡಿಯಿದೆ.

19ನೇ ಶತಮಾನದ ಅಂತ್ಯದಲ್ಲಿ ಉಗ್ರನರಸಿಂಹಸ್ವಾಮಿಗೆ ವಿಶೇಷ ತಳಿಗೆ ಪೂಜೆ ನಡೆಸುವ ಸಂದರ್ಭದಲ್ಲಿ ಮಂಗಳಾರತಿಯನ್ನು ಬೆಳಗಿದ ಕೂಡಲೇ ನರಸಿಂಹಸ್ವಾಮಿಯ ಎದುರು ಬೀದಿಯಲ್ಲಿದ್ದ 15-20 ಅಯ್ಯಂಗಾರರ ಮನೆಗಳು ತಾವಾಗಿಯೇ ಹತ್ತಿಕೊಂಡು ಬೆಂಕಿಯಿಂದ ಉರಿದುಹೋದವು. ಆ ಮನೆಯ ಜನರು ಹುಲ್ಲಹಳ್ಳಿಯಿಂದ ನಿರ್ಗಮಿಸಿ ಮೈಸೂರು ಮೊದಲಾದ ನಗರವನ್ನು ಸೇರಿದರು. ಅಂದು ಉಗ್ರನರಸಿಂಹನ ಎಡಬಲಭಾಗಗಳಲ್ಲಿ ಜಲವಾಸ, ಭೂಮಿವಾಸ ಮತ್ತು ಧಾನ್ಯಾವಾಸಗಳಿಂದ

ಪವಿತ್ರಗೊಂಡ ಶ್ರೀದೇವಿ ಮತ್ತು ಭೂದೇವಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿ ಯೋಗ ಭೋಗ ನರಸಿಂಹಸ್ವಾಮಿಯನ್ನಾಗಿ ಪರಿವರ್ತಿಸಲಾಯಿತು.

ನವರಂಗವು ಉತ್ತರದ್ವಾರ ಮತ್ತು ಪೂರ್ವದ್ವಾರವನ್ನೂ ಹೊಂದಿದೆ. ಉತ್ತರದ್ವಾರದ ಬಲಭಾಗದಲ್ಲಿ ಒಳಗುಡಿಯಲ್ಲಿ ದೇವತೆಗಳ ಅಗ್ರ ಪೂಜಾರ್ಹ ನಾದ ವಿಶ್ವಕ್ಸೇನನ ವಿಗ್ರಹವಿದೆ. ನವರಂಗದ ಪೂರ್ವದ್ವಾರದ ಬಾಗಿಲು ವಾಡದಲ್ಲಿ ಬಾಲಕೃಷ್ಣನ ವಿವಿಧ ಲೀಲೆಗಳನ್ನು ಕೆತ್ತಲಾಗಿದೆ.

## ಮುಖ ಮಂಟಪ

ನವರಂಗದ ಪೂರ್ವದ್ವಾರವನ್ನು ದಾಟಿ ಬಂದರೆ ಒಂದು ಅಂಕಣ ಅಗಲವುಳ್ಳ ಮತ್ತು ಐದು ಅಂಕಣ ಉದ್ದವುಳ್ಳ ಜಗತಿಯಿದೆ. ಈ ಜಗತಿಯ ಉತ್ತರ ಮತ್ತು ದಕ್ಷಿಣ ಭಾಗದಲ್ಲಿ ಪೊಯ್ಯ್‌ ಪೈ ಆಳ್ವಾರ್‌ ಮತ್ತು ಪೂಥತ್ತಾಳ್ವಾರರ ವಿಗ್ರಹವುಳ್ಳ ಒಂದೊಂದು ಗುಡಿಯಿದೆ.

ಜಗತಿಯನ್ನು ಇಳಿದು ಬಂದರೆ ಹನ್ನೆರಡು ಅಡಿಗಿಂತಲೂ ಎತ್ತರವಾದ ಎಂಟು ಕಂಭಗಳುಳ್ಳ ವಿಸ್ತಾರವಾದ ಮುಖ ಮಂಟಪವಿದೆ. ಮುಖ ಮಂಟಪದ ಉತ್ತರ ಭಾಗದಲ್ಲಿ ನಮ್ಮಾಳ್ವಾರ್‌ ಮತ್ತು ರಾಮಾನುಜಾಚಾರ್ಯರ ಮೂರ್ತಿಯುಳ್ಳ ಎರಡು ಗುಡಿಗಳು ದಕ್ಷಿಣಾಭಿಮುಖ ವಾಗಿವೆ. ಮಂಟಪದ ದಕ್ಷಿಣ ಭಾಗದಲ್ಲಿ ಮನ್ನಾರುಕೃಷ್ಣ ಮತ್ತು ವೇಣು ಗೋಪಾಲರ ಸುಂದರ ಮೂರ್ತಿಯುಳ್ಳ ಎರಡು ಗುಡಿಗಳು ಉತ್ತರಾಭಿ ಮುಖವಾಗಿವೆ. ಈ ನಾಲ್ಕೂ ಗುಡಿಗಳು ಜಗತಿಯ ಆಧಾರದ ಮೇಲಿವೆ.

18ನೇ ಶತಮಾನದ ಅಂತ್ಯದಲ್ಲಿ ಟಿಪ್ಪುಸುಲ್ತಾನನು ಮೈಸೂರು ಸಂಸ್ಥಾನದ ಅಧಿಕಾರ ಸೂತ್ರವನ್ನು ಹಿಡಿದಿದ್ದನು. ಈತನು ಶ್ರೀರಂಗ ಪಟ್ಟಣದ ಶ್ರೀರಂಗನಾಥ ಮತ್ತು ನಂಜನಗೂಡಿನ ನಂಜುಂಡೇಶ್ವರನ ಪರಮ ಭಕ್ತನಾಗಿದ್ದನು. ಈತನಿಂದ ಹುಲ್ಲಹಳ್ಳಿಯ ವರದರಾಜಸ್ವಾಮಿ ದೇವಾಲಯಕ್ಕೆ ಧಕ್ಕೆ ಬರುವುದೆಂದು ಭಾವಿಸಿ ಅದರ ರಕ್ಷಣೆಗಾಗಿ ದೇವಾಲಯದ ನವರಂಗದ ಕಪೋತದ ಮೇಲೆ ಶ್ರೀರಂಗನಾಥಸ್ವಾಮಿಯ ಮೂರ್ತಿಯನ್ನು ಗಾರೆಗಚ್ಚಿನಿಂದ ಶ್ರೀವೈಷ್ಣವರು ಮಾಡಿಸಿ, ಅದಕ್ಕೆ ಪೂಜಾದಿಗಳನ್ನು ಮಾಡುತ್ತಿದ್ದರು. ಇಂದಿಗೂ ಭಾವಿಹಟ್ಟಿ ಲಿಂಗಪ್ಪನವರಿಂದ ಪುನರ್ನಿರ್ಮಾಣಗೊಂಡ ಈ ಮೂರ್ತಿಯನ್ನು ಕಾಣಬಹುದು.

## ಪೆರಂದೇವಿ ಅಥವಾ ರಂಗನಾಯಕಿ ಅಮ್ಮನವರ ಗುಡಿ

ಮೂಲದೇವರ ವಾಯುವ್ಯಭಾಗದಲ್ಲಿ ಪೆರಂದೇವಿ ಅಥವಾ ರಂಗನಾಯಕಿ (ಲಕ್ಷ್ಮೀ) ಅಮ್ಮನವರ ಗುಡಿಯಿದೆ. ಈ ಅಮ್ಮನವರ ಮೂರ್ತಿಯು ಪದ್ಮಾಸನಾಸೀನವಾಗಿದೆ. ಈ ಗರ್ಭಗುಡಿಯ ಮುಂದೆ ಪಾತಾಳಾಂಕಣವಿದ್ದು ಇದಕ್ಕೆ ಸೇರಿದಂತೆ ಒಂದು ಶಯನ ಮಂದಿರವಿದೆ.

ಪಾತಾಳಾಂಕಣವನ್ನು ದಾಟಿಬಂದರೆ ಜಗತಿಯಿದೆ. ಈ ಜಗತಿಗೆ ಸೇರಿದಂತೆ ದಕ್ಷಿಣ ಭಾಗದಲ್ಲಿ ಉತ್ತರಾಭಿಮುಖವಾಗಿ ಕಾಳಿಂಗಮರ್ಧನ ಮತ್ತು ಸಿಂಹವಾಹನದಲ್ಲಿ ವೇದಾಂತ ದೇಶಿಕರ ಮೂರ್ತಿಗಳಿರುವ ಎರಡು ಗುಡಿಗಳಿವೆ.

## ಹೊರಪ್ರದಕ್ಷಿಣ ಪಥ

ಮುಖಮಂಟಪದಿಂದ ಬಲಭಾಗದಲ್ಲಿ ಹೊರಟು ದೇವಾಲಯದ ಸುತ್ತಲೂ ವಿಶಾಲವಾದ ಪ್ರದಕ್ಷಿಣ ಪಥವಿದೆ. ಈ ಪಥದ ನೈರುತ್ಯ ಮೂಲೆಯಲ್ಲಿ ಮುಖಮಂಟಪವನ್ನು ಹೊಂದಿದ ಸೀತಾಲಕ್ಷ್ಮಣ ಆಂಜನೇಯ ಸಮೇತನಾದ ಕೋದಂಡರಾಮನ ದೇಗುಲವಿದೆ. ಈಶಾನ್ಯ ಮೂಲೆಯಲ್ಲಿ ಸುಮಾರು ಹನ್ನೆರಡು ಅಡಿ ಎತ್ತರದ ಬೃಂದಾವನ ಮಂಟಪವಿದೆ. ಈ ಮಂಟಪದ ಬಳಿ ಬೆಲ್ಲದಚ್ಚಿನಂತಹ ಭಾವಿಯೊಂದಿದೆ.

## ಹೊರ ಪ್ರಾಕಾರದ ಭಿತ್ತಿ

ಮೂಲದೇಗುಲ, ಕೋದಂಡರಾಮನ ಮಂಟಪ, ಪೆರಂದೇವಿ ಅಮ್ಮನವರ ಗುಡಿ ಮತ್ತು ಬೃಂದಾವನವನ್ನೊಳಗೊಂಡಂತೆ ಮಹಾದ್ವಾರದಿಂದ ಸುತ್ತಲೂ ಸುಮಾರು ಹನ್ನೆರಡು ಅಡಿ ಎತ್ತರದ ಹೊರ ಪ್ರಾಕಾರದ ಗೋಡೆಯಿದೆ.

ಮಹಾದ್ವಾರದ ಎರಡೂ ಪಕ್ಕಗಳಲ್ಲಿ ಹೊರಗೆ ಮತ್ತು ಒಳಭಾಗದಲ್ಲಿ ಜಗತಿಗಳಿವೆ.

## ದೇವಾಲಯದ ಹೊರವಲಯ

ದೇವಾಲಯದ ಹೊರಗೆ ಅಂದರೆ ಮಹಾದ್ವಾರದ ಮುಂಭಾಗದಲ್ಲಿ ಒಂದು ಬಲಿ ಪೀಠವಿದೆ. ಇದರ ಮುಂಭಾಗದಲ್ಲಿ ಕಲ್ಲಿನ ಚೌಕಟ್ಟಿನ ಮೇಲೆ

ನಿಂತಿರುವ ಸುಮಾರು ಮುವತ್ತು ಅಡಿ ಎತ್ತರದ ದೀಪಸ್ತಂಭವಿದೆ. ಈ ದೀಪಸ್ತಂಭದ ಬುಡದಲ್ಲಿ ಶಂಖ ಮತ್ತು ಗರುಡ ಚಿಹ್ನೆಯನ್ನು ಕೆತ್ತಲಾಗಿದೆ. ದೀಪಸ್ತಂಭದ ಮುಂದೆ ಸ್ವಲ್ಪ ದೂರದಲ್ಲಿ ಸುಮಾರು ಮೂವತ್ತು ಅಡಿ ಎತ್ತರದ ವಸಂತೋತ್ಸವ ಅಥವಾ ಉಯ್ಯಾಲೋತ್ಸವ ಮಂಟಪವೂ, ಈ ಮಂಟಪದ ಉತ್ತರ ಭಾಗದಲ್ಲಿ ಒಂದು ವಸಂತಕೊಳವೂ ಇದೆ. ದೇವಾಲಯದ ಮುಂಭಾಗದಲ್ಲಿ, ಹೊರಪ್ರಾಕಾರದ ಉತ್ತರ ಮತ್ತು ದಕ್ಷಿಣ ಭಾಗದಲ್ಲಿ ಒಂದೊಂದು ಕಲ್ಯಾಣ ಮಂಟಪವಿದೆ. ದೇವಾಲಯದ ಮುಂಭಾಗದ ದೀಪಸ್ತಂಭ ಮತ್ತು ಕಲ್ಯಾಣ ಮಂಟಪಗಳನ್ನೊಳಗೊಂಡಂತೆ ವಿಶಾಲವಾದ ಹೊರಗೋಡೆಯನ್ನು (ಕಾಂಪೌಂಡ್) ಹಾಕಿ ಕಬ್ಬಿಣದ ಬಾಗಿಲನ್ನು ಜೋಡಿಸಲಾಗಿದೆ.

## ದೇವಾಲಯದ ವಿಶೇಷೋತ್ಸವಗಳು

ನಾಡ ದೊರೆಗಳ ಕಾಲದಲ್ಲಿ ದೇವಾಲಯದಲ್ಲಿ ವೈಭವದ ಉತ್ಸವಗಳು ನಡೆಯುತ್ತಿದ್ದವು. ಸ್ವಾತಿನಕ್ಷತ್ರ, ಫಾಲ್ಗುಣ ಮಾಸದಲ್ಲಿ ಬ್ರಹ್ಮೋತ್ಸವವೂ, ಚೈತ್ರ-ವೈಶಾಖ ಮಾಸಗಳಲ್ಲಿ ಕಲ್ಯಾಣೋತ್ಸವ ಮತ್ತು ಶಯನೋತ್ಸವಗಳೂ, ಆಷಾಡ ಮಾಸದಲ್ಲಿ ಡೋಲೋತ್ಸವ ಅಥವಾ ಉಯ್ಯಾಲೋತ್ಸವವೂ, ಯುಗಾದಿ, ಗೋಕುಲಾಷ್ಟಮಿ, ವಿಜಯದಶಮಿ ಮತ್ತು ರಥಸಪ್ತಮಿಗಳಂದು ಗರುಡೋತ್ಸವವೂ ವೈಭವದಿಂದ ನಡೆಯುತ್ತಿದ್ದಿತು. ಈ ರಥೋತ್ಸವಗಳು ದೇವಾಲಯದಿಂದ ಉತ್ಸವ ಮೂರ್ತಿಯನ್ನು ರಥದಲ್ಲಿ ಹೊತ್ತು ಮಲ್ಲೇಶ್ವರ ದೇಗುಲದ ಮುಂಭಾಗದ ರಸ್ತೆಯಿಂದ ಹೊರಟು ಕಂಬದರಾಯನ ಗುಡಿಯನ್ನು ದರ್ಶಿಸಿ, ದಕ್ಷಿಣಾಭಿಮುಖವಾಗಿ ಹೊರಟು ಮತ್ತೆ ಪಶ್ಚಿಮಾಭಿಮುಖವಾಗಿ ತಿರುಗಿ ಶ್ರೀವರದರಾಜಸ್ವಾಮಿ ದೇಗುಲದ ಎದುರು ರಸ್ತೆಯಲ್ಲಿ ಬಂದು ದೇವಾಲಯವನ್ನು ಸೇರುತ್ತಿದ್ದವು. ದೇವಾಲಯದಲ್ಲಿ ವರದರಾಜ ಜಯಂತಿ. ನರಸಿಂಹ ಜಯಂತಿ ಮತ್ತು ರಾಮಾನುಜಾಚಾರ್ಯರ ಜಯಂತಿಗಳು ವೈಶಾಖ ಮಾಸದಲ್ಲೂ, ಚೈತ್ರಮಾಸದಲ್ಲಿ ಶ್ರೀರಾಮ ಜಯಂತಿಯೂ, ಕರ್ಕಾಟಕ ಮಾಸದಲ್ಲಿ ಪೆರುಂದೇವಿ ಅಥವಾ ರಂಗನಾಯಕಿ ಅಮ್ಮನವರ ಜಯಂತಿಯೂ ನಡೆಯುತ್ತಿದ್ದವು.

ಶ್ರೀವರದರಾಜಸ್ವಾಮಿಯ ಉತ್ಸವದ ರಥವು ಸಂಪೂರ್ಣವಾಗಿ ಕಂಚಿನಿಂದ (ಪಂಚಲೋಹ) ನಿರ್ಮಿಸಲ್ಪಟ್ಟಿದ್ದು ಕಿರುಗೆಜ್ಜೆಗಳನು

ಸುತ್ತಲೂ ಆಳವಡಿಸಲಾಗಿತ್ತು. ಈ ರಥವನ್ನು ಶ್ರೀವರದರಾಜನ ಭಕ್ತನಾಗಿದ್ದ ಹುಲ್ಲಹಳ್ಳಿಯ ಪಾಳೆಯಗಾರ ಡಣಾನಾಯಕನು ಮಾಡಿಸಿದ್ದನೆಂದು ಸ್ಥಳಮಾಹಿತಿಯಿಂದ ತಿಳಿಯುತ್ತದೆ. ರಥದ ಉತ್ಸವ ಮೂರ್ತಿಯನ್ನು ಹೊತ್ತು ಬರುತ್ತಿದ್ದರೆ ರಥದ ಕಿರುಗೆಜ್ಜೆಗಳ ಸುನಾದವು ಸುಮಧುರದಿಂದ ಕೂಡಿ ಭಕ್ತಾದಿಗಳನ್ನು ಆನಂದ ಪರವಶರನ್ನಾಗಿ ಮಾಡುತ್ತಿತ್ತು. ಈ ಸುಪ್ರಸಿದ್ಧವಾದ ಕಂಚಿನರಥವು ಕಾರಣಾಂತರಗಳಿಂದ ಕಂಬದ ಮಡುವಿನಲ್ಲಿ ಮುಳುಗಿ ಹೋಯಿತು ಎಂದು ಹುಲ್ಲಹಳ್ಳಿಯ ಜನರಲ್ಲಿ ಕರ್ಣಾಕರ್ಣಿಕೆಯಾಗಿ ಬಂದಿರುವ ವಿಷಯವಾಗಿದೆ.

ಇಂದು ಈ ದೇವಾಲಯದಲ್ಲಿ ಹಿಂದಿನ ಯಾವ ವೈಭವವೂ ಇಲ್ಲವಾಗಿದೆ. ನಿತ್ಯಪೂಜೆ, ಅಭಿಷೇಕ ಮತ್ತು ವಿಜಯದಶಮಿಯಂದು ಉತ್ಸವ, ಶ್ರಾವಣಮಾಸದಲ್ಲಿ ಭಕ್ತಾದಿಗಳಿಂದ ವಿಶೇಷ ಪೂಜೆಗಳೂ ನಡೆಯುತ್ತಿವೆ.

## ಇತರೆ ಅಂಶಗಳು

ಶ್ರೀವರದರಾಜಸ್ವಾಮಿ ದೇವಾಲಯವು, ದ್ರಾವಿಡ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಚತುರಸ್ರಾಕಾರ ಜಗತಿಯ ಮೇಲೆ ಅಧಿಷ್ಠಾನವನ್ನು ನಿರ್ಮಿಸಲಾಗಿದೆ. ಮೂಲದೇವರ ಮತ್ತು ಅಮ್ಮನವರ ಗರ್ಭಗುಡಿಯು ನಕ್ಷತ್ರಾಕಾರದ ತಳವುಳ್ಳ ವಿಮಾನವನ್ನು ಹೊಂದಿದೆ. ದೇವಾಲಯದ ಮೂರ್ತಿಗಳು ಕೃಷ್ಣಶಿಲೆಯಿಂದಲೂ, ಕಂಬ ಭಿತ್ತಿಗಳು ಕಗ್ಗಲ್ಲುಗಳಿಂದಲೂ ನಿರ್ಮಾಣವಾಗಿವೆ. ದೇವಾಲಯವು ಪೂರ್ವಾಭಿಮುಖವಾಗಿದೆ.

ಹುಲ್ಲಹಳ್ಳಿಯ ಶಿಲಾಶಾಸನವು ತಿಳಿಸುವಂತೆ ಕ್ರಿ.ಶ. 1332ರಲ್ಲಿ ಶ್ರೀವರದರಾಜಸ್ವಾಮಿಯ ಅಂಗಭೋಗ ಮತ್ತು ರಂಗಭೋಗಗಳಿಗೆ ಹೊಯ್ಸಳ ಚಕ್ರವರ್ತಿಯಾದ ಮೂರನೇ ವೀರಬಲ್ಲಾಳನು ಕೇತಮ್ಮಹಳ್ಳಿಯನ್ನೂ, ಕ್ರಿ.ಶ. 1634ರಲ್ಲಿ ತೃಣಪುರಾಧೀಶ ಬಸವರಾಜ ಒಡೆಯನು ಸ್ವಲ್ಪ ಜಮೀನನ್ನೂ ಮತ್ತು ತೆರಕಣಾಂಬಿ ಶಾಸನದ ಪ್ರಕಾರ ಇದೇ ಬಸವರಾಜ ಒಡೆಯನು ನರಸಿಂಹಸ್ವಾಮಿಗೆ ಪಿಲ್ಲಹಳ್ಳಿ ಗ್ರಾಮವನ್ನೂ, ತರಗನಹಳ್ಳಿಯ ಬಡಗಿನ ಹಲಸಿನ ನಾಲಾ ಹೊಲವನ್ನೂ, ಹುಲ್ಲಹಳ್ಳಿಯ ಪೂರ್ವಭಾಗದ ಗದ್ದೆಯನ್ನೂ ಮತ್ತು ಕಾರೆಯದ ಕೆಳಗಣ ಪುಟ್ಟರಸನ ತೋಟವನ್ನೂ ಧಾರಾಪೂರ್ವಕವಾಗಿ ನೀಡಿರುತ್ತಾರೆ.

ಇಂದು ದೇವಾಲಯವು ಕರ್ನಾಟಕ ಸರ್ಕಾರದ ಮುಜರಾಯಿ

ಇಲಾಖೆಗೆ ಸೇರಿದ್ದು ಪ್ರತಿತಿಂಗಳೂ ಪೂಜಾದಿಗಳಿಗಾಗಿ ಒಂಭತ್ತು ರೂಪಾಯಿಗಳನ್ನು ನೀಡಲಾಗುತ್ತಿದೆ. ಅರ್ಚಕ ಗೋಪಾಲಯ್ಯಂಗಾರ್ ಈ ದೇವಾಲಯದ ಪೂಜಾದಿಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಗ್ರಾಮದ ಜನರು ಶ್ರೀ ಶಿವನಾಗಪ್ಪ ಹೆಚ್. ಎಸ್. ನವರ ನೇತೃತ್ವದಲ್ಲಿ (ಈಗ ಇವರು ಮಾಜಿ ಛೇರ್ಮನ್) ಸರ್ಕಾರದಿಂದ ಅನುದಾನವನ್ನು ಪಡೆದು ಮತ್ತು ಭಕ್ತಾಗಳಿಂದ ಹಣವನ್ನು ಸಂಗ್ರಹಿಸಿ ಪ್ರಾಚೀನವಾದ ಈ ದೇವಾಲಯವನ್ನು ಪುನರುಜ್ಜೀವನಗೊಳಿಸಿ ಹಳೆಯ ನೆನಪುಗಳನ್ನು ಮರುಕಳಿಸುವಂತೆ ಮಾಡಿರುತ್ತಾರೆ.

## 6. ಗ್ರಾಮದೇವತೆ ಮಾರಮ್ಮನ ಗುಡಿ

ಗ್ರಾಮರಕ್ಷಣೆಗೆಂದು ಗ್ರಾಮ ಹುಟ್ಟಿದಂದೇ ಪ್ರತಿಷ್ಠಾಪಿಸಲ್ಪಟ್ಟ ನಂಬಿಕೆಯ ದೇವತೆಯಾದ ಮಾರಮ್ಮನ ದೇವಾಲಯವು ಊರಿನ ನಡುವೆ ಕಂಗೊಳಿಸುತ್ತಿದೆ. ಸಾಮಾನ್ಯವಾಗಿ ಶಿವರಾತ್ರಿಯಂದು ಅಥವ ಅದರ ಮುನ್ನಾದಿನವಾದ ಬುಧವಾರದಂದು ಹುಲ್ಲಹಳ್ಳಿಯಲ್ಲಿ ಸಮಸ್ತರೂ ಮಾರಿ ಹಬ್ಬವನ್ನು ಆಚರಿಸುತ್ತಾರೆ. ಅಂದು ಎಲ್ಲ ಹೆಂಗಸರೂ, ಮಕ್ಕಳೂ ಮುಂಜಾನೆಯೇ ಮಾರಿಗುಡಿಗೆ ಹೋಗಿ ಹರಳೆಣ್ಣೆ ಮತ್ತು ಎಳನೀರಿನ ಅಭಿಷೇಕ, ಮೊಸರನ್ನ ಮತ್ತು ತಂಬಿಟ್ಟಿನ ನೈವೇದ್ಯ ಮಾಡಿ, ಭಕ್ತಿಯಿಂದ ಅರ್ಚಿಸಿ ಬರುತ್ತಾರೆ. ಅಂದು ಸಂಜೆ ಮಾರಮ್ಮನಿಗೆ ಆಭರಣಾಲಂಕಾರವನ್ನು ತೊಡಿಸಿ ವಿಶೇಷ ಪೂಜೆಗಳನ್ನು ನಡೆಸಲಾಗುತ್ತದೆ. ಗ್ರಾಮದ ಜನತೆಗೆ ಸಿಡುಬು (ಚಿಕ್ಕಮ್ಮ, ದೊಡ್ಡಮ್ಮ) ಕಾಣಿಸಿಕೊಂಡಾಗ ಮಾರಮ್ಮನೇ ಇದರ ನಿವಾರಕಳು ಎಂಬುದು ಎಲ್ಲರ ಅಚಲ ನಂಬಿಕೆ. ಮಾರಮ್ಮ ಮೂಲ ಗುಡಿಯಲ್ಲದೆ ಬಿಸಿಲುಮಾರಮ್ಮನೂ ಉಂಟು. ಈ ದೇವತೆಗೂ ಪೂಜಾದಿಗಳು ನಡೆಯುತ್ತವೆ.

## 7. ಕಾಳಿಕಾ ದೇವಾಲಯ

ಹುಲ್ಲಹಳ್ಳಿಯ ಉತ್ತರ ಭಾಗದಲ್ಲಿ ಕಪಿಲಾನದಿಯ ಬಲದಂಡೆಯ ಮೇಲೆ 1790ರವರೆಗೂ ಒಂದು ಸುಂದರವಾದ ಕಾಳಿಕಾ ದೇವಾಲಯವಿತ್ತು. ಈ ದೇವಾಲಯದ ಬಳಿ ಅಶ್ವತ್ಥಕಟ್ಟೆ ಮತ್ತು ನದಿಯ ದಡದಲ್ಲಿ ಕಲ್ಲಿನ ಸೋಪಾನಗಳಿದ್ದು ಭಕ್ತಾದಿಗಳಿಗೆ ಸ್ನಾನ, ಪೂಜಾದಿಗಳನ್ನು

ಮಾಡಲು ಬಹಳ ಸೌಕರ್ಯವಿತ್ತು. ಹುಲ್ಲಹಳ್ಳಿಯ ಸಮಸ್ತ ಜನರೂ ಕಾಳಿಕಾದೇವಿಗೆ ತಮ್ಮ ಭಕ್ತಿಯನ್ನು ಸಲ್ಲಿಸುತ್ತಿದ್ದರು. 1790ರ ವೇಳೆಗೆ ಇಸ್ಲಾಂ ಧರ್ಮದ ಅಪ್ರತಿಮ ನಿಷ್ಠಾವಂತನೂ, ಶ್ರೀ ರಂಗನಾಥ ಮತ್ತು ಶ್ರೀಕಂಠೇಶ್ವರನ ಅವಿಚ್ಛಿನ್ನ ಭಕ್ತನೂ ಆದ ಟಿಪ್ಪುವು ಮೈಸೂರು ಸಂಸ್ಥಾನದ ದೊರೆಯಾದನು. ಆಗ ಶ್ರೀ ರಂಗನಾಥ ಹಾಗೂ ಈಶ್ವರ ದೇವಾಲಯಗಳಿಗಲ್ಲದೇ ಇತರೆ ದೇವಾಲಯಗಳಿಗೆ ಉಳಿಗಾಲವಿಲ್ಲವೆಂಬ ಭಯ ಜನರಲ್ಲಿ ಆವರಿಸಿ, ಕಾಳಿಕಾದೇವಿಯ ಭಕ್ತರು ರಹಸ್ಯವಾಗಿ ತಮ್ಮ ಆರಾಧ್ಯಮೂರ್ತಿಯನ್ನು ಹುಲ್ಲಹಳ್ಳಿಯ ದೇವಾಲಯದಿಂದ ತೆಗೆದುಕೊಂಡು ಹೋಗಿ, ಕಪಿಲಾನದಿಯ ಎಡದಂಡೆಯಲ್ಲಿರುವ ಒಂದು ಕುಗ್ರಾಮವಾದ ಹತ್ವಾಳ್‌ನಲ್ಲಿ ಪ್ರತಿಷ್ಠಾಪಿಸಿದರು. ಒಂದು ನಾಡು ಹೆಂಚಿನ ಗುಡಿಯಲ್ಲಿ ಕಾಳಿಕಾದೇವಿಗೆ ರಕ್ಷಣೆ ದೊರೆಯಿತು ಕಾಲಕ್ರಮೇಣ ಹುಲ್ಲಹಳ್ಳಿಯಲ್ಲಿ ದೇವರಿಲ್ಲದ ಈ ಗುಡಿ ಪಾಳು ಬಿದ್ದು ನಾಶವಾಯಿತು.

ಹುಲ್ಲಹಳ್ಳಿಯ ಜನತೆ, ಹತ್ವಾಳ್‌ನಲ್ಲಿ ಪ್ರತಿಷ್ಠಿಸಿದ ಕಾಳಿಕಾದೇವಿಯ ಉತ್ಸವವನ್ನು ಸಂಭ್ರಮದಿಂದ ಪ್ರತಿವರ್ಷ ಚೈತ್ರಮಾಸದಲ್ಲಿ ಹುಲ್ಲಹಳ್ಳಿಯ ಪ್ರಮುಖ ಬೀದಿಗಳಲ್ಲಿ ವೈಭವೋತ್ಸವವನ್ನು ನಡೆಸುತ್ತಾರೆ. ಈ ವೇಳೆಯಲ್ಲಿ ಕರಗ ಮತ್ತು ಜಾನಪದ ನೃತ್ಯಗಳನ್ನು ಪ್ರದರ್ಶಿಸಲಾಗುತ್ತದೆ. ಕಾಳಿಕಾದೇವಿಗೆ ಹುಲ್ಲಹಳ್ಳಿಯು ತವರು ಮನೆ. ಮಗಳಿಗೆ ತಂದೆ ತಾಯಿಯರು ತೋರುವ ಗೌರವಾದರಗಳನ್ನು ಹುಲ್ಲಹಳ್ಳಿಯ ಜನತೆ ಈ ದೇವತೆಗೆ ತೋರುತ್ತಾರೆ. ಕಾಳಿಕೋತ್ಸವದಂದು ಎಲ್ಲ ವರ್ಗದ ಜನರೂ ಊರಿನಲ್ಲಿಯೇ ಇದ್ದು ತಮ್ಮ ಭಕ್ತಿಯ ಕಾಣಿಕೆಗಳನ್ನು ಅರ್ಪಿಸುತ್ತಾರೆ. ಸೀರೆ-ಕುಪ್ಪಸಗಳನ್ನು ನೀಡಿ ತಮ್ಮ ಹರಕೆಯನ್ನು ತೀರಿಸುತ್ತಾರೆ.

ಕಾಳಿಕಾದೇವಿಯೇ ಹುಲ್ಲಹಳ್ಳಿಯ ದೇವಾಲಯದಿಂದ ಅದೃಶ್ಯಳಾಗಿ ಹತ್ವಾಳ್ ಗ್ರಾಮದಲ್ಲಿ ಒಡಮೂಡಿದಳು, ಹಾಗೂ ವರ್ಷಕ್ಕೊಮ್ಮೆ ಹುಲ್ಲಹಳ್ಳಿಯಲ್ಲಿ ಉತ್ಸವ ಆಚರಿಸಿರಿ–ಎಂಬುದಾಗಿ ಭಕ್ತರ ಕನಸಿನಲ್ಲಿ ಬಂದು ತಿಳಿಸಿದಳು ಎಂಬುದು ಕಾಳಿಕಾದೇವಿಯ ನಿಷ್ಠಾವಂತ ಭಕ್ತರ ನಂಬಿಕೆಯಾಗಿದೆ.

ಹುಲ್ಲಹಳ್ಳಿಯಲ್ಲಿ ಭವ್ಯವಾದ ಕಾಳಿಕಾದೇವಾಲಯವನ್ನು ನಿರ್ಮಿಸುವ ಯೋಜನೆ ಇಲ್ಲಿಯ ಹಿರಿಯರಲ್ಲಿ ಬಹುದಿನಗಳಿಂದ ಇದ್ದರೂ ಕಾಲವಿನ್ನೂ ಕೂಡಿ ಬಂದಿಲ್ಲ.

## 8. ಬಸವೇಶ್ವರ ದೇವಾಲಯ

ಇದು ಹುಲ್ಲಹಳ್ಳಿಯ ಮಧ್ಯಭಾಗದಲ್ಲಿರುವ ಮತ್ತೊಂದು ದೇವಾಲಯ. ಚಿಕ್ಕದಾದರೂ ಸುಂದರವಾಗಿದೆ. ಹುಲ್ಲಹಳ್ಳಿಯಲ್ಲಿ ಬೌದ್ಧ, ಜೈನ, ವೈಷ್ಣವ ಧರ್ಮಗಳು ಪ್ರಾಬಲ್ಯವನ್ನು ಗಳಿಸಿಕೊಂಡಿದ್ದರೂ 18ನೇ ಶತಮಾನದ ವೇಳೆಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡ ಧರ್ಮವೆಂದರೆ ವೀರಶೈವ ಧರ್ಮವೊಂದೆ. ಹುಲ್ಲಹಳ್ಳಿಯ ವಿರಕ್ತಮಠದ ತಪಸ್ವಿಗಳು, ಕಾರೆಯದ ಸ್ವಾಮಿಗಳು—ಮುಂತಾದವರು ಇದಕ್ಕೆ ಕಾರಣವೆನ್ನಬಹುದು. ಈ ವೇಳೆಯಲ್ಲಿ ಹುಲ್ಲಹಳ್ಳಿಯಲ್ಲಿ 'ಚಿಕ್ಕಬಸವೇಶ್ವರ'ರೆಂಬ ಮಹಾ ಶಿವಭಕ್ತರಿದ್ದರು. ಇವರು ಷಟ್ಸ್ಥಲವನ್ನು ಹೊಂದಿ ಲಿಂಗಾಂಗ ಸಾಮರಸ್ಯವನ್ನು ಪಡೆದಿದ್ದರು. ಲಿಂಗವೆಂದರೆ ಶಿವ. ಅಂಗವೆಂದರೆ ಆತ್ಮ. ಇವರ ಜೀವಾತ್ಮವು ಪರಮಾತ್ಮನಾದ ಶಿವನಲ್ಲಿ ಏಕಾತ್ಮಕತೆಯನ್ನು ಹೊಂದಿ, ಇವರ ದೇಹವು ಬಯಲು ಶರೀರವಾಗಿತ್ತು. ಇಂತಹ ಶಿವಜ್ಞಾನ ನಿಧಿಯಾದ ಚಿಕ್ಕಬಸವೇಶ್ವರರ ಇಷ್ಟಲಿಂಗವು ಒಂದು ದಿನ ಕೈಜಾರಿ ಭೂಮಿಯ ಮೇಲೆ ಬಿದ್ದು ಭಿನ್ನವಾಯಿತು. ಲಿಂಗಾಂಗಗಳಲ್ಲಿ ಒಂದು ಭಿನ್ನವಾದರೂ ಮತ್ತೊಂದು ಉಳಿಯುವುದುಂಟೆ ? ಆ ಕೂಡಲೆ ಚಿಕ್ಕಬಸವೇಶ್ವರರೂ ತಮ್ಮ ದೇಹದಿಂದ ಕಣ್ಮರೆಯಾದರು, ಅಸುವನ್ನು ನೀಗಿದರು. ಈ ಮಹಾಶಿವಭಕ್ತರ ನೆನಪಿಗಾಗಿ ಅಂದಿನ ವೀರಶೈವರು ಈಗಿರುವ ಬಸವೇಶ್ವರ ದೇವಾಲಯವನ್ನು ನಿರ್ಮಿಸಿದರು. ಇಂದೂ ವೀರಶೈವರಿಂದ ಇದು ನಿತ್ಯಪೂಜೆಯನ್ನು ಕೈಗೊಳ್ಳುತ್ತಿದೆ.

## 9. ಚಿಕ್ಕದೇವಿ ಗುಡಿ

ನಾಯಕ ಜನಾಂಗದವರ ಆರಾಧ್ಯ ದೈವವಾದ ಚಿಕ್ಕದೇವಿಗೆ ಅವರ ವಾಸಸ್ಥಳದ ಬಳಿಯೇ ಒಂದು ಗುಡಿಯನ್ನು ನಿರ್ಮಿಸಲಾಗಿದೆ.

ಹಿಂದಿನ ದಿನಗಳಲ್ಲಿ ನಾಯಕ ಜನಾಂಗದ ಬೇಟೆಗಾರರು ಕಾಡು ಪ್ರಾಣಿಗಳನ್ನು ಬೇಟೆಯಾಡುವ ಸಂದರ್ಭದಲ್ಲಿ ಈ ದೇವಿಗೆ ವಿಶೇಷ ಪೂಜೆಯನ್ನು ಮಾಡುತ್ತಿದ್ದರು. ಈಗ ಬೇಟೆಯ ಹವ್ಯಾಸವಿಲ್ಲದಿರುವ ಕಾರಣ ವರ್ಷಕ್ಕೊಮ್ಮೆ ಕಾಡಿನಿಂದ ಒಂದು ಮೊಲವನ್ನು ಹಿಡಿದು ತಂದು ಚಿಕ್ಕದೇವಿಯ ಮುಂದೆ ಆಟವಾಡಿಸಿ ಆ ಮೊಲಕ್ಕೆ ಒಂದು ಗುರುತನ್ನು ಹಚ್ಚಿ 'ಇದು ದೇವಿಯದು' ಎಂದು ಮತ್ತೆ ಕಾಡಿಗೆ ಬಿಟ್ಟು ಬರುತ್ತಾರೆ. ಹೀಗೆ

ಗುರುತು ಮಾಡಿದ ಮೊಲವನ್ನು ಯಾರೂ ಬೇಟೆಯಾಡುವಂತಿಲ್ಲ. ಈ ಸಂಪ್ರದಾಯ ಇಂದಿಗೂ ನಡೆಯುತ್ತಿದೆ.

ಚಿಕ್ಕದೇವಿಯು ತನ್ನ ಭಕ್ತಾದಿಗಳಿಂದ ನಿತ್ಯಪೂಜೆಯನ್ನು ಕೈಗೊಳ್ಳುತ್ತಿದ್ದಾಳೆ.

## 10. ಸೋಮೇಶ್ವರ ದೇವಾಲಯ

ಹುಲ್ಲಹಳ್ಳಿಯ ಪಶ್ಚಿಮ ಭಾಗದಲ್ಲಿ ಭತ್ತದ ಗದ್ದೆಗಳ ನಡುವೆ ಸುಂದರ ಪುಷ್ಪೋದ್ಯಾನವನ್ನು ಹೊಂದಿ ಪೂರ್ವಾಭಿಮುಖವಾಗಿರುವ ದೇವಾಲಯವೇ ಸೋಮೇಶ್ವರ ದೇವಾಲಯ.

ಹಿಂದಿನ ಕಾಲದಲ್ಲಿ ಆಳರಸರು ಶತ್ರುಗಳ ಜೊತೆ ಯುದ್ಧಮಾಡಿ ವಿಜಯವನ್ನು ಸಾಧಿಸಿದರೆ ಆ ವಿಜಯದ ನೆನಪಿಗಾಗಿ ದೇವಾಲಯಗಳನ್ನು ಕಟ್ಟಿಸುವುದು ರೂಢಿ, ಅಲ್ಲದೆ, ದೇವಾಲಯ, ಕೆರೆ, ಕಟ್ಟೆ, ಭಾವಿ-ಮೊದಲಾದುವುಗಳನ್ನು ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ಕಟ್ಟಿಸುವುದು ತಮ್ಮ ಕರ್ತವ್ಯವೆಂದು ಹಿಂದಿನ ರಾಜರು ಭಾವಿಸಿದ್ದರು. ಹೀಗೆ ಕಟ್ಟಿಸುವ ದೇವಾಲಯಗಳು ತಮ್ಮ ಹೆಸರಿನಲ್ಲಿಯೇ ಇರುತ್ತಿದ್ದವು. ಕ್ರಿ.ಶ. 1638ರ ತೆ‌ರಕಣಾಂಬಿ ಶಾಸನದಲ್ಲಿ ಹುಲ್ಲಹಳ್ಳಿಯ ರಾಜನಾದ ಬಸವರಾಜ ಒಡೆಯನು ಸೋಮರಾಜನ ವಂಶದವನು ಎಂದು ಹೇಳಿರುವುದರಿಂದ 14ನೇ ಶತಮಾನದ ಅಂತ್ಯಭಾಗದಲ್ಲಿ ಸೋಮರಾಜನು ಹುಲ್ಲಹಳ್ಳಿಯ ಅರಸನಾಗಿದ್ದನೆಂದು ಊಹಿಸಬಹುದು. ಈಗಿನ ಸೋಮೇಶ್ವರ ದೇವಾಲಯದ ಹಿಂಭಾಗವು ಅಂದು ಮಲ್ಲಹಳ್ಳಿಯಾಗಿತ್ತು. ಈ ಮಲ್ಲಹಳ್ಳಿಯು ಸೋಮರಾಜನ ಆಳ್ವಿಕೆಗೆ ಒಳಪಟ್ಟಿದ್ದರಿಂದ ಅಲ್ಲೊಂದು ಶಿವಾಲಯವನ್ನು ಕಟ್ಟಿಸಿ ಅದನ್ನು ಸೋಮೇಶ್ವರ ದೇವಾಲಯವೆಂದು ಕರೆದಿರಬಹುದು. ಮಲ್ಲಹಳ್ಳಿಯೂ ಸಹ ಜಗಜಟ್ಟಿಯಾದ ಮಲ್ಲನೆಂಬುವನಿಗೆ ಉಂಬಳಿಯಾಗಿ ಕೊಟ್ಟ ಗ್ರಾಮವೆಂದು ಸ್ಥಳ ಮಾಹಿತಿಯಿಂದ ತಿಳಿದು ಬರುತ್ತದೆ. ಈ ದೇವಾಲಯದ ಸಮೀಪದ ಸ್ಥಳವನ್ನು ಇಂದಿಗೂ ವೀರಮಾಳವೆಂದೂ, ಮಲ್ಲನ ಮಾಳವೆಂದೂ ಕರೆಯುತ್ತಾರೆ. ಈ ಮಲ್ಲನ ಪ್ರೀತ್ಯರ್ಥವಾಗಿ ಸೋಮರಾಜನು ಈ ದೇವಾಲಯವನ್ನು ನಿರ್ಮಿಸಿದ್ದಿರಲೂಬಹುದು. ಇಂದು ಈ ಸೋಮೇಶ್ವರ ದೇವಾಲಯವು ಹುಲ್ಲಹಳ್ಳಿಯ ಭಾಗವಾಗಿದ್ದು ವೀರಶೈವರಿಂದ ನಿತ್ಯಪೂಜೆ, ಅಭಿಷೇಕಗಳನ್ನು ಕೈಗೊಳ್ಳುತ್ತಿದೆ.

ಹಸಿರು ವನರಾಜಿಯನ್ನು ಹೊಂದಿರುವ ಈ ದೇವಾಲಯವು, ಶಾಂತಿಯನ್ನು ಅರಸಿ ಬರುವವರನ್ನು ಕೈಬೀಸಿ ಕರೆಯುತ್ತದೆ.

## 11. ಶ್ರೀ ಪ್ರಸನ್ನಾಂಜನೇಯಸ್ವಾಮಿ ದೇವಾಲಯ

ಹುಲ್ಲಹಳ್ಳಿಯ ಮಧ್ಯಭಾಗದಲ್ಲಿರುವ ಈ ಮತ್ತೊಂದು ದೇವಾಲಯವು ಹದಿನಾರನೇ ಶತಮಾನದಲ್ಲಿ ಶ್ರೀ ವ್ಯಾಸರಾಯರಿಂದ ಪ್ರತಿಷ್ಠಿತವಾದುದು.

ಶ್ರೀ ವ್ಯಾಸರಾಯರು ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಶ್ರೀ ಕೃಷ್ಣದೇವರಾಯನ ಗುರುಗಳಾಗಿದ್ದರು. ಸಾಮ್ರಾಜ್ಯಕ್ಕೆ ಒದಗಿದ್ದ ಗಂಡಾಂತರ ಕಾಲದಲ್ಲಿ ಸ್ವಲ್ಪದಿನಗಳವರೆಗೆ ಸಿಂಹಾಸನಾರೂಢರಾಗಿ ರಾಜ್ಯಭಾರವನ್ನು ಮಾಡಿದರು. ಶ್ರೀಕೃಷ್ಣದೇವರಾಯನು ಇವರಿಗೆ ಸುವರ್ಣಾಭಿಷೇಕವನ್ನು ಮಾಡಿದನು. ಹರಿಭಕ್ತರಾದ ಇವರು ಕರ್ನಾಟಕವನ್ನು ಸಂಚರಿಸಿ 720 (ಏಳುನೂರಇಪ್ಪತ್ತು) ಆಂಜನೇಯ ವಿಗ್ರಹಗಳನ್ನು ಪ್ರತಿಷ್ಠಾಪಿಸಿದರು. ಇವರ ಕಾಲದಲ್ಲಿ ಹುಲ್ಲಹಳ್ಳಿಯು ಪಂಡಿತರ, ವಿದ್ವಾಂಸರ ಆವಾಸಸ್ಥಾನವಾಗಿತ್ತು. ಹುಲ್ಲಹಳ್ಳಿಗೆ ಆಗಮಿಸಿದ ಶ್ರೀವ್ಯಾಸರಾಯರು ಈ ಶ್ರೀ ಪ್ರಸನ್ನಾಂಜನೇಯ ಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಈ ವಿಗ್ರಹವು ಸುಮಾರು 6 ½ ಅಡಿ ಎತ್ತರವಿದ್ದು ಬಲಗೈ ಹಸ್ತವನ್ನು ಮೇಲೆತ್ತಿ ಅಭಯವನ್ನು ನೀಡುವ ಭಂಗಿಯಲ್ಲಿದೆ. ಆಂಜನೇಯನ ಬಾಲದಲ್ಲಿ ಘಂಟೆಯನ್ನು ಕಟ್ಟಿರುವಂತೆ ಕಡೆಯಲಾಗಿದೆ.

770 ?

ಒಂದು ಅಂಕಣದಷ್ಟು ಇರುವ ಗರ್ಭಗುಡಿಯ ಮುಂದೆ ಮೂರು ಅಂಕಣದಷ್ಟು ಅಗಲದ ಮಂಟಪವನ್ನು ನಿರ್ಮಿಸಲಾಗಿದೆ. ಮುಂಭಾಗದಲ್ಲಿ ವಿಶಾಲವಾದ ಕಾಂಪೌಂಡನ್ನು ಹಾಕಲಾಗಿದೆ. ಗರ್ಭಗುಡಿ ಮತ್ತು ಮಂಟಪವನ್ನು ಕಗ್ಗಲ್ಲಿನ ಚಪ್ಪಡಿ ಹಾಗೂ ಕಂಬಗಳಿಂದ ಕ್ರಿ.ಶ. 1780ರಲ್ಲಿ ಮೈಸೂರಿನ ದಿವಾನ್ ಪೂರ್ಣಯ್ಯನವರಿಂದ ನಿರ್ಮಿಸಲ್ಪಟ್ಟಿತು ಎಂದು ತಿಳಿದು ಬರುತ್ತದೆ. ಪೂರ್ಣಯ್ಯನವರು ಮತ್ಸ್ಯರೂಪಿ ವಿಷ್ಣುವಿನ ಸಾಲಿಗ್ರಾಮವನ್ನು ನಿತ್ಯಪೂಜಿಸುತ್ತಿದ್ದರು. ಆದಕಾರಣ ಇವರಿಂದ ನಿರ್ಮಾಣವಾದ ಈ ಆಂಜನೇಯ ಸ್ವಾಮಿಯ ಗರ್ಭಗುಡಿಯ ಗೋಡೆಯಲ್ಲಿ ಮತ್ಸ್ಯದ (ಮೀನಿನ) ಉಬ್ಬು ಶಿಲ್ಪವಿದೆ. ಟಿಪ್ಪುಸುಲ್ತಾನನಿಂದ ರಕ್ಷಣೆ ಪಡೆದ ನೆನಪಿಗಾಗಿ ಗರ್ಭಗುಡಿಯ ತೋರಣಗಲ್ಲಿನಲ್ಲಿಶ್ರೀರಂಗನಾಥನನ್ನು ಚಿತ್ರಿಸಲಾಗಿದೆ.

ಶ್ರೀ ವ್ಯಾಸರಾಯರಿಂದ ಪ್ರತಿಷ್ಠಿತವಾದಾಗ ಈ ದೇವರ ಪೂಜಾವಿಧಿಗಳನ್ನು ಮಾಧ್ವರು ನಡೆಸಿಕೊಂಡು ಬರುತ್ತಿದ್ದರು. ಇಂದು ಹುಲ್ಲಹಳ್ಳಿಯಲ್ಲಿ ಮಾಧ್ವರು ಇಲ್ಲದ ಕಾರಣ ವರದರಾಜಸ್ವಾಮಿಯ ಅರ್ಚಕರೇ ಶ್ರೀ ಪ್ರಸನ್ನಾಂಜನೇಯ ಸ್ವಾಮಿಯ ಪೂಜಾದಿಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಕನ್ಯಾಕುಮಾರಿಯ ನಿವಾಸಿಯಾದ ಶ್ರೀ ಸುಬ್ರಹ್ಮಣ್ಯಸ್ವಾಮಿಗಳೆಂಬುವರು ಈ ದೇವಾಲಯದಲ್ಲಿ ನೆಲೆಸಿ ಇದರ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವುದು ಒಂದು ವಿಶೇಷ.

## 12. ಪೇಟೆ ಗಣಪತಿ ದೇವಾಲಯ

ಹುಲ್ಲಹಳ್ಳಿಯ ಅಂಗಡಿ ಬೀದಿಯಲ್ಲಿರುವ ಸಣ್ಣ ದೇಗುಲವಿದು. ಈ ದೇವಾಲಯದ ಬಳಿ ಸುಮಾರು 70–80 ವರ್ಷಗಳ ಹಿಂದೆ ಭರ್ಜರಿಯಾದ ಸಂತೆ ನಡೆಯುತ್ತಿತ್ತು. ಅಂದು ಈ ದೇಗುಲವನ್ನು 'ಸಂತೆ ಗಣಪತಿ ಗುಡಿ' ಎಂದು ಕರೆಯುತ್ತಿದ್ದರು. ಇಂದು ಸಂತೆ ನಡೆಯುತ್ತಿಲ್ಲ. ಅಂಗಡಿಗಳ ನಾಲ್ಕು ಬೀದಿಗಳು ಸೇರುವೆಡೆ ಈ ದೇಗುಲವಿರುವುದರಿಂದ 'ಚೌಕದ ಗಣಪತಿ'ಯೆಂದೂ ಕರೆಯಲಾಗುತ್ತಿದೆ. ಈ ದೇಗುಲವು 17ನೇ ಶತಮಾನದಲ್ಲಿ ಹುಲ್ಲಹಳ್ಳಿಯಲ್ಲಿ ನೆಲೆಸಿದ್ದ ವೈಶ್ಯರಿಂದ ನಿರ್ಮಾಣವಾಗಿರಬೇಕೆಂದು ಕಂಡು ಬರುತ್ತದೆ. ಸುಮಾರು 1880–85ರಲ್ಲಿ ಈ ಗುಡಿಯು ಜೀರ್ಣೋದ್ಧಾರಗೊಂಡು, ಜವಳಿ ಅಂಗಡಿ ಸಿದ್ದಣ್ಣನವರು ಪಾತಾಳಾಂಕಣವನ್ನು ಕಟ್ಟಿಸಿರುತ್ತಾರೆ.

ಪೇಟೆಗಣಪತಿಗೆ ಭಕ್ತಾದಿಗಳಿಂದ ನಿತ್ಯಪೂಜೆ ನಡೆಯುತ್ತಿದ್ದು, ಕಲಾತಪಸ್ವಿ ಶ್ರೀ ಹೆಚ್. ಎಂ. ಸಿದ್ಧಲಿಂಗಾರಾಧ್ಯರು ಅರ್ಚಕರಾಗಿರುತ್ತಾರೆ.

## 13. ಶ್ರೀ ಪ್ರಸನ್ನಗಣಪತಿ ದೇವಾಲಯ

ಮಲ್ಲೇಶ್ವರ ದೇವಾಲಯದ ಬಳಿ ಇರುವ ಮತ್ತೊಂದು ಗಣಪತಿ ದೇವಾಲಯವಿದು. ಈಗ್ಗೆ ಸುಮಾರು 130 ವರ್ಷಗಳ ಹಿಂದೆ ಶ್ರೀ ನೀಲಕಂಠಪ್ಪನವರು ಒಂದಂಕಣದ ಗುಡಿಯನ್ನು ಕಟ್ಟಿಸಿ ಶ್ರೀ ಪ್ರಸನ್ನ ಗಣಪತಿಯನ್ನು ಪ್ರತಿಷ್ಠಾಪಿಸಿ ತಾವೇ ನಿತ್ಯಪೂಜಾ ಕೈಂಕರ್ಯವನ್ನು ನಡೆಸಿಕೊಂಡು ಬರುತ್ತಿದ್ದರು. ಅನಂತರ ಶ್ರೀ ನೀಲಕಂಠಪ್ಪನವರ ಮಕ್ಕಳಾದ

ಶ್ರೀಕಂಠಯ್ಯನವರೂ ತದನಂತರ ಇವರ ಮಕ್ಕಳಾದ ಶ್ಯಾನುಭೋಗ್ ಸದಾಶಿವರಾಯರೂ ಗಣಪತಿಯ ಪೂಜಾವಿಧಿಯನ್ನು ನಡೆಸಿಕೊಂಡು ಬಂದರು. ಇವರ ಕಾಲದಲ್ಲಿ ಭಕ್ತಾದಿಗಳ ಸಹಾಯದಿಂದ ಈ ದೇವಾಲಯವು ಜೀರ್ಣೋದ್ಧಾರಗೊಂಡು ವಿಶಾಲವಾದ ಪ್ರದಕ್ಷಿಣ ಪಥವನ್ನು ಹೊಂದಿರುವ ದೊಡ್ಡ ದೇವಾಲಯವಾಗಿದೆ. ಇಂದು ಸದಾಶಿವರಾಯರ ಭಾವಮೈದುನರು ಪ್ರಸನ್ನಗಣಪತಿಯ ಅರ್ಚಕರಾಗಿರುತ್ತಾರೆ. ಭಕ್ತಾದಿಗಳಿಂದ ನಿತ್ಯಪೂಜೆ ನಡೆಯುತ್ತಿದೆ.



**14. ಕಾಡ ಬಸವೇಶ್ವರ ದೇವಾಲಯ**

ಹುಲ್ಲಹಳ್ಳಿಯ ಪೂರ್ವಭಾಗದಲ್ಲಿ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿ ಬೆಳಲೆ ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿ ಕಾಡ ಬಸವೇಶ್ವರ ದೇವಾಲಯವಿದೆ.

ಸಾಮಾನ್ಯವಾಗಿ ಮಳೆಬೀಳದ ಕಾಲದಲ್ಲಿ ಮತ್ತು ಪ್ರತಿವರ್ಷ ಆರಿದ್ರಾ ನಕ್ಷತ್ರದಲ್ಲಿ ಹುಲ್ಲಹಳ್ಳಿಯ ವೀರಶೈವರು 'ಹೆಡಿಗೆ ಬೋನ' ಮಾಡಿಕೊಂಡು ಊರಿನಿಂದ ವಾದ್ಯಸಮೇತವಾಗಿ ಹೋಗಿ ಈ ಕಾಡ ಬಸವೇಶ್ವರನಿಗೆ ನೈವೇದ್ಯಮಾಡಿ ಭಕ್ತಿಯಿಂದ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಹೀಗೆ ಮಾಡಿದರೆ ಮಳೆ ಬರುತ್ತದೆ ಎಂಬ ನಂಬಿಕೆಯು ಬಹುಕಾಲದಿಂದ ಹುಲ್ಲಹಳ್ಳಿಯ ಜನರಲ್ಲಿ ಬೆಳೆದು ಬಂದಿದೆ. ಹಲವು ವೇಳೆ ಈ ನಂಬಿಕೆಯು ನೆರವೇರಿರುವುದೂ ಉಂಟು.

**15. ಮಸೀದಿ**

ಮಸೀದಿಯು ಮುಸ್ಲಿಂ ಜನಾಂಗದ ಸಕಲ ಧಾರ್ಮಿಕ ಚಟುವಟಿಕೆಗಳ ಕೇಂದ್ರ. ಅವರ ಏಕದೇವತೋಪಾಸನಾ ನಿಲಯ ಹಾಗೂ ಶಾಂತಿ ಮಂದಿರ.

ಈಗ್ಗೆ ಸುಮಾರು 30 ವರ್ಷಗಳ ಹಿಂದೆ ಬಹುಕಾಲದಿಂದಲೂ ಹುಲ್ಲಹಳ್ಳಿನಾಲಾ ಬಲದಂಡೆಯ ಬಳಿ ಮುಸ್ಲಿಮರು ಒಂದು ಪ್ರಾರ್ಥನಾ ಸ್ಥಳವನ್ನು ಗೊತ್ತುಮಾಡಿಕೊಂಡಿದ್ದರು. ಆ ಸ್ಥಳದಲ್ಲಿ ಇಂದಿಗೂ ಪ್ರಾರ್ಥನಾ ಭಿತ್ತಿ ಇದೆ.

1924ರಲ್ಲಿ ಉಂಟಾದ ಕಪಿಲಾನದಿಯ ಪ್ರಚಂಡ ಪ್ರವಾಹವು ಮುಸ್ಲಿಮರ ಪ್ರಾರ್ಥನಾ ಸ್ಥಳವನ್ನು ಬದಲಾಯಿಸುವಂತೆ ಮಾಡಿತು. ಅಂದಿನಿಂದ

ಗ್ರಾಮದ ನಡುವೆ ತಮ್ಮ ನಿವಾಸಗಳ ಬಳಿಯಲ್ಲಿಯೇ ಪ್ರಾರ್ಥನಾ ಸ್ಥಳವನ್ನು ಮಾಡಿಕೊಂಡರು. ಈ ಸ್ಥಳದಲ್ಲಿ 1952ರಲ್ಲಿ ಒಂದು ನಾಡು ಹೆಂಚಿನ ಮನೆಯನ್ನು ನಿರ್ಮಿಸಿ ಅಂದಿನಿಂದ 15 ವರ್ಷಗಳ ಕಾಲ ಮುಸ್ಲಿಮರು ಈ ಮನೆಯಲ್ಲಿಯೇ ತಮ್ಮ ಧಾರ್ಮಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬಂದರು. ಈ ಮಸೀದಿಯ ಮೇಲ್ವಿಚಾರಣೆಯನ್ನು ಬುಡನ್ ಸಾಹೇಬರೂ, ಸಾಹುಕಾರ್ ಅಹಮದ್ ಸಾಹೇಬರೂ, ಅನಂತರ ಅಲಿಜಾನ್ ಸಾಹೇಬರೂ ವಹಿಸಿಕೊಂಡಿದ್ದರು. 1963 ರ ನಂತರ ಹೆಚ್. ಎಂ. ರಿಯಾಜ್ ಅಹ್ಮದ್ ಮತ್ತು ಡಾ. ಅಮಾರ್ ಅಹಮದ್‌ರವರು ಮಸೀದಿಯ ಮೇಲ್ವಿಚಾರಕರಾದರು. ಇವರ ಕಾಲದಲ್ಲಿ ಸರ್ಕಾರದಿಂದ ನಾಲ್ಕು ಸಾವಿರ ರೂಪಾಯಿಗಳ ನೆರವನ್ನು ಪಡೆದು ನಾಡಹೆಂಚಿನ ಮನೆಯನ್ನು ಸುಂದರ ಮಂದಿರವನ್ನಾಗಿ ಪರಿವರ್ತಿಸಿದರು. 1965 ರಲ್ಲಿ ಪ್ರಾರಂಭಗೊಂಡ ಈ ನಿರ್ಮಾಣ ಕಾರ್ಯವು 1968ರಲ್ಲಿ ಮುಕ್ತಾಯಗೊಂಡು ಹುಲ್ಲಹಳ್ಳಿಯ ಹಾಗೂ ಮುಸ್ಲಿಮರ ಅಭಿವೃದ್ಧಿಯ ಸಂಕೇತವಾಗಿ ಈ ಮಸೀದಿ ಕಂಗೊಳಿಸುತ್ತಿದೆ.

ಮಸೀದಿಯಲ್ಲಿ ಪ್ರತಿದಿನ ಸೂರ್ಯೋದಯಕ್ಕೆ ಮುಂಚೆ, ಮಧ್ಯಾಹ್ನ 1 ಘಂಟೆ 5 ನಿಮಿಷ, ಸಂಜೆ 4–30, ಸೂರ್ಯಾಸ್ತಮದ ವೇಳೆ ಮತ್ತು ರಾತ್ರಿ 8–30 ಈ ಐದು ವೇಳೆಯಲ್ಲಿಯೂ ಆಜಾ ಅಂದರೆ ಪ್ರಾರ್ಥನೆಗೆ ನೀಡುವ ಕರೆ ನಡೆಯುತ್ತದೆ. ಇದನ್ನು ಮೌಜನ್ ಎಂಬುವರು ನಡೆಸುತ್ತಾರೆ. ಮಸೀದಿಯಲ್ಲಿ 'ಪೇಶ್ ಇಮಾಂ' ಎಂಬುವರು ಇರುತ್ತಾರೆ, ಇವರು ಧಾರ್ಮಿಕ ಗುರು. ಈದ್ ಮುಂತಾದ ವಿಶೇಷ ದಿನಗಳಲ್ಲಿ ಧಾರ್ಮಿಕ ವಿಧಿ ಹಾಗೂ ಮುಸ್ಲಿಂ ಮಕ್ಕಳಿಗೆ ಕುರಾನ್ ಮತ್ತು ಅರೇಬಿಕ್ ಭಾಷಾ ಬೋಧನೆಯನ್ನೂ ನಡೆಸುತ್ತಾರೆ. ಮಸೀದಿಯ ಆಶ್ರಯದಲ್ಲಿ ಶಾಲಾ ಬಡಮಕ್ಕಳಿಗೆ ಧನಸಹಾಯವನ್ನೂ, ಬಡವರನ್ನು ಗುರುತಿಸಿ ಉಚಿತ ವಿವಾಹಾದಿಗಳನ್ನೂ ನಡೆಸಲಾಗುತ್ತಿದೆ.

ಹಿಂದೂ ಮುಸ್ಲಿಂ ಭಾವೈಕ್ಯತೆ ಎನ್ನುವುದು ಕೇವಲ ಘೋಷಣೆಯಾಗದೆ ಕೃತಿಯಲ್ಲಿ ಕಾಣಬೇಕಾದರೆ ಹುಲ್ಲಹಳ್ಳಿಯು ನಾಡಿಗೆ ಏಕೆ ದೇಶಕ್ಕೇ ಮಾದರಿಯಾಗಿದೆ. ಸಹೋದರ ಭಾವದಿಂದ ಹಿಂದು–ಮುಸ್ಲಿಮರು ಬಹುಕಾಲದಿಂದಲೂ ಬಾಳುತ್ತಿದ್ದಾರೆ. ಹಿಂದು–ಮುಸ್ಲಿಮರು ಕನ್ನಡ, ಉರ್ದು ಎರಡೂ ಭಾಷೆಗಳನ್ನೂ ಮಾತನಾಡಬಲ್ಲರು. ಪರಸ್ಪರ ಹಿಂದೂ ದೇವರನ್ನು ಮುಸ್ಲಿಮರೂ, ಮುಸ್ಲಿಂ ದೇವರನ್ನು ಹಿಂದೂಗಳೂ

ಗೌರವಿಸುತ್ತಾರೆ. 1952ರಲ್ಲಿ ನಾಡಹೆಂಚಿನ ಮಸೀದಿಯನ್ನು ನಿರ್ಮಿಸುವ ಸಂದರ್ಭದಲ್ಲಿ ಮುಸ್ಲಿಂ ಬಂಧುಗಳಿಗೆ ವಿಷಕಂಠಪ್ಪ ಎಂಬುವರು ಎರಡು ಸಾವಿರ ರೂಪಾಯಿಗಳ ಉದಾರ ನೆರವನ್ನು ನೀಡಿರುತ್ತಾರೆ. ಅಲಿಜಾನ್ ಸಾಹೇಬರು ಬ್ರಾಹ್ಮಣ ಸಮಾಜದಲ್ಲಿ ನಡೆಯುತ್ತಿದ್ದ ಶ್ರೀರಾಮೋತ್ಸವದಲ್ಲಿ ಅನ್ನ ಸಂತರ್ಪಣೆಯನ್ನು ನಡೆಸಿದ್ದಾರೆ. ಸಾಹುಕಾರ್ ಅಹ್ಮದ್ ಸಾಹೇಬರು ಹುಲ್ಲಹಳ್ಳಿ ವೀರಶೈವ ವಿರಕ್ತ ಮಠದ ಭಕ್ತಾದಿಗಳಲ್ಲಿ ಒಬ್ಬರಾಗಿದ್ದರು. ಇಂದಿಗೂ ಹಿಂದು–ಮುಸ್ಲಿಂ ಐಕ್ಯತೆ ಭಾವಸಂಗಮಗಳು ಹಾಸು ಹೊಕ್ಕಾಗಿ ಬೆಸೆದುಕೊಂಡಿವೆ.

## 16. ಹಜರತ್ ಸಯ್ಯಾದನಿ ಬೀ ಅಮ್ಮನವರ ಗೋರಿ

ಬೆಳಲೆ ಗ್ರಾಮದ ಹಿರಿಯ ವ್ಯಕ್ತಿಯೊಬ್ಬರು ತಮ್ಮ ಗ್ರಾಮದಿಂದ ಹುಲ್ಲಹಳ್ಳಿಗೆ ಕಾಲುದಾರಿಯಲ್ಲಿ ಬರುತ್ತಿದ್ದರು. ಇದ್ದಕ್ಕಿದ್ದ ಹಾಗೆಯೇ ಅವರಿಗೆ ಹೊಟ್ಟೆ ನೋವು ಪ್ರಾರಂಭವಾಯಿತು. ಅವರಿಗೆ ನಡೆಯಲೂ ಸಾಧ್ಯವಾಗದೆ, ತಾವು ಬರುತ್ತಿದ್ದ ದಾರಿಯ ನಡುವೆ ಒಂದು ಗೋರಿಯ ಬಳಿ ಮಲಗಿಕೊಂಡರು. ಹತ್ತಿರವೇ ಒಂದು ನೆರಳು ನೀಡುವ ಮರವಿದ್ದುದರಿಂದ ಅವರಿಗೆ ನಿದ್ರೆಯೂ ಬಂದಿತು. ಆ ಹಿರಿಯರ ಕನಸಿನಲ್ಲಿ ಓರ್ವ ವೃದ್ಧ ಸ್ತ್ರೀಯು ಬಂದು ಸ್ವಲ್ಪ ವಿಭೂತಿಯನ್ನು ಮಂತ್ರಿಸಿಕೊಟ್ಟಳು. ಅದನ್ನು ಸೇವಿಸಿದ ಆ ಹಿರಿಯರಿಗೆ ಹೊಟ್ಟೆನೋವೂ ಮತ್ತು ಕನಸೂ ಮಾಯವಾಯಿತು. ಎಚ್ಚರಗೊಂಡ ಅವರು ಆಶ್ಚರ್ಯದಿಂದ ಹುಲ್ಲಹಳ್ಳಿಯತ್ತ ನಡೆದರು. ಕನಸಿನಲ್ಲಿ ಕಾಣಿಸಿಕೊಂಡ ಆ ಸ್ತ್ರೀಯೇ ಹಜರತ್ ಸಯ್ಯಾದನಿ ಬೀ ಅಮ್ಮನವರು ಈ ಅಮ್ಮನವರ ಗೋರಿಯು ಹುಲ್ಲಹಳ್ಳಿಯಿಂದ ಎರಡು ಕಿ.ಮೀ. ದೂರದಲ್ಲಿ ಬೆಳಲೆ ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿದೆ.

ಸುಮಾರು 16ನೇ ಶತಮಾನ. ಬಾಬಾ ಬುಡನ್‌ಗಿರಿಯಿಂದ ಒಬ್ಬ ಮುಸ್ಲಿಂ ಮಹಿಳೆ ಹುಲ್ಲಹಳ್ಳಿಗೆ ಬಂದು ನೆಲೆಸಿದ್ದರು. ಈಕೆಯು ಪ್ರಾಪಂಚಿಕ ವ್ಯವಹಾರಗಳನ್ನು ತ್ಯಜಿಸಿ ಸದಾ ಅಲ್ಲಾನ ಧ್ಯಾನದಲ್ಲೇ ಆಸಕ್ತರಾಗಿರುತ್ತಿದ್ದರು. ಹುಲ್ಲಹಳ್ಳಿಯ ಜನರು ಈಕೆಯನ್ನು ಭಕ್ತಿಗೌರವದಿಂದ ಕಾಣುತ್ತಿದ್ದರು. ಈಕೆಯ ಹೆಸರು 'ಸಯ್ಯಾದನಿ ಬೀ' ಎಂದು. ಪ್ರತಿನಿತ್ಯ ಈಕೆಯು ಈಗ ಗೋರಿಯಿರುವ ಸ್ಥಳದಲ್ಲಿ ಬಂದು ಧ್ಯಾನಮಗ್ನರಾಗಿರುತ್ತಿದ್ದರು. ಹೀಗಿರುವಾಗ ಒಂದು ದಿನ ಅಲ್ಲಾನ ಧ್ಯಾನದಲ್ಲಿರಲು

ಈಕೆಯು ಕುಳಿತಿದ್ದ ಸ್ಥಳದಲ್ಲಿ ಭೂಮಿಯು ಬಿರುಕು ಬಿಟ್ಟಿತು. ಸುತ್ತಲ ಹೊಲ ಗದ್ದೆಗಳಲ್ಲಿ ಕೆಲಸಮಾಡುತ್ತಿದ್ದ ಕೃಷಿಕರು ನೋಡುತ್ತಿದ್ದ ಹಾಗೆಯೇ ಬಿರುಕು ಬಿಟ್ಟ ಆ ಭೂಮಿಯಲ್ಲಿ ನಿಧಾನವಾಗಿ ಈ ಮಹಾ ತಾಯಿ ಲೀನವಾಗುತ್ತಾ ಬಂದರು. ಆಶ್ಚರ್ಯದಿಂದ ಎಲ್ಲರೂ ಹತ್ತಿರ ಓಡಿ ಬರಲಾಗಿ ಭೂಮಿಯು ಕೂಡಿಕೊಂಡಿತ್ತು. 'ಸಯ್ಯಾನಿ ಬೀ' ಭೂಮಿಯಲ್ಲಿ ಸಂಪೂರ್ಣವಾಗಿ ಐಕ್ಯವಾಗಿದ್ದರು. ಅವರು ಉಟ್ಟಿದ್ದ ಬಿಳಿ ಸೀರೆಯ ಸೆರಗು ತುದಿ ಮಾತ್ರ ಭೂಮಿಯ ಮೇಲೆ ಕಾಣಿಸುತ್ತಿತ್ತು. ಈ ಅತ್ಯಾಶ್ಚರ್ಯಕರವಾದ ವಿಷಯವನ್ನು ಆ ರೈತರು ಹುಲ್ಲಹಳ್ಳಿಯ ಜನರಿಗೆ ತಿಳಿಸಿದರು. ಮುಸ್ಲಿಂ ಬಂಧುಗಳು ಈ ತಾಯಿಯ ಮೇಲಿನ ಭಕ್ತಿ ಗೌರವದ ಕುರುಹಾಗಿ ಆ ಸ್ಥಳದಲ್ಲಿ ಒಂದು ಗೋರಿಯನ್ನು ಕಟ್ಟಿಸಿ ಅದನ್ನು 'ಹಜರತ್ ಸಯ್ಯಾನಿ ಬೀ ಅಮ್ಮನವರ ಗೋರಿ' ಎಂದು ಕರೆದು ಅಂದಿನಿಂದ ಪ್ರತಿವರ್ಷದ ರಂಜಾನ್ ವೇಳೆಯಲ್ಲಿ ವೈಭವದ ಉರುಸ್‌ನ್ನು ನಡೆಸುತ್ತಿದ್ದಾರೆ. ಇಂದು ಹುಲ್ಲಹಳ್ಳಿಯ ಮಸೀದಿಯ ಆಶ್ರಯದಲ್ಲಿ ನಡೆಸಲಾಗುವ ಈ ಉರುಸ್‌ನಲ್ಲಿ ಹಿಂದು ಮುಸ್ಲಿಂ ಭೇದವಿಲ್ಲದೆ ಜನರು ತಮ್ಮ ಭಕ್ತಿಯನ್ನು ಸಲ್ಲಿಸುತ್ತಾರೆ.

## 17. ಮಂಡಿಮಾರಮ್ಮ

ಹುಲ್ಲಹಳ್ಳಿಯ ಬಸ್ ನಿಲ್ದಾಣದ ಬಳಿ, ರಸ್ತೆಯ ಪಕ್ಕದಲ್ಲಿ ಸುಮಾರು 1½ ಅಡಿ ಎತ್ತರ ಮತ್ತು ಒಂದು ಅಡಿ ಚದರವುಳ್ಳ ಒಂದು ಕಲ್ಲಿದೆ. ಇದನ್ನು ಮಂಡಿಮಾರಮ್ಮನೆಂದೂ, ಸಾಮಾನ್ಯವಾಗಿ ಬಹುಮಂದಿ 'ನರಿಕಲ್ಲು' ಎಂದೂ ಕರೆಯುತ್ತಾರೆ.

ಜನರಿಗೆ ಉಂಟಾಗುವ ಹಲವು ರೋಗಗಳಲ್ಲಿ ಮಂಡಿರೋಗವು ಒಂದು. ಇದು ಮುಪ್ಪಿನ ಕಾಲದಲ್ಲಿ ಬರುವ ಮಂಡಿನೋವು ಆಗಿರದೆ, ಬಾಲಕರು ಯುವಕರಲ್ಲಿ ಕಾಲಿನ ಎರಡೂ ಮಂಡಿಗಳು ತುಂಬಾ ಉರಿಯಿಂದ ಕೂಡಿದ್ದು ಮಡಿಸಲೂ ಕಷ್ಟವಾಗುತ್ತದೆ. ಇಂತಹ ಮಂಡಿರೋಗವು ಬಂದಾಗ ಈ ಮಾರಮ್ಮನಿಗೆ ಪೂಜೆ ಸಲ್ಲಿಸಿ ನೋವುಂಟಾದ ಎರಡೂ ಮಂಡಿಗಳನ್ನು ಕಲ್ಲಿಗೆ ಸ್ಪರ್ಶಿಸುತ್ತಾ ಬಂದರೆ ಕ್ರಮೇಣವಾಗಿ ಮಂಡಿರೋಗವು ಗುಣವಾಗುತ್ತದೆ. ಈ ಮಂಡಿ ಮಾರಮ್ಮನಿಗೆ ಗುಡಿಯಾಗಲೀ ನೆರಳಾಗಲೀ ಇಲ್ಲ. ಆದರೂ ಜನರಿಗೆ ಈ ಮಂಡಿ ಮಾರಮ್ಮನಲ್ಲಿ ಭಕ್ತಿ ಗೌರವವಿದೆ.



ದಿ ಅಸೋಸಿಯೇಟೆಡ್ ಡ್ರಮಾಟಿಕ್ ಕಂಪೆನಿ, ರಂಗಮಂಟಪದಲ್ಲಿರುವ
ರಂಗ ಕಲಾವಿದರ ಬಳಗ



ಕಲಾತಪಸ್ವಿ
ಹೆಚ್. ಎಂ. ಎಸ್. ಆರಾಧ್ಯ



ಸಾಂಪ್ರದಾಯಕ ಚಿತ್ರಕಲಾವಿದ
ದಿ|| ಕುಮಾರಸ್ವಾಮಿ ಪಂಡಿತ್



ದಿ|| ಕುಮಾರಸ್ವಾಮಿ ಪಂಡಿತ್
ವಿರಚಿತ ಸಾಂಪ್ರದಾಯಕ ಚಿತ್ರ ಶ್ರೀ ಲಕ್ಷ್ಮಿ



'ಗಮಕ ರೂಪಕದ ಪಿತಾಮಹ'
ಹೆಚ್. ಎಂ. ರಾಮಾರಾಧ್ಯ



ಪುರಾಣವಾಚಕ ಸಂಗಪ್ಪ



'ಕೀರ್ತನ ಸುಖಿ'
ಶ್ರೀ ಮನ್ನಾರು ಕೃಷ್ಣಯ್ಯ



ಕಲಾವಿದ, ಮೇಕಪ್ ಚಿನ್ನಣ್ಣ

# 4. ಹುಲ್ಲಹಳ್ಳಿಯ ಕಲಾವಿದರು

ಹುಲ್ಲಹಳ್ಳಿ ಕಲೆಗಳ ತವರು. ಅನೇಕ ಕಲಾವಿದರಿಗೆ ಜನ್ಮಕೊಟ್ಟ ಸ್ಥಳ.

1920ರ ಕಾಲ. ಎಲ್ಲೆಡೆಯೂ ಕಾಲರ ಇಲ್ಲವೆ ಪ್ಲೇಗ್ ಭಯಂಕರ ರೋಗಗಳ ಕಾಟದಿಂದ ತತ್ತರಿಸುತ್ತಿದ್ದ ಊರಿನಲ್ಲಿ ಅಂದಿನ ಹಿರಿಯರು ಒಂದೆಡೆ ಕುಳಿತು ಸಮಾಲೋಚಿಸಿ, ರೋಗ ನಿವಾರಣೆಗಾಗಿ ಎಲ್ಲ ಜನರೂ ಊರ ದೇಗುಲಗಳಲ್ಲಿ ಪೂಜೆ, ಅಖಂಡ ಭಜನೆಗಳನ್ನು ಕೈಗೊಂಡರು.

ಈ ಜನ ಸಮೂಹ ಬರಬರುತ್ತಾ ಸಾಂಘಿಕ ಶಕ್ತಿಯನ್ನು ಪಡೆದು ಕೊಂಡು, ಸಂಗೀತ ಸಾಹಿತ್ಯಗಳ ಬಲವನ್ನು ಬೆಳೆಸಿಕೊಂಡಿತು. ನೃತ್ಯ, ನಾಟಕ, ಯಕ್ಷಗಾನ ಪ್ರಸಂಗಗಳೂ ಹುಟ್ಟಿಕೊಂಡುವು.

ರಾಜ ಪರಿವಾರದವರ ಸಮಾಜದಲ್ಲಿ ಅಸಾಧಾರಣ ಕಲಾವಿದರು ಬೆಳಕಿಗೆ ಬಂದರು. ಯಕ್ಷಗಾನ ಬಯಲಾಟವನ್ನು ರೂಢಿಸಿಕೊಂಡು ಪ್ರದರ್ಶಿಸತೊಡಗಿದರು. ಇವರಲ್ಲಿ ಚಾಮುಂಡನಾಯ್ಕ, ಮಲ್ಲಹಳ್ಳಿ ಮಾದನಾಯ್ಕ, ಈರನ ಬೆಟ್ಟನಾಯ್ಕ, ಮಂಚಿ ಕೆಂಚನಾಯ್ಕ ಮುಂತಾದವರು ಅಂದಿನ ಸುಪ್ರಸಿದ್ಧ ಯಕ್ಷಗಾನ ಕಲಾವಿದರು.

ದ್ಯಾವನಾಯ್ಕ ಉತ್ತಮ ಪಿಟೀಲುವಾದಕನಾಗಿಯೂ, ಮೊಹರಿ ದ್ಯಾವನಾಯ್ಕ ಪ್ರಬುದ್ಧ ನಾದಸ್ವರ ಪ್ರವೀಣನಾಗಿಯೂ, ದ್ಯಾನಾಚಿ ನಾಯಕ ಮೃದಂಗ ವಿದ್ವಾಂಸನಾಗಿಯೂ ಮೆರೆದರು. ಮೊಹರಿ ದ್ಯಾವ ನಾಯ್ಕನು ತನ್ನ ಮೊಹರಿ ವಾದ್ಯವನ್ನು ಮೈಸೂರು ಅರಮನೆಯ ದರ್ಬಾರ್‌ಹಾಲಿನಲ್ಲಿಯೂ ನುಡಿಸುತ್ತಿದ್ದನು.

ಈ ನಾಯಕ ಜನಾಂಗದವರು ಪ್ರದರ್ಶಿಸುತ್ತಿದ್ದ ಕರಿಭಂಟನ ಕಥೆ, ಹರಿಶ್ಚಂದ್ರ, ಧರ್ಮಪಾಲ ಚರಿತ್ರೆ ಮೊದಲಾದ ಯಕ್ಷಗಾನ ಪ್ರಸಂಗಗಳು ಸಾವಿರಾರು ಜನ ಪ್ರೇಕ್ಷಕರನ್ನು ರಂಜಿಸುತ್ತಿದ್ದುವು. ಈ ಕಲಾವಿದರ ಸವಿನೆನಪು ಇಂದಿನ ಹಿರಿಯರಲ್ಲಿ ಇನ್ನೂ ಹಚ್ಚಹಸುರಾಗಿ ಉಳಿದು ಬಂದಿದೆ ಎಂದರೆ ಅತಿಶಯೋಕ್ತಿಯಲ್ಲ.

ಮುಂದಿನ ದಿನಗಳಲ್ಲಿ ಶ್ರೀ ಡಿ. ಎಸ್. ಪುಟ್ಟಸ್ವಾಮಯ್ಯ, ಮಲ್ಲಣ್ಣ, ಬಿ. ಎಸ್. ನಂಜಪ್ಪ, ಕುಲಗಾಣದ ಗೋವಿಂದರಾಜು ಮೊದಲಾದವರು

ಉತ್ತಮ ಅಭಿನಯದಿಂದ ಸಾರಂಗಧರ, ಕಾಳಿದಾಸ ಮೊದಲಾದ ನಾಟಕ ಗಳನ್ನು ಪ್ರದರ್ಶಿಸುತ್ತಿದ್ದರು.

1935ರ ನಂತರ ಹುಲ್ಲಹಳ್ಳಿಯಲ್ಲಿ ಮತ್ತೊಂದು ನಾಟಕ ಕಲಾವಿದರ ವರ್ಗವೊಂದು ಜನ್ಮತಾಳಿತು. ಶ್ರೀಕಂಠ ಜೋಯಿಸರ ಅಧ್ಯಕ್ಷತೆಯಲ್ಲಿ 'ದಿ ಅಸೋಸಿಯೇಟೆಡ್ ಡ್ರಮಾಟಿಕ್ ಕಂಪೆನಿ'ಯು ಹಲವಾರು ಪೌರಾ ಣಿಕ, ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸತೊಡ ಗಿತು ಹುಲ್ಲಹಳ್ಳಿಯವರಲ್ಲದೆ ನೆರೆಹೊರೆಯ ಗ್ರಾಮದ ಜನರು ನಾಟಕ ಗಳನ್ನು ವೀಕ್ಷಿಸಲು ಬರಲಾರಂಭಿಸಿದರು.

ಕಂಪನಿಯಲ್ಲಿ ಪ್ರದರ್ಶಿಸಲ್ಪಡುತ್ತಿದ್ದ ನಾಟಕಗಳಲ್ಲಿ ಸುಪ್ರಭಾ ವಿಲಾಸ ಶ್ರೀಕೃಷ್ಣ ಪಾರಿಜಾತ, ಗಿರಿಜಾಕಲ್ಯಾಣ, ಸುಗ್ರೀವಸಖ್ಯ, ಕೃಷ್ಣ ಲೀಲೆ, ಸಂಪೂರ್ಣರಾಮಾಯಣ, ಮನ್ಮಥ ವಿಜಯ, ಗುಲೇಬ ಕಾವಲಿ, ಕಾಳಿದಾಸ, ಸದಾರಮೆ ಮತ್ತು ಸ್ತ್ರೀ-ನಾಟಕಗಳು ಅದ್ಭುತ ಯಶಸ್ಸನ್ನು ಗಳಿಸಿದುವು.

ಕಾಳಿದಾಸನಾಗಿ ಹೆಚ್. ಎಂ. ರಾಮಾರಾಧ್ಯ, ಭೋಜರಾಜ ಮತ್ತು ಅರ್ಜುನನ ಪಾತ್ರಗಳಲ್ಲಿ ಫಾಲಲೋಚನಾರಾಧ್ಯ, ಶ್ರೀಕೃಷ್ಣನ ಪಾತ್ರದಲ್ಲಿ ಕುಮಾರಸ್ವಾಮಿ ಪಂಡಿತ್, ಕಾಳಿಕಾಮಾತೆಯಾಗಿ ಆನಂದ ರಾಯ, ಪ್ರಮುಖ ಸ್ತ್ರೀ ಪಾತ್ರಗಳಲ್ಲಿ ಸಂಜೀವಶೆಟ್ಟಿ ಸಹಾಯಕ ನಟರಾಗಿ ಹನುಮಂತಶೆಟ್ಟಿ ಮತ್ತು ಮುನ್ನಾರುಕೃಷ್ಣಯ್ಯ ಖಳನಾಯಕ ಮತ್ತು ಹಾಸ್ಯ ಪಾತ್ರಗಳಲ್ಲಿ ಹಾಗೂ ಸದಾರಮೆಯ ಕಳ್ಳನಾಗಿ ಹೆಚ್. ಎಂ. ಸಿದ್ಧಲಿಂಗಾರಾಧ್ಯ ಮತ್ತು ನಾಟಕ ಕಂಪನಿಯ ಪ್ರಮುಖ ವರ್ಣ ಕಾರನಾಗಿ ಲಕ್ಷ್ಮಣರಾಜು, ಹಾರ್ಮೋನಿಯಂ ವಾದಕರಾಗಿ ಹೆಚ್. ಎಂ. ರಾಮಾರಾಧ್ಯ ಮತ್ತು ಹೆಚ್ ಎಂ. ಮಲ್ಲಾರಾಧ್ಯ-ಇವರೆಲ್ಲರೂ ಹುಲ್ಲ ಹಳ್ಳಿ ನಾಟಕ ಕಂಪನಿಯ ಪ್ರಮುಖ ಕಲಾವಿದರು ಮತ್ತು ಆಧಾರಸ್ತಂಭ ಗಳು. ಶ್ರೀ ನಂಜುಂಡಯ್ಯನವರು ನಾಟಕದ ಸ್ಟೇಜ್ ಮ್ಯಾನೇಜರ್ ಆಗಿ ಬಹುಕಾಲ ಸೇವೆ ಸಲ್ಲಿಸಿದರು.

ಪ್ರತಿನಿತ್ಯ ಸುತ್ತಲ ಹಳ್ಳಿಗಳಿಂದ ನೂರಾರು ಗಾಡಿಗಳಲ್ಲಿ ಜನರು ಬಂದು ನಾಟಕವನ್ನು ನೋಡಿ ಆನಂದಪರವಶರಾಗುತ್ತಿದ್ದರು. ಹಲವು ವೇಳೆ ಅನೇಕ ಜನರಿಗೆ ಟಿಕೆಟ್ ಸಿಗದೆ ವಾಪಸ್ ಹೋಗುತ್ತಿದ್ದುದೂ ಉಂಟು.

ಹುಲ್ಲಹಳ್ಳಿಯ ಕಲಾವಿದರೊಡನೆ ಆಗತಾನೆ ಚಲನಚಿತ್ರರಂಗಕ್ಕೆ ಪದಾರ್ಪಣೆ ಮಾಡಿದ್ದ ನರಸಿಂಹರಾಜು, ಸೋರಟ್ ಅಶ್ವಥ್ (ಸಾಹಿತಿ), ಕಣಗಾಲ್ ಪ್ರಭಾಕರಶಾಸ್ತ್ರಿ, ಜಿ. ವಿ. ಅಯ್ಯರ್ ಮತ್ತು ಡಿಕ್ಕಿಮಾಧವ ರಾವ್, ಪ್ರಸಿದ್ಧ ರಂಗ ಕಲಾವಿದ ಕೊಟ್ಟೂರು ಬಸಪ್ಪ ಮೊದಲಾದವರೂ ಪ್ರಮುಖ ಪಾತ್ರಗಳಲ್ಲಿ ಭಾಗವಹಿಸುತ್ತಿದ್ದರು.

ನಾಟಕ ಕಂಪನಿಯವರು ಪ್ರಾರಂಭದಲ್ಲಿ ರಂಗ ಸಜ್ಜಿಕೆಗಳನ್ನು ಬೇರೆಡೆಯಿಂದ ಬಾಡಿಗೆಗೆ ತರುತ್ತಿದ್ದರೂ ಕ್ರಮೇಣ ಸ್ವತಂತ್ರ ರಂಗಸಜ್ಜಿಕೆ ಹಾಗೂ ರಂಗಮಂದಿರವನ್ನು ಹೊಂದಿದರು. ಸುಸಜ್ಜಿತ ಮತ್ತು ವರ್ಣ ರಂಜಿತವಾದ ರಂಗಮಂದಿರದ ನಿರ್ಮಾತೃ ಹಾಗೂ ಮಾಲೀಕರಾಗಿ ಕುಮಾರಸ್ವಾಮಿ ಪಂಡಿತರವರು ಬಹುಕಾಲ ನಿರ್ವಹಿಸಿದರು.

1952ರ ನಂತರ ಈ ವೃತ್ತಿರಂಗಭೂಮಿಯಿಂದ ಅನೇಕ ಯುವಕರು ಸ್ಫೂರ್ತಿಯನ್ನು ಪಡೆದು 'ಬಸವೇಶ್ವರ ಕಲಾ ಸಂಘ' ಎಂಬ ಹೆಸರಿನಲ್ಲಿ ಹವ್ಯಾಸಿ ಕಲಾತಂಡವನ್ನು ರೂಪಿಸಿಕೊಂಡರು. ಇವರಲ್ಲಿ ಹೆಚ್. ಎಸ್. ಗಿರಿರಾಜ್, ಹೆಚ್. ಬಿ. ಮರಿಯಪ್ಪ, ಮಿಲ್ ಶಿವ ರುದ್ರಪ್ಪ, ಸದಾನಂದ, ಮಲ್ಲು ಪ್ರಮುಖರು. ಇವರು ತಮ್ಮ ಸಂಘದ ಆಶ್ರಯದಲ್ಲಿ ಬಸವೇಶ್ವರ ಜಯಂತಿ ನಾಟಕ ಮತ್ತು ಯಕ್ಷಗಾನಗಳನು ನಡೆಸಿಕೊಂಡು ಬಂದು ಹುಲ್ಲಹಳ್ಳಿ ಮತ್ತು ಸುತ್ತಲ ಹಳ್ಳಿಯ ಯುವಕ ರನ್ನೂ ಕಲಾವಿದರನ್ನಾಗಿ ರೂಪಿಸುತ್ತಿದ್ದರು. ಈ ಸಂಘದ ವಾರ್ಷಿಕೋತ್ಸವ ದಲ್ಲಿ ಧರ್ಮಕಾರ್ಯ ಧುರೀಣ ಶ್ರೀ ಬಿ. ಚಂದ್ರಶೇಖರಯ್ಯನವರು ಕಲಾವಿದರಿಗೆ ಸನ್ಮಾನ ಮತ್ತು ಬಡವರಿಗೆ ಅನ್ನದಾನವನ್ನು ನೀಡು ತ್ತಿದ್ದರು.

ಕಾಲ ಉರುಳಿದಂತೆ ಚಲನಚಿತ್ರಗಳು ಹಳ್ಳಿಯನ್ನು ಪ್ರವೇಶಿಸಿ ವೃತ್ತಿ ರಂಗಭೂಮಿಗಳು ಕಣ್ಮರೆಯಾಗುತ್ತಾ ಬಂದುವು. ಹುಲ್ಲಹಳ್ಳಿಯಲ್ಲೂ ಇದೇ ಸ್ಥಿತಿಯೊದಗಿಬಂದು ರಂಗಭೂಮಿಯು ಕೆಲವು ಮೂಲಭೂತ ವೆಚ್ಚವನ್ನೂ ಭರಿಸಲಾಗದೆ ಸಿಲುಗಡೆಯ ಸ್ಥಿತಿಗೆ ಬಂದಿತು. ಅಂದಿನ ಕಲಾವಿದರು ಕೆಲವರು ಇಂದು ಊರಿನ ಹಿರಿಯರಾಗಿ, ವಯೋವೃದ್ಧರಾಗಿ ಬಾಳುತ್ತಿದ್ದಾರೆ. ಅಂದಿನ ಇವರ ಅಭಿನಯ, ಕಲಾವಂತಿಕೆಯನ್ನು ನೋಡಿದ ಜನರಿಗೆ ಇಂದಿನ ಬಣ್ಣದ ಚಲನಚಿತ್ರಗಳು ಯಾವ ರೀತಿ ಯಿಂದಲೂ ಮುದವನ್ನುಂಟುಮಾಡುತ್ತಿಲ್ಲವೆಂಬರೆ ಆಶ್ಚರ್ಯವಿಲ್ಲ.

ನಮ್ಮೂರಿನ ಕಲಾವಿದರಿಗೆ ಊರಿನ ಬಗ್ಗೆ ತುಂಬಾ ಕಳಕಳಿಯೂ ಇತ್ತು. ಅನೇಕ ವೇಳೆ 'ಬೆನಿಫಿಟ್ ಷೋ' ನಡೆಸಿ ಆ ನಾಟಕದಿಂದ ಬಂದ ಲಾಭವನ್ನು ಊರಿನ ಅಭಿವೃದ್ಧಿಯ ಕಾರ್ಯಗಳಿಗೆ ಉಪಯೋಗಿಸುತ್ತಿದ್ದರು. ಇಂದು ಹುಲ್ಲಹಳ್ಳಿಯ ನಾಟಕದ ಕಂಪೆನಿ ಒಂದು ಗತವೈಭವದ ನೆನಪು ಮಾತ್ರ.

ಕಲೆ ಮತ್ತು ಸಂಸ್ಕೃತಿಯ ಉಳಿವಿಗೆ ಶ್ರಮಿಸಿದ ಕೆಲವರ ಸಮಗ್ರ ಪರಿಚಯವನ್ನು ಇಲ್ಲಿ ಕೊಡಲು ಯತ್ನಿಸಲಾಗಿದೆ.

## 1. ಕಲಾತಪಸ್ವಿ ಹೆಚ್. ಎಂ. ಎಸ್. ಆರಾಧ್ಯ

ಕಲೆಗಾಗಿ ಇಡೀ ಜೀವಮಾನವನ್ನೇ ಮುಡಿಪಾಗಿಟ್ಟು, ಕಲಾರಂಗದ ಮೇಲೆ ಅದ್ದೂರಿಯಾಗಿ ಮೆರೆದು, ನಲಿವು ನೋವುಗಳನ್ನು ಸಮಸಮವಾಗಿ ಅನುಭವಿಸಿ ಕರ್ನಾಟಕದ ಕಲಾಚರಿತ್ರೆಯಲ್ಲಿ ಹುಲ್ಲಹಳ್ಳಿಗೂ ಒಂದು ಸ್ಥಾನವನ್ನು ದೊರಕಿಸಿ ಕೊಟ್ಟವರು ಎಂದರೆ ಹೆಚ್. ಎಂ. ಎಸ್. ಆರಾಧ್ಯ ರೆಂದು ಚಿರಪರಿಚಿತರಾದ ಹುಲ್ಲಹಳ್ಳಿಯ ಹೆಚ್. ಎಂ. ಸಿದ್ಧಲಿಂಗಾ ಆರಾಧ್ಯರು.

ಜ್ಯೋತಿಷ್ಯ, ಪೌರೋಹಿತ್ಯ, ಸಂಗೀತ, ನಾಟಕ, ಸಾಹಿತ್ಯ ಮತ್ತು ಕೀರ್ತನೆಗಳಿಗೆ ಪ್ರಸಿದ್ಧವಾದ ಮನೆತನದಲ್ಲಿ, ಹುಲ್ಲಹಳ್ಳಿಯ ಶ್ರೀ ಮಲ್ಲಾರಾಧ್ಯರಿಗೆ ಐದನೇ ಮಗನಾಗಿ ಕ್ರಿ.ಶ. 1924 ರಲ್ಲಿ ಸಿದ್ಧಲಿಂಗಾರಾಧ್ಯರು ಜನ್ಮವೆತ್ತಿದರು. ಇವರ ಹಿರಿಯಣ್ಣ ಶ್ರೀ ರಾಮಾ ಆರಾಧ್ಯರ ಆಶ್ರಯದಲ್ಲಿ ಮೈಸೂರಿನಲ್ಲಿ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದ ಹೆಚ್. ಎಂ. ಎಸ್. ಆರಾಧ್ಯರಿಗೆ ಟೈಗರ್ ವರದಾಚಾರ್, ಸುಬ್ಬಯ್ಯ ನಾಯಿಡು, ಗುಬ್ಬಿವೀರಣ್ಣನವರ ನಾಟಕಗಳನ್ನು ನೋಡುವ ಅವಕಾಶ ದೊರೆತು ಇವರಲ್ಲೂ ಕಲಾಂಕುರವುಂಟಾಯಿತು.

ಮಾಧ್ಯಮಿಕ ಹಾಗೂ ಪ್ರೌಢಶಾಲಾ ನಾಟಕೋತ್ಸವಗಳಲ್ಲಿ ಅಭಿನಯಿಸುತ್ತಿದ್ದ ಆರಾಧ್ಯರನ್ನು ಕಂಪೆನಿ ನಾಟಕಗಳ ಕಲಾವಿದರು ಗುರುತಿಸಿದರು. 1944 ರಲ್ಲಿ ಜ್ಯೋತಿ ಕಲಾ ಮಂಡಲಿಯ ವೃತ್ತಿರಂಗದ ಮೇಲೆ ಪ್ರಥಮ ಬಾರಿಗೆ ಕಾಣಿಸಿಕೊಂಡರು. ಆರಾಧ್ಯರು ತಾವೇ ಸ್ವತಃ ನಾಟಕ ಸಂಘವನ್ನು ಸ್ಥಾಪಿಸಿ ಮೈಸೂರಿನ ಟೌನ್‌ಹಾಲಿನಲ್ಲಿ 'ಬಲಿದೇವಿ' ಮತ್ತು 'ಸದಾರಮೆ' ನಾಟಕಗಳನ್ನು ಪ್ರದರ್ಶಿಸಿದರು. ಸದಾರಮೆ ನಾಟಕ

ದಲ್ಲಿ ಆರಾಧ್ಯರು ಅಭಿನಯಿಸಿದ ಕಳ್ಳನ ಪಾತ್ರವನ್ನು ಮೆಚ್ಚಿ ನಾಗರತ್ನಮ್ಮನವರ ತಂದೆ ರುದ್ರಪ್ಪನವರು ಇವರನ್ನು ಚಾಮುಂಡೇಶ್ವರಿ ನಾಟಕ ಕಂಪೆನಿಗೆ ಮುಖ್ಯ ಪಾತ್ರಧಾರಿಯಾಗಿ ನೇಮಕ ಮಾಡಿಕೊಂಡರು. ಈ ಕಂಪೆನಿಯು ತಿಪಟೂರು ಕ್ಯಾಂಪಿನಲ್ಲಿ ಪ್ರದರ್ಶಿಸಲ್ಪಟ್ಟ 'ತಿಲೋತ್ತಮೆ' ನಾಟಕದಲ್ಲಿ ಇವರ ಭಸ್ಮಾಸುರನ ಪಾತ್ರವು ಜನಪ್ರಿಯವಾಯಿತು. ಅಂದಿನ ಕಲಾರಂಗದ ರಾಣಿಯೆನಿಸಿದ್ದ, ಮೋಹಿನಿ ಪಾತ್ರವನ್ನು ನಿರ್ವಹಿಸುತ್ತಿದ್ದ ಮಳವಳ್ಳಿ ಸುಂದರಮ್ಮನವರು ಆರಾಧ್ಯರ ಪಾತ್ರವನ್ನು ಮನಸಾರೆ ಕೊಂಡಾಡಿದರು. ಕೊಟ್ಟೂರು ಬಸಪ್ಪ ಮತ್ತು ಬಸವರಾಜ್ ಸಹೋದರರು ಮುಕ್ತಕಂಠದಿಂದ ಹೊಗಳಿದರು.

ನಂತರ ಶಿವಮೊಗ್ಗ, ಭದ್ರಾವತಿ, ಕಡೂರು, ಮಂಗಳೂರು, ಉಡುಪಿ, ಕುಂದಾಪುರ, ಚೆನ್ನಪಟ್ಟಣ, ಚಿಂತಾಮಣಿ, ದೊಡ್ಡಬಳ್ಳಾಪುರಗಳಲ್ಲಿ ಪ್ರದರ್ಶಿಸಿದ ನಾಟಕಗಳಲ್ಲಿ ಆರಾಧ್ಯರ ಪಾತ್ರಗಳು ಜಯಭೇರಿಯನ್ನು ಬಾರಿಸಿದುವು.

1948ರ ವೇಳೆಗೆ ಹುಲ್ಲಹಳ್ಳಿಗೆ ಆಗಮಿಸಿದ ಆರಾಧ್ಯರು ಮಲ್ಲೇಶ್ವರ ನಾಟಕ ಮಂಡಲಿಯನ್ನು ಸ್ಥಾಪಿಸಿ ಒಂದು ವರ್ಷಕಾಲ ಹದಿನೈದು ವಿವಿಧ ನಾಟಕಗಳನ್ನು ಚಿತ್ರನಟರಾದ ಸೋರಟ್ ಅಶ್ವಥ್, ನರಸಿಂಹರಾಜು, ಡಿಕ್ಕಿಮಾಧವರಾವ್ ಮೊದಲಾದವರನ್ನು ಕರೆತಂದು ಅವರೊಡನೆ ಅಭಿನಯಿಸುತ್ತಿದ್ದರು. ಸದಾರಮೆ ನಾಟಕದ ಕಳ್ಳನ ಪಾತ್ರದ ರಸದೂಟವನ್ನೇ ಉಣಬಡಿಸಿದರು.

1951–52 ರಲ್ಲಿ ಆರಾಧ್ಯರಿಗೆ ಶಾಲಾ ಉಪಾಧ್ಯಾಯ ವೃತ್ತಿ ದೊರಕಿತು. ರಜಾವೇಳೆಯಲ್ಲಿ ಹಳ್ಳಿಗಳಲ್ಲಿ ನಾಟಕಗಳನ್ನು ಅಲ್ಲಿನ ಜನರಿಂದಲೇ ಆಡಿಸಿ ತಾವೂ ಪಾತ್ರವಹಿಸುತ್ತಿದ್ದರು. ಇವರ ನಾಟಕ ಕಲಾ ಬೆಳವಣಿಗೆಗೆ ಉಪಾಧ್ಯಾಯ ವೃತ್ತಿಯು ಅಡ್ಡಿಯಾಗಿ ಪರಿಣಮಿಸಿ ಆರಾಧ್ಯರು ಈ ವೃತ್ತಿಗೆ ರಾಜೀನಾಮೆ ನೀಡಿ, ಆಗ ತುಮಕೂರಿನಲ್ಲಿದ್ದ ಗುಬ್ಬಿಕಂಪನಿಯಿಂದ ಕರೆಬರಲಾಗಿ ಪಂಜರದಿಂದ ಹಾರುವ ಗಿಳಿಯಂತೆ ಸಂತೋಷದಿಂದ ಕಂಪನಿ ಸೇರಿದರು.

'ಸಾಹುಕಾರ' ನಾಟಕದಲ್ಲಿ ಸಾಹುಕಾರನಾಗಿ, 'ಆದರ್ಶಪುತ್ರ'ದಲ್ಲಿ ಶುಕ್ರಾಚಾರ್ಯನಾಗಿ, 'ಅಕ್ಕಮಹಾದೇವಿ'ಯಲ್ಲಿ ಅರವಿಂದನಾಗಿ, ಕಾಳಿದಾಸನಲ್ಲಿ ಕುರುಬ ಮತ್ತು ಮಂತ್ರಿಯಾಗಿ ಪಾತ್ರವಹಿಸಿ, ಗುಬ್ಬಿ

ಕಂಪನಿಯ ಹೆಸರಾಂತ ನಟರಾದ ಗಂಗಾಧರರಾಯರು, ಸುಬ್ಬರಾಯರು, ಪುಟ್ಟಸ್ವಾಮಯ್ಯ (ಚಿತ್ರನಟ ರಾಜಕುಮಾರ್ ಅವರ ತಂದೆ), ರಾಮ ರಾಜೇಅರಸ್, ಮುನಿಸ್ವಾಮಯ್ಯ, ಶೇಷಾಚಲಂ ಶೆಟ್ಟರು ಮತ್ತು ಬಾಲಕೃಷ್ಣ ಇವರುಗಳ ಸಹಯೋಗ ದೊರೆತು ಈ ಮಹಾನಟರ ಸರಿ ಸಮಾನವಾಗಿ ಕಲಾಸೇವೆಯನ್ನು ಮಾಡಿ 'ಹುಲ್ಲಹಳ್ಳಿ ಆರಾಧ್ಯ'ರೆಂದು ಚಿರಪರಿಚಿತರಾದರು.

ಮುಂದಿನ ದಿನಗಳಲ್ಲಿ ಮನೆಯ ಹಿರಿಯರು ಇವರಿಗೆ ನಾಗರತ್ನ ಎಂಬ ಹುಡುಗಿಯನ್ನು ಮದುವೆ ಮಾಡಿದರು. ಶೇಷ ಕಲಾ ಮಂಡಲಿಯ ಆಹ್ವಾನದ ಮೇರೆಗೆ ಆರಾಧ್ಯರು ಅಲ್ಲಿನ ಪೌರಾಣಿಕ ನಾಟಕಗಳಲ್ಲಿ ಮುಖ್ಯ ವಾಗಿ ಕೃಷ್ಣ ಮತ್ತು ದುರ್ಯೋಧನನ ಪಾತ್ರದಲ್ಲಿ ಮಿಂಚಿದರು. ಗೌರಿ ಬಿದನೂರು, ಮಳವಳ್ಳಿ, ರಾಮನಗರ, ತುಮಕೂರುಗಳಲ್ಲಿ ಇವರ ನಾಟಕ ಗಳು ಪ್ರದರ್ಶನಗೊಂಡವು. ನಂತರ ಮುರಾರಾಚಾರ್ ಮತ್ತು ವಿಮಲಾ ದಾಸರ ಕಂಪನಿ, ಗಾಯತ್ರಿ ಮತ್ತು ಶಶಿಕಲಾ ನಾಟಕ ಮಂಡಲಿಗಳಲ್ಲೂ ಪಾತ್ರವಹಿಸಿದರು.

ಆರಾಧ್ಯರು ತಮ್ಮ ತಂದೆಯವರ ಮರಣದ ಸುದ್ದಿಯನ್ನು ಕೇಳಿ ಹುಲ್ಲಹಳ್ಳಿಗೆ ಮರಳಿದರು ಸ್ವಲ್ಪ ಕಾಲ ಇಲ್ಲಿಯೇ ಇದ್ದು ಮೈಸೂರಿನ ನಟ ನಟಿಯರೊಡನೆ ಕಾಳಿದಾಸ, ಸದಾರಮೆ, ಕೃಷ್ಣಲೀಲೆ ನಾಟಕಗಳನ್ನು ಪ್ರದರ್ಶಿಸಿದರು. ಮತ್ತೆ ಶೇಷ ಕಲಾ ಮಂಡಲಿಗೆ ಪ್ರಯಾಣ. ಮೊಳೂರು, ಮೈಸೂರು, ಕೆ. ಆರ್. ನಗರ, ಚಾಮರಾಜನಗರಗಳಲ್ಲಿ ನಾಟಕ ಪ್ರದರ್ಶನ ಮತ್ತೆ ಅಲ್ಲಿಂದ ಬಿಡುಗಡೆ ಹೊಂದಿ ಕಾನಕಾನ ಹಳ್ಳಿಯಲ್ಲಿ ಸ್ವತಂತ್ರವಾಗಿ ನಾಟಕ ಸಂಘವನ್ನು ಸ್ಥಾಪಿಸಿದರು.

ಅಂದಿನ ಪ್ರಸಿದ್ಧ ರಂಗಕಲಾವಿದರಾದ ಕೊಟ್ಟೂರು ಬಸಪ್ಪ, ರಾಮಾಶಾಸ್ತ್ರಿ, ರಾಮಾನುಜಂ, ಶಾಂತಮ್ಮ, ಚಂದ್ರಮ್ಮ, ಪದ್ಮ ರಾಜಮ್ಮ ಮತ್ತು ಸುಮತಿ ಇವರುಗಳನ್ನು ಕೂಡಿಕೊಂಡು ಭೀಷ್ಮ ಪ್ರತಿಜ್ಞೆ, ಎಚ್ಚಮನಾಯಕ, ಕಬೀರ್, ರಾಮಾಯಣ–ಮೊದಲಾದ ನಾಟಕಗಳಲ್ಲಿ ಆರಾಧ್ಯರು ಕೃಷ್ಣ, ಎಚ್ಚಮ, ಕಬೀರ್ ಮತ್ತು ರಾವಣನ ಪಾತ್ರಗಳಲ್ಲಿ ಜೀವವನ್ನು ತುಂಬುತ್ತಿದ್ದರು. ಆರಾಧ್ಯರು ಸಾಂಸಾರಿಕ ಕಾರಣಗಳಿಂದಾಗಿ ಹುಲ್ಲಹಳ್ಳಿಗೆ ಮರಳಿದರು.

1956 ರಲ್ಲಿ ಗುಬ್ಬಿ ಕಂಪನಿಯು ಬೆಂಗಳೂರಿನಲ್ಲಿ ಅತ್ಯಂತ ವೈಭವದ

ಮತ್ತು ನವೀನ ಮಾದರಿಯ ರಂಗ ಸಜ್ಜಿಕೆಯನ್ನು ನಿರ್ಮಿಸಿತು. ಈ ರಂಗದ ಮೇಲೆ ಆರಾಧ್ಯರು ಮತ್ತೆ ಕಾಣಿಸಿಕೊಂಡರು. ದಶಾವತಾರ ನಾಟಕಗಳಲ್ಲಿ ಇಂದ್ರ, ಕೃಷ್ಣ, ವಿಷ್ಣು, ಶ್ರೀರಾಮ, ಹಿರಣ್ಯಕಶ್ಯಪ ಮತ್ತು ಶಿಶುಪಾಲನ ಪಾತ್ರಗಳಲ್ಲೂ ; ಕುರುಕ್ಷೇತ್ರ ನಾಟಕಗಳಲ್ಲಿ ಭೀಮ ಕೌರವ ನಾಗಿಯೂ ; ವಿರಾಟ ಪರ್ವದಲ್ಲಿ ಉತ್ತರನಾಗಿಯೂ ; ಸುಭದ್ರಾ ನಾಟಕದಲ್ಲಿ ಕೃಷ್ಣ, ಘಟೋದ್ಗಜನಾಗಿಯೂ ಉತ್ತಮ ಅಭಿನಯವನ್ನು ನೀಡಿದರು.

ಗುಬ್ಬಿ ಕಂಪನಿಯು ಜಿಲ್ಲಾ ಮತ್ತು ತಾಲ್ಲೋಕು ಕೇಂದ್ರಗಳಲ್ಲಿ ಪೌರಾಣಿಕ ನಾಟಕಗಳನ್ನು ಪ್ರದರ್ಶಿಸಿ, ಕೀರ್ತಿಪತಾಕೆಯನ್ನು ಮುಗಿಲೆತ್ತರ ಹಾರಿಸಿ ಮತ್ತೆ ಬೆಂಗಳೂರಿಗೆ ಹಿಂದಿರುಗಿ ಸಾಮಾಜಿಕ ನಾಟಕವಾದ 'ಅಣ್ಣ ತಮ್ಮ'ವನ್ನು ಪ್ರದರ್ಶಿಸಿತು. 'ಅಣ್ಣ'ನಾಗಿ ಆರಾಧ್ಯರು ಚಿರಸ್ಥಾಯಿಯಾದರು.

'ಅಣ್ಣ ತಮ್ಮ' ಮೂರು ಮಂದಿ ಸಹೋದರರ ಸುತ್ತ ಹೆಣೆದ ಕತೆ. ಅಭಿನಯದಲ್ಲಿ ಆವೇಗ, ಉದ್ವೇಗಗಳಿಗೆ ಹೆಚ್ಚಿನ ಅವಕಾಶವಿದೆ. ಹಿರಿಯಣ್ಣ ಸತ್ಯೇಂದ್ರ ತ್ಯಾಗಜೀವಿ, ನಿಸ್ವಾರ್ಥಿ ಮತ್ತು ನಿಷ್ಠಾವಂತ. ತಮ್ಮಂದಿರಾದ ಶೈಲೇಂದ್ರ ಮತ್ತು ರವೀಂದ್ರರ ಏಳಿಗೆಗಾಗಿ ತನ್ನ ಜೀವನ ವನ್ನೇ ಮುಡಿಪಾಗಿಡುತ್ತಾನೆ. ಹಿರಿಯಣ್ಣನಾಗಿ ಆರಾಧ್ಯರ ಅಭಿನಯ ಬಹು ಪರಿಣಾಮಕಾರಿಯಾಗಿರುತ್ತಿತ್ತು. ತಮ್ಮನಾದ ಶೈಲೇಂದ್ರ ಮನೆ ಬಿಟ್ಟು ಹೋಗುವ ಸನ್ನಿವೇಶ ಹಾಗೂ ಜೈಲಿನಲ್ಲಿದ್ದ ಇದೇ ಶೈಲೇಂದ್ರನನ್ನು ಬಿಡಿಸಿಕೊಂಡು ಮನೆತನದ ಗೌರವವನ್ನು ಉಳಿಸಿಕೊಳ್ಳುವ ಸಲುವಾಗಿ ಮತ್ತೊಬ್ಬ ತಮ್ಮನಾದ ಪೋಲಿಸ್ ಇನ್‌ಸ್ಪೆಕ್ಟರ್ ರವೀಂದ್ರನೊಡನೆ ನಡೆಸುವ ಸಂಭಾಷಣೆ ಮತ್ತು ಅಭಿನಯವು ಪ್ರೇಕ್ಷಕರನ್ನು ಭಾವೋದ್ವೇಗಕ್ಕೆ ಒಳಗಾಗಿಸುತ್ತಿತ್ತು. ಗುಬ್ಬಿ ಕಂಪನಿಯಲ್ಲೇ ಮುಂದಿನ ದಿನಗಳಲ್ಲಿ ಅಂದರೆ ಇಂದಿನವರೆಗೂ ಅಣ್ಣನ ಪಾತ್ರವಹಿಸಿದವರು ಆರಾಧ್ಯರಷ್ಟು ಸಮರ್ಥವಾಗಿ ಅಭಿನಯಿಸಲೇ ಇಲ್ಲ.

ಚಿತ್ರಬ್ರಹ್ಮ ಎನಿಸಿದ್ದ ಪ್ರಸಿದ್ಧ ಚಲನಚಿತ್ರ ನಿರ್ದೇಶಕ ಮತ್ತು ನಿರ್ಮಾಪಕರಾದ ಬಿ. ಆರ್. ಪಂತುಲು ಅವರನ್ನು ಆರಾಧ್ಯರ 'ಅಣ್ಣ'ನ ಪಾತ್ರ ಬಹುವಾಗಿ ಆಕರ್ಷಿಸಿ ತಾವು ತಯಾರಿಸುತ್ತಿದ್ದ 'ಗಾಳಿಗೋಪುರ' ಚಿತ್ರದಲ್ಲಿ ಅಭಿನಯಿಸಲು ಆರಾಧ್ಯರನ್ನು ಆಹ್ವಾನಿಸಿದರು. ಆದರೆ ಗುಬ್ಬಿ

ಕಂಪನಿಯಲ್ಲಿ ಆರಾಧ್ಯರು ಐದು ವರ್ಷಗಳ ಕಾಲ ಅಭಿನಯಿಸುತ್ತೇನೆಂದು ಕಾಂಟ್ರಾಕ್ಟನ್ನು ಬರೆದುಕೊಟ್ಟಿದ್ದರಿಂದಲೂ ಮತ್ತು ಇವರು ಪಾತ್ರವಹಿಸಿದ ನಾಟಕಗಳು ಜನಭರಿತವಾಗಿ ಪ್ರದರ್ಶನಗೊಳ್ಳುತ್ತಿದುದರಿಂದಲೂ ಗುಬ್ಬಿ ವೀರಣ್ಣನವರ ಅನುಮತಿ ದೊರೆಯಲಿಲ್ಲ.

ಆರಾಧ್ಯರ ಪ್ರೀತಿಯ ಅಕ್ಕ ಮತ್ತು ತಾಯಿಯವರ ಮರಣವು ಇವರನ್ನು ಹುಲ್ಲಹಳ್ಳಿಗೆ ಕರೆತಂದಿತು. ನಾಲ್ಕು ಹೆಣ್ಣುಮಕ್ಕಳ ತಂದೆಯಾಗಿದ್ದ ಆರಾಧ್ಯರು ಊರಿನಲ್ಲೇ ಚಿಲ್ಲರೆ ಅಂಗಡಿ ತೆರೆದು ಜೀವನ ಪ್ರಾರಂಭಿಸಿದರು. ತಮ್ಮ ಹೆಣ್ಣುಮಕ್ಕಳ ಮದುವೆಯನ್ನು ಮಾಡಿದರು. ಗುಬ್ಬಿ ಕಂಪನಿ ಕೆ. ಆರ್. ನಗರಕ್ಕೆ ಬಂದಾಗ ವೀರಣ್ಣನವರ ವಿಶ್ವಾಸಕ್ಕೆ ಪಾತ್ರವಹಿಸಲು ಹೋದರು. ಸ್ವಲ್ಪ ದಿನಗಳಲ್ಲಿ ನಾಟಕದ ಜೀವನ ಸಾಕೆನಿಸಿತು. ಇಂದಿಗೆ ಅರವತ್ತೊಮ್ಮರು ವರ್ಷಗಳು ತುಂಬಿರುವ ಹುಲ್ಲಹಳ್ಳಿಯ ಆರಾಧ್ಯರು ಸತತವಾಗಿ ಐವತ್ತು ವರ್ಷಗಳ ಕಲಾ ಸೇವೆಯನ್ನು ಸಲ್ಲಿಸಿದ್ದಾರೆ.

ಆರಾಧ್ಯರ ರಂಗಜೀವನವು ಕೇವಲ ನಲಿವಿನಿಂದಲೇ ಕೂಡಿರಲಿಲ್ಲ. ನಾಟಕದ ಕಂಪನಿಗಳು ಊರಿಂದೂರಿಗೆ ಅಲೆಯುತ್ತಿದ್ದಾಗ ಮಲೇರಿಯಾ ರೋಗಕ್ಕೆ ತುತ್ತಾದ ಆರಾಧ್ಯರು ತಿಂಗಳುಗಟ್ಟಲೆ ನರಳಿದರು. ತಾವೇ ಸ್ಥಾಪಿಸಿದ ಕಂಪನಿಗಳು ನೆಲಕಚ್ಚಿದಾಗ ಸಾಲಗಾರರಾದರು. ಊಟ ತಿಂಡಿಗಳಿಲ್ಲದ ದಿನಗಳೆಷ್ಟೋ! ತಮ್ಮ ಮಕ್ಕಳನ್ನೂ ಸಾಕಲಾರದೆ ಅವರನ್ನು ತಮ್ಮ ಅಣ್ಣಂದಿರ ಮನೆಗಳಲ್ಲಿ ಬಿಟ್ಟಿದ್ದುದೂ ಉಂಟು. ಆರಾಧ್ಯರ ಹೆಂಡತಿಯು ತಮ್ಮ ತವರು ಮನೆಯಲ್ಲೇ ಹಲವು ಬಾರಿ ಉಳಿಯುವಂಥ ಸಂಭವವೂ ಇತ್ತು. ಬೆಂಗಳೂರಿನಲ್ಲಿ ಮನೆಯನ್ನು ಬಾಡಿಗೆಗೆ ಪಡೆದು, ಬಾಡಿಗೆ ಕೊಡಲಾರದೆ ರಾತ್ರೋರಾತ್ರಿ ಮನೆ ಖಾಲಿ ಮಾಡಿ ಹೋಬಿದ್ದುದೂ ಉಂಟು. ಇಂತಹ ಕಠಿಣ ಪರಿಸ್ಥಿತಿಯಲ್ಲಿ ಇವರ ಜೀವನ ನೌಕೆಯನ್ನು ದಾಟಿಸಿದವನು ಹುಲ್ಲಹಳ್ಳಿಯ 'ಪೇಟೆಗಣಪತಿ' ಆರಾಧ್ಯರ ಪ್ರೀತಿಯ ದೈವ.

ರಂಗ ಜೀವನದಿಂದ ನಿವೃತ್ತಿಹೊಂದಿ ಪತ್ನಿ ಮತ್ತು ಇಬ್ಬರು ಗಂಡು ಮಕ್ಕಳೊಡನೆ ಗಣಪತಿಯ ಆರಾಧಕರಾಗಿ, ಅಲ್ಪ ಸ್ವಲ್ಪ ಪೌರೋಹಿತ್ಯವನ್ನು ನಡೆಸಿಕೊಂಡು ಹುಲ್ಲಹಳ್ಳಿಯಲ್ಲಿಯೇ ಜೀವನ ಸಾಗಿಸುತ್ತಿದ್ದಾರೆ.

ಕಲಾತಪಸ್ವಿ ಹೆಚ್. ಎಂ. ಎಸ್. ಆರಾಧ್ಯರ ಕಲಾರಂಗ ಸೇವೆಯನ್ನು ಕರ್ನಾಟಕ ಸಂಸ್ಕೃತಿ ಇಲಾಖೆಯು 150ರೂ.ಗಳ ಮಾಸಿಕ ಗೌರವ ಧನದಿಂದ ಅಳೆಯುತ್ತಿದೆ. ಕಲೆಗೆ ಬೆಲೆಯುಂಟೆ?

## 2. ಸಾಂಪ್ರದಾಯಿಕ ಚಿತ್ರಕಲಾವಿದ ದಿ|| ಕುಮಾರಸ್ವಾಮಿ ಪಂಡಿತ್

ಪ್ರಖ್ಯಾತ ಆಯುರ್ವೇದ ವಿದ್ವಾನ್ ವೆಂಕಟಸುಬ್ಬಾ ಪಂಡಿತರ ಹಿರಿಯ ಮಗನಾಗಿ 1908ರಲ್ಲಿ ಜನಿಸಿದ ಶ್ರೀಯುತ ಕುಮಾರಸ್ವಾಮಿ ಪಂಡಿತರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಹುಲ್ಲಹಳ್ಳಿಯಲ್ಲಿಯೇ ಪಡೆದು ಸ್ವಲ್ಪಕಾಲ ತಂದೆಯ ಬಳಿ ಆಯುರ್ವೇದ ಶಿಕ್ಷಣವನ್ನು ಪಡೆದರು. ಕುಮಾರಸ್ವಾಮಿಯವರ ಹೆಚ್ಚಿನ ಆಸಕ್ತಿಯು ಚಿತ್ರಕಲೆಯಲ್ಲಿರುವುದನ್ನು ಅರಿತ ತಂದೆಯು ಮಗನಿಗೆ 1929ರಲ್ಲಿ ಮೈಸೂರಿನಲ್ಲಿ ಆಗಿನ ಇಂಟರ್ ಮೀಡಿಯಟ್ ಶಿಕ್ಷಣವನ್ನು ಕೊಡಿಸಿ, ಮೈಸೂರಿನ ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್‌ನಲ್ಲಿ 1930–35ರವರೆಗೆ ವಾಟರ್ ಪೆಯಿಂಟಿಂಗ್‌ನಲ್ಲಿ ತರಬೇತಿಯನ್ನು ಕೊಡಿಸಿದರು. ಚಿತ್ರಕಲೆಯಲ್ಲಿ ಶಿಕ್ಷಣವನ್ನು ಪಡೆದ ಕುಮಾರಸ್ವಾಮಿ ಪಂಡಿತರು ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದಲ್ಲಿ ಮೂರುವರ್ಷಗಳ ಕಾಲ ಚಿತ್ರಕಲಾವಿದರಾಗಿದ್ದು ದೇವಸ್ಥಾನದ ರಥದ ವಾಹನಗಳಾದ ವೃಷಭ, ಹಂಸ, ಗರುಡ ಮೊದಲಾದ ಕಲಾಕೃತಿಗಳನ್ನು ತಯಾರಿಸಿಕೊಟ್ಟರು.

ಈ ವೇಳೆಯಲ್ಲಿ ಹುಲ್ಲಹಳ್ಳಿಯಲ್ಲಿದ್ದ ನಾಟಕ ಕಂಪನಿಯು ಬಾಡಿಗೆ ಆಧಾರದ ಮೇಲೆ ಡ್ರಾಮಾ ಸೀನರಿಗಳನ್ನು ಹೊಂದಿತ್ತು. ಕೆಲವು ವೇಳೆ ಬಾಡಿಗೆಗೆ ಸೀನರಿಗಳು ದೊರೆಯುವುದು ತಡವಾದರೆ ನಾಟಕಗಳನ್ನು ಆಡಲು ಅಡ್ಡಿಯಾಗುತ್ತಿತ್ತು. ಇದನ್ನು ಗಮನಿಸಿದ ಕುಮಾರಸ್ವಾಮಿ ಪಂಡಿತರು ಹುಲ್ಲಹಳ್ಳಿಯಲ್ಲೇ ಇದ್ದುಕೊಂಡು ಭವ್ಯ ಮತ್ತು ಸುಂದರವಾದ ನಾಟಕದ ಪರದೆಗಳನ್ನು (ಸೀನರಿಗಳನ್ನು) ಸಿದ್ಧಗೊಳಿಸಿದರು. ರೋಡ್ ಸೀನ್, ಅಗಮನೆ, ಅರಣ್ಯ ಮೊದಲಾದ ಐವತ್ತು ರೀತಿಯ ವಿವಿಧ ದೃಶ್ಯಗಳನ್ನು ಅಳವಡಿಸಿ ಶಾಸ್ತ್ರೀಯವಾಗಿ ರಂಗಮಂದಿರವನ್ನು ಸಜ್ಜುಗೊಳಿಸಿದರು. ದೃಶ್ಯಗಳಿಗೆ ತಕ್ಕಂತೆ ಹಲವಾರು ಪೀಠೋಪಕರಣಗಳನ್ನೂ (ಕಲಾವಿದರಿಗಾಗಿ) ಮಾಡಿಸಿದರು. ನಾಟಕ ಮಂದಿರದಲ್ಲಿ ಮೂವತ್ತೈದು ಮಂದಿಗೆ ವಿವಿಧ ಕೆಲಸಗಳನ್ನು ವಹಿಸಿಕೊಟ್ಟು ಅವರಿಗೆ ಉದ್ಯೋಗವನ್ನು ದೊರಕಿಸಿಕೊಟ್ಟರು. ಡೈನಮೋವನ್ನು ಹೊಂದಿ ನಾಟಕ ಮಂದಿರದಲ್ಲಿ ಬೆಳಗಿನ ವ್ಯವಸ್ಥೆ ಇರುವಂತೆ ಮಾಡಿದರು. ಈ ರಂಗಮಂಟಪದಲ್ಲಿ ಚಲನಚಿತ್ರ ಕಲಾವಿದರೂ ಬಂದು ನಾಟಕಾಭಿನಯವನ್ನು ಮಾಡುತ್ತಿದ್ದರು.

ಹುಲ್ಲಹಳ್ಳಿಯಲ್ಲಿ ಗೌರಿ-ಗಣೇಶ ವಿಗ್ರಹಗಳ ತಯಾರಿಕೆಯನ್ನು ಕುಮಾರಸ್ವಾಮಿ ಪಂಡಿತರು ಪ್ರಾರಂಭಿಸಿ ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮಗಳಿಗೆ ಹಬ್ಬದ ವೇಳೆಯಲ್ಲಿ ಒದಗಿಸುತ್ತಿದ್ದರು. ಬಹುಕಾಲದವರೆಗೂ ಈ ವೃತ್ತಿ ನಡೆಯಿತು.

ಹುಲ್ಲಹಳ್ಳಿಯಲ್ಲಿ ನಡೆಯುವ ಕಾಳಿಕಾದೇವಿ ಉತ್ಸವಕ್ಕೆ ಕುದುರೆ ವಾಹನವನ್ನು ತಯಾರಿಸಿ ಕೊಟ್ಟ ಪಂಡಿತರು ತಮ್ಮ ಜೀವಿತ ಕಾಲದವರೆಗೂ ಶ್ರೀ ಮಲ್ಲಿಕಾರ್ಜುನ ದೇವಾಲಯದ ಅರ್ಚಕರಾಗಿ, ದೇವಾಲಯದ ಕಂಭಗಳು ಮತ್ತು ಭಿತ್ತಿ ಚಿತ್ರಗಳು ತೈಲ ವರ್ಣವನ್ನು ಪಡೆದು ಕಂಗೊಳಿಸುವಂತೆ ಮಾಡಿದರು.

ಕುಮಾರಸ್ವಾಮಿ ಪಂಡಿತರು ಸಾಂಪ್ರದಾಯಿಕ ಶಿಲ್ಪ ಕಲಾ ಶೈಲಿಯಲ್ಲಿ ಶ್ರೀರಾಮಪಟ್ಟಾಭಿಷೇಕ, ಕೋದಂಡರಾಮ, ಲಕ್ಷ್ಮೀ ಸರಸ್ವತೀ-ಮೊದಲಾದ ತೈಲವರ್ಣ ಚಿತ್ರಗಳನ್ನು ರಚಿಸಿದ್ದಾರೆ. ಒಮ್ಮೆ ಇವರ ಮನೆಗೆ ಆಗಮಿಸಿದ್ದ ಖ್ಯಾತ ಚಲನಚಿತ್ರ ನಿರ್ಮಾಪಕರಾದ ಜಿ. ವಿ. ಅಯ್ಯರ್ ಅವರು ಪಂಡಿತರು ಚಿತ್ರಿಸಿದ್ದ ಸಾಂಪ್ರದಾಯಿಕ ಚಿತ್ರಗಳನ್ನು ನೋಡಿ ಬಹುವಾಗಿ ಮೆಚ್ಚಿ ಅವುಗಳನ್ನು ತಾವು ತಯಾರಿಸುತ್ತಿದ್ದ 'ಹಂಸಗೀತೆ' ಚಲನಚಿತ್ರದಲ್ಲಿ ಸಮರ್ಥವಾಗಿ ಬಳಸಿಕೊಂಡರು.

ಕುಮಾರಸ್ವಾಮಿ ಪಂಡಿತರಿಗೆ ತಮಿಳುನಾಡಿನ ಮಧುರೈ ಮೀನಾಕ್ಷಿ ದೇವಾಲಯದಿಂದ 'ಆರ್ಟಿಸ್ಟ್' ವೃತ್ತಿಗಾಗಿ ಕರೆಬಂದರೂ ಹುಲ್ಲಹಳ್ಳಿಯ ಮೇಲಿನ ಅಭಿಮಾನದಿಂದ ಆ ಕರೆಯನ್ನು ತಿರಸ್ಕರಿಸಿದರು.

ಪಂಡಿತರು ಎಲೆಮರೆಯ ಹೂವಿನಂತೆ ಇದ್ದು ಪ್ರಸಿದ್ಧಿ, ಕೀರ್ತಿ ಮತ್ತು ಬಹುಮಾನಗಳಿಗೆ ಮನಗೊಡದೆ ಅಪಾರವಾದ ಕಲಾಪಾಂಡಿತ್ಯ ಸೌರಭವನ್ನು ಹೊಂದಿದ್ದರು. ಇವರ ಚಿತ್ರಕಲಾ ಪ್ರತಿಭೆಯ ಪ್ರಯೋಜನವನ್ನು ಹುಲ್ಲಹಳ್ಳಿಯ ಜನತೆ ಸಮಗ್ರವಾಗಿ ಉಪಯೋಗಿಸಿಕೊಳ್ಳಲಿಲ್ಲ ಎನ್ನಿಸುತ್ತದೆ.

ಈಗ್ಗೆ ಕೆಲವು ದಿನಗಳ ಹಿಂದೆ ತಮ್ಮ 77ನೆಯ ವಯಸ್ಸಿನಲ್ಲಿ ಕುಮಾರಸ್ವಾಮಿ ಪಂಡಿತರು ಸ್ವರ್ಗಸ್ಥರಾದರು. ಹುಲ್ಲಹಳ್ಳಿಯ ಕಲಾ ಕುಸುಮವೊಂದು ತನ್ನ ಸೌರಭವನ್ನು ಸೂಸಿ ಮರೆಯಾಯಿತು.

## ಹುಲ್ಲಹಳ್ಳಿಯ ಗಮಕಿಗಳು ಕೀರ್ತನಕಾರರು

ಹುಲ್ಲಹಳ್ಳಿಯಲ್ಲಿ ಕಲಾ ಸಂಘಗಳು ತಲೆಯೆತ್ತುವ ಮುಂಚೆ ಕಾವ್ಯ ವಾಚನ ಮತ್ತು ಹರಿಕಥಾ ಕಾರ್ಯಕ್ರಮಗಳು ಜನರ ಮನರಂಜನಾ ಮಾಧ್ಯಮವಾಗಿದ್ದುವು. ಬಸವಪುರಾಣ, ಪ್ರಭುಲಿಂಗಲೀಲೆ, ಕುಮಾರ ವ್ಯಾಸ ಭಾರತ, ಲಕ್ಷ್ಮೀಶನ ಜೈಮಿನಿ ಭಾರತ, ತೊರವೆ ರಾಮಾಯಣ ಮತ್ತು ಭಾಗವತ–ಕಾವ್ಯಗಳ ಅಂದಿನ ಕಾವ್ಯವಾಚನ ವಸ್ತುವಾಗಿದ್ದುವು. ಪ್ರಸಿದ್ಧ ಗಮಕಿಗಳಾದ ನಂಜಪ್ಪಯ್ಯ ಮತ್ತು ಶ್ರೀಕಂಠಯ್ಯನವರು ಕಾವ್ಯ ವಾಚನ ರಸದೌತಣವನ್ನು ಬಡಿಸಿ ಜನರಲ್ಲಿ ರಂಜನೆಯ ಜೊತೆಗೆ ದೈವ ಭಕ್ತಿಯನ್ನೂ ಉದ್ದೀಪನಗೊಳಿಸುತ್ತಿದ್ದರು. ಅಂದಿನ ಜನರು ಹರಿಹರರಲ್ಲಿ ಭೇದವೆಣಿಸದೆ, ಜಾತಿವೈಷಮ್ಯವಿಲ್ಲದೆ ಎಲ್ಲ ವರ್ಗದ ಜನರೂ ಒಂದೇ ಗೋಷ್ಠಿಯಲ್ಲಿ ಕಲೆತು ಕಾವ್ಯರಸವನ್ನು ಹೀರುತ್ತಿದ್ದರು. ಗಮಕ ಕಲೆಯನ್ನು ಪೋಷಿಸುತ್ತಿದ್ದರು.

ರಾಮಣ್ಣ ಎಂಬುವರು ಅಂದಿನ ಪ್ರಸಿದ್ಧ ಕೀರ್ತನಕಾರರು. ಹರಿ ಕಥಾ ಶಿವಕಥೆಗಳನ್ನು ರಾಗಲಯ ತಾಳಬದ್ಧವಾಗಿ ಅಭಿನಯಪೂರ್ವಕ ವಾಗಿ ಮಾಡುತ್ತಿದ್ದರು. ಇವರು 'ಇಕ್ಕದ ಮಾರಯ್ಯ ಕೊಡದ ಮಾರಮ್ಮ', ಮೊದಲಾದ ಅನೇಕ ಹಾಸ್ಯ ಮತ್ತು ಭಕ್ತಿರಸಭರಿತವಾದ ಕಥೆಗಳನ್ನು ಸ್ವತಃ ತಾವೇ ರಚಿಸಿ ಸುಶ್ರಾವ್ಯವಾಗಿ ಕೀರ್ತನೆ ಮಾಡುತ್ತಿದ್ದರು. ಇವರ ಕೀರ್ತನೆಯೆಂದರೆ ಒಂದು ಕಥೆಯು ರಾತ್ರಿಯಿಡೀ ನಡೆಯುತ್ತಿದ್ದಿತು. ಜನರೂ ತದೇಕ ಚಿತ್ತದಿಂದ ಆಲಿಸುತ್ತಿದ್ದರು ಎಂದ ಮೇಲೆ ಕಥೆಗಾರರ ಪಾಂಡಿತ್ಯ ಮತ್ತು ಕೇಳುಗರ ಆಸಕ್ತಿಯನ್ನು ಗಮನಿಸಬಹುದು.

ಹುಲ್ಲಹಳ್ಳಿಯ ಗಮಕಿಗಳನ್ನು ಕೀರ್ತನಕಾರರನ್ನೂ ಸುತ್ತಲ ಗ್ರಾಮ ದವರು ಮತ್ತು ದೂರದ ಪಟ್ಟಣಿಗರು ಕರೆಸಿ ಕಾವ್ಯವಾಚನವನ್ನೂ ಕೀರ್ತನೆಗಳನ್ನೂ ನಡೆಸುತ್ತಿದ್ದರು.

## 'ಗಮಕರೂಪಕದ ಪಿತಾಮಹ' ಹೆಚ್. ಎಂ. ರಾಮಾರಾಧ್ಯ

ಶ್ರೀಯುತ ಹೆಚ್. ಎಂ. ರಾಮಾರಾಧ್ಯರು ಸ್ವತಃ ರಂಗಭೂಮಿಯ ಕಲಾವಿದರು, ಹಾರ್ಮೋನಿಯಂ ವಾದಕರು, ಪ್ರಸಿದ್ಧ ಗಮಕಿಗಳು, ಶ್ರೇಷ್ಠ ಕೀರ್ತನಕಾರರು, ಉತ್ತಮ ಸಾಹಿತಿಗಳು ಹಾಗೂ ಕನ್ನಡ ಪಂಡಿತ ಅಧ್ಯಾ ಪಕರೂ ಆಗಿದ್ದರು. ಇವರ ಬಹುಮುಖ ಪ್ರತಿಭೆಯು ರಾಜ್ಯಮಟ್ಟದಲ್ಲಿ

ಇವರಿಗೆ 'ಗಮಕ ಕಲಾ ಭೂಷಣ' ಮತ್ತು 'ಗಮಕ ಕಲಾ ಚತುರ' ಎಂಬ ಬಿರುದುಗಳನ್ನು ಗಳಿಸಿಕೊಟ್ಟಿತು.

ಹೆಚ್.ಎಂ. ರಾಮಾರಾಧ್ಯರು ಹುಲ್ಲಹಳ್ಳಿಯ ಜ್ಯೋತಿಷ್ಯ ಪ್ರವೀಣ ಶ್ರೀ ಮಲ್ಲಾರಾಧ್ಯ ಹಾಗೂ ಪಾರ್ವತಮ್ಮನವರ ಹಿರಿಯ ಮಗನಾಗಿ 1907ರಲ್ಲಿ ಜನಿಸಿ, ಹುಲ್ಲಹಳ್ಳಿಯ ಅಪ್ಪರ್ ಪ್ರೈಮರಿ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿ, 1026ರಲ್ಲಿ ಪ್ರಾಥಮಿಕ ಶಾಲಾ ಅಧ್ಯಾಪಕರಾಗಿ ಸೇವೆಯನ್ನು ಪ್ರಾರಂಭಿಸಿದರು. 1942ರಲ್ಲಿ 'ಕನ್ನಡ ಪಂಡಿತ ಪರೀಕ್ಷೆ'ಯಲ್ಲಿ ಉತ್ತೀರ್ಣರಾಗಿ ಅಧ್ಯಾಪಕ ವೃತ್ತಿಯಲ್ಲಿ ಬಡ್ತಿಯನ್ನು ಹೊಂದಿ ಬೆಂಗಳೂರು ಮಲ್ಲೇಶ್ವರ ಪ್ರೌಢಶಾಲೆಯಲ್ಲಿ 'ಕನ್ನಡ ಪಂಡಿತ'ರಾಗಿ ಉತ್ತಮ ಶಿಕ್ಷಕರೆನಿಸಿ 1965ರಲ್ಲಿ ನಿವೃತ್ತರಾದರು.

ಹುಲ್ಲಹಳ್ಳಿಯ 'ದಿ ಅಸೋಸಿಯೇಟೆಡ್ ಡ್ರಮಾಟಿಕ್ ಕಂಪನಿ'ಯಲ್ಲಿ ಕಾಳಿದಾಸ, ಸದಾರಮೆ, ಗುಲೇಬ ಕಾವಲಿ ಮೊದಲಾದ ನಾಟಕಗಳಲ್ಲಿ ಕಲಾವಿದರಾಗಿಯೂ, ಮಹಾಭಾರತ ರಾಮಾಯಣ ಮೊದಲಾದ ಕಾವ್ಯಗಳ ವಾಚಕರಾಗಿಯೂ, ಪುರೂರವ, ಸುಮುಖೀವಿಜಯ, ಭಕ್ತ ನಂದನಾರ್, ಕಲ್ಯಾಣದ ಕ್ರಾಂತಿ ಮೊದಲಾದ ಕೀರ್ತನೆಗಳನ್ನು ಮಾಡಿ ಕೀರ್ತನಕಾರರಾಗಿಯೂ ದುಡಿದ ಹೆಚ್. ಎಂ. ರಾಮಾರಾಧ್ಯರು ಬೆಂಗಳೂರಿನಲ್ಲಿ ನೆಲೆಸಿದ ಮೇಲೆ ಸಾಹಿತ್ಯ ಸೇವೆಯನ್ನೂ ಮತ್ತು ಗಮಕ ಕಲೆಯಲ್ಲಿ ಅನೇಕ ಹೊಸ ಪ್ರಯೋಗಗಳನ್ನೂ ನಡೆಸಿದರು.

ಶ್ರೀಮದ್ರಾಮಾಯಣ ಕುಮಾರವ್ಯಾಸಭಾರತ ಅಲ್ಲದೆ ಹರಿಶ್ಚಂದ್ರ ಕಾವ್ಯ ಅಲ್ಲಮಪ್ರಭು ದಕ್ಷಾಧ್ವರ ಮತ್ತು ಗಿರಿಜಾ ಕಲ್ಯಾಣ ಗ್ರಂಥಗಳ ಆಧಾರದಿಂದ ಕವಿವಾಣಿಗೆ ಭಂಗ ಬರದಂತೆ 'ಗಮಕ ರೂಪಕ'ಗಳನ್ನು ರಚಿಸಿದರು. ಬೆಂಗಳೂರು ಮಲ್ಲೇಶ್ವರ ರಾಮಮಂದಿರದಲ್ಲಿ ಇವುಗಳ ವಾಚನ ಪ್ರಯೋಗವನ್ನು ನಡೆಸಿದರು. ಈ ಪ್ರಯೋಗದಲ್ಲಿ ಯಶಸ್ವಿಯಾದ ರಾಮಾರಾಧ್ಯರು 'ಗಮಕ ರೂಪಕ' ಕಲಾವಿದರ ಒಂದು ತಂಡವನ್ನು ಸೃಷ್ಟಿಸಿ ಕರ್ನಾಟಕದ ಹಲವು ಭಾಗಗಳಲ್ಲಿ ಗಮಕ ರೂಪದ ರಸದೌತಣವನ್ನು ಉಣಬಡಿಸಿದರು.

ಗಮಕ ರೂಪಕ ಒಂದು ಬಗೆಯ ಮಿಶ್ರಜಾತಿ. ಗಮಕವೂ ಹೌದು, ರೂಪಕವೂ ಹೌದು. ಗಮಕದಲ್ಲಿನ ಹಾಗೆ ಕಾವ್ಯವಾಚನ ಮಾಡುವ ಕೆಲವರು ಒಂದು ಗುಂಪು. ಅಭಿನಯ ಪಟುಗಳಾಗಿ ಎದ್ದು ಓಡಾಡದೆಯೇ

ವೇಷಧಾರಣೆಯಿಲ್ಲದೇ ಸಾದಾ ಉಡುಪಿನಿಂದ ಕುಳಿತಲ್ಲಿಯೇ ಹಾವ-ಭಾವ ಭಂಗಿಗಳ ಮೂಲಕ ಪಾತ್ರನಿರ್ವಹಣೆ ಮಾಡುವ ಕೆಲವರು ಒಂದು ಗುಂಪು. ಈ ಎರಡೂ ಗುಂಪಿನವರು ಸೇರಿ ಇದು 'ಗಮಕರೂಪಕ' ಎನಿಸುತ್ತದೆ.

ಹಳೆಯ ಕಾವ್ಯಗಳನ್ನು ನಾಟಕೀಯವಾಗಿ ಪರಿವರ್ತಿಸಿ ಕವಿಯ ಮಾತುಗಳನ್ನೇ ಗದ್ಯದ ಧಾಟಿಯಲ್ಲಿ ಹೇಳಿ, ಪದ್ಯದ ಧಾಟಿಯಲ್ಲಿ ಓದಿ, ಇದರ ಸದಸ್ಯವೃಂದವು ಕವಿ ಹೃದಯವನ್ನು ಸಾಮಾನ್ಯರಿಗೂ ಪಾಮರರಿಗೂ ಮನದಟ್ಟು ಮಾಡಿಕೊಡುತ್ತದೆ.

ರೂಪಕಗಳಲ್ಲಿ ಪಾತ್ರಗಳನ್ನು ಒಂದಕ್ಕೊಂದು ಹೊಂದಿಸಿ, ರಸಘಟ್ಟಗಳನ್ನು ವರ್ಣಿಸಿ, ಕಥೆಯ ಎಳೆ ಸರಾಗವಾಗಿ ಮುಂದೋಡುವಂತೆ ಮಾಡಲು ಒಬ್ಬ ಅಥವಾ ಹಲವರು ನಿವೇದಕರು ಇರುತ್ತಾರೆ. ಈ ನಿವೇದಕ ಒಂದು ಬಗೆಯಲ್ಲಿ ಸೂತ್ರಧಾರ, ನಿರ್ದೇಶಕ. ಬಹಿರಂಗವಾಗಿ ಪಾತ್ರಗಳ ಜೊತೆಯಲ್ಲಿ ಕುಳಿತೇ ನಿರ್ದೇಶನ ಮಾಡುವ ಪಾತ್ರ. ಈ ಪಾತ್ರದ ಪೋಷಣೆ ಬಹುಬಗೆ. ಇದು 'ಗಮಕ ರೂಪಕಕರ್ತ'ರ ಸ್ವಂತ ನಿರ್ಮಾಣ.

ಶ್ರೀ ಹೆಚ್. ಎಂ. ರಾಮಾರಾಧ್ಯರ ಸಾಹಿತ್ಯ ಕೌಶಲ ಮತ್ತು ನಾಟಕೀಯ ಸಾಮರ್ಥ್ಯ ಎರಡನ್ನೂ ಇಲ್ಲಿ ಕಾಣಬಹುದು. ನಮ್ಮ ಜನರಿಗೆ ಇದೊಂದು ಬಗೆಯ ಹೊಸ ರೀತಿಯ ಯಕ್ಷಗಾನ ಪಾತ್ರಗಳು ಸ್ವಚ್ಛಂದವಾಗಿ ಸಂಭಾಷಣೆ ಬೆಳೆಸುವ ಅವಕಾಶವಿಲ್ಲದೆ ಕಾವ್ಯದ ಚೌಕಟ್ಟಿನಲ್ಲೇ ಇರುವ ಯಕ್ಷಗಾನ, ಹಾಡು, ಕುಣಿತ, ತಾಳ, ಮೃದಂಗಗಳಿಲ್ಲದ ಯಕ್ಷಗಾನ ಬರಿಗಾನವಲ್ಲ ಇದು, ಶ್ರಾವ್ಯ-ದೃಶ್ಯ ಎರಡರ ಹಿತಮಿತ ಮಿಶ್ರಣ.

ಇಂತಹ 'ಗಮಕ ರೂಪಕ' ಎಂಬ ಹೊಸ ಬಗೆಯ ಕಾವ್ಯ ಪ್ರಕಾರವನ್ನು ಸೃಷ್ಟಿಸಿ, ಪ್ರಯೋಗಗಳನ್ನು ನಡೆಸಿ, ಈ ನಿಟ್ಟಿನಲ್ಲಿ ಹಲವಾರು ಶಿಷ್ಯ ಸಮೂಹವನ್ನು ತಯಾರುಮಾಡಿ 'ಗಮಕ ರೂಪಕದ ಪಿತಾಮಹ' ಎನಿಸಿದ್ದಾರೆ ಶ್ರೀ ಹೆಚ್. ಎಂ. ರಾಮಾರಾಧ್ಯರು.

ಇವರ ಗಮಕ ರೂಪಕಗಳನ್ನು ಬೆಂಗಳೂರಿನ ಆಕಾಶವಾಣಿಯು 'ಪ್ರಾಚೀನ ಕವಿವಾಣಿ' ಎಂಬ ಹೆಸರಿನಿಂದ ಪ್ರಸಾರಮಾಡಿ ಜನಪ್ರಿಯತೆಯನ್ನು ತಂದುಕೊಟ್ಟಿತು. ಕನ್ನಡ ಸಾಹಿತ್ಯ ಪರಿಷತ್ತು, ಗಾಂಧಿ ಸಾಹಿತ್ಯ ಪರಿಷತ್ತು ಮತ್ತು ಕನ್ನಡ ವೃತ್ತ ಪತ್ರಿಕೆಗಳು ಇವರ ಸೇವೆಯನ್ನು ಶ್ಲಾಘಿಸಿವೆ.

ಶ್ರೀ ಹೆಚ್. ಎಂ. ರಾಮಾರಾಧ್ಯರ ಮತ್ತೊಂದು ಸಾಹಸವೆಂದರೆ 'ಕನ್ನಡ ಗಾದೆಗಳ ಮಹಾ ಸಂಪುಟ'ವನ್ನು ರಚಿಸಿರುವುದು. ಕನ್ನಡ ನಾಡನ್ನು ಸುತ್ತಿ 15000ಕ್ಕೂ ಹೆಚ್ಚು ಗಾದೆಗಳನ್ನು ಸಂಗ್ರಹಿಸಿ ಅದನ್ನು ಉಚಿತ ರೀತಿಯಲ್ಲಿ ವಿಂಗಡಿಸಿರುವುದು. ಇದಕ್ಕಾಗಿ ತಮ್ಮ ಮೂವತ್ತು ವರ್ಷಗಳ ಜೀವಿತಾವಧಿಯನ್ನೇ ಸವೆದಿದ್ದಾರೆ. ಈ ಗ್ರಂಥವು ಕನ್ನಡ ಗಾದೆಗಳ ಅಧ್ಯಯನಕ್ಕೆ ಜನಪದ ಬದುಕಿನ ಬೇರುಗಳನ್ನು ಅಗೆಯಲಿಕ್ಕೆ ಮತ್ತು ಸಾಂಸ್ಕೃತಿಕ ಅಧ್ಯಯನಗಳನ್ನು ನಡೆಸಲಿಕ್ಕೆ ಹೊಸ ಆಯಾಮವನ್ನು ತೆರೆಯುತ್ತದೆ. ಈ ಮಹಾಗ್ರಂಥವನ್ನು ಎರಡು ಸಂಪುಟಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು 1982ರಲ್ಲಿ ಪ್ರಕಟಿಸಿದೆ. ಇವರ ಇತರ ಕೃತಿಗಳು 'ವೀರಭೂಮಿ' ಮತ್ತು 'ಆದರ್ಶ ಮಹಿಳಾ ರತ್ನಗಳು.'

ಕರ್ನಾಟಕ ಸರ್ಕಾರವು 'ಆದರ್ಶ ಮಹಿಳಾ ರತ್ನಗಳು' ಕೃತಿಯನ್ನು ಎಸ್.ಎಸ್.ಎಲ್.ಸಿ. ತರಗತಿಗೆ ಪಠ್ಯಪುಸ್ತಕವನ್ನಾಗಿ ಆರಿಸಿತ್ತು. 1970–71ರಲ್ಲಿ ಸಾಹಿತ್ಯ ಅಕಾಡೆಮಿಯ ಪರವಾಗಿ ರಾಜ್ಯದ ರಾಜ್ಯಪಾಲರಾಗಿದ್ದ ಶ್ರೀಧರ್ಮವೀರರು ಪ್ರಶಸ್ತಿ ಪ್ರಧಾನವನ್ನು ಮಾಡಿರುತ್ತಾರೆ.

ಬಹುಮುಖ ಪ್ರತಿಭೆಯ ಧೀಮಂತ, ಹುಲ್ಲಹಳ್ಳಿಯ ಶ್ರೀ ಹೆಚ್. ಎಂ. ರಾಮಾರಾಧ್ಯರು ಒಬ್ಬ ಪುತ್ರನನ್ನು (ಶ್ರೀ ಹೆಚ್. ಆರ್. ನಾಗೀಶ) ಬಿಟ್ಟು 1973ರಲ್ಲಿ ಕಾಲವಶರಾದರು. ಕನ್ನಡನಾಡಿಗೆ ಇವರ ಸೇವೆ ಚಿರಸ್ಮರಣೀಯ, ಹುಲ್ಲಹಳ್ಳಿಗೆ ಹೆಮ್ಮೆ.

## 'ಕೀರ್ತನ ಸುಖಿ' ಶ್ರೀ ಮನ್ನಾರು ಕೃಷ್ಣಯ್ಯ

ಚರಣ ಭಜನೆಯ ಸೌಖ್ಯ ಮೋಕ್ಷದೊಳಿರದು ಅದರಿಂದ
ಮರುಭವವ ಕರುಣಿಸುತ ಕೀರ್ತನ
ದೊರಕುವಂತೆಸಗಯ್ಯಾ ಬೇಡುವೆ
ವರದ ಕೀರ್ತನ ಸುಖವೆ ಸೌಖ್ಯವು ದೇವರಕ್ಷಿಪುದು ॥

ಎಂಬುದಾಗಿ ತಮ್ಮ ಮನದಿಷ್ಟವನ್ನು ಸ್ಪಷ್ಟ ಮಾತುಗಳಲ್ಲಿ ತಿಳಿಸಿರುವ ಹುಲ್ಲಹಳ್ಳಿಯ ಮನ್ನಾರುಕೃಷ್ಣಪ್ಪನವರು 1935ರಿಂದ ಇಂದಿನವರೆಗೂ ಸತತವಾಗಿ ಹರಿಕಥಾ ಸಂಕೀರ್ತನ ಸುಧೆಯನ್ನು ಹರಿಸುತ್ತಾ ಬಂದಿದ್ದಾರೆ. ರಾಮಾಯಣ, ಮಹಾಭಾರತ, ಭಾಗವತ ಮತ್ತು ಬೌದ್ಧ–ಜೈನ ಧರ್ಮಗ್ರಂಥಗಳನ್ನು ಆಧರಿಸಿದ ಸುಮಾರು 45 ಕಥಾ ಸಂಗ್ರಹವ

ನ್ನೊಳಗೊಂಡ ಸ್ವರಚಿತ 'ಹರಿಕೀರ್ತನ ಸುಧಾಸಾರ' ಇವರ ಪಾಂಡಿತ್ಯದ ಆಗರ.

ಇವರ ಕೀರ್ತನ ಶೈಲಿಯು ಭಾರತೀಯ ಸಂಸ್ಕೃತಿಯನ್ನು ಎತ್ತಿ ಹಿಡಿಯಬಲ್ಲ, ಪರಿಶುದ್ಧವಾದ, ಪಾಂಡಿತ್ಯಪೂರ್ಣವಾದ ನೀತಿ ಬೋಧಕ ವಾದ, ಸರಳ ಮತ್ತು ನೇರವಾದುದು ಆಗಿದೆ.

ಹನುಮಂತಯ್ಯನವರು ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಕಾಲ. ಸಂಸ್ಕೃತಿ ಪ್ರಚಾರ ಇಲಾಖೆಯಲ್ಲಿ ಕೆಲವು ಕಾಲ ದುಡಿದ ಮನ್ನಾರು ಅವರು, ಹೆಗ್ಗಡದೇವನ ಕೋಟೆ ಟಿ. ನರಸೀಪುರ, ಹುಣಸೂರು, ಚಾಮ-ರಾಜನಗರ, ಯಳಂದೂರು ಮತ್ತು ಮೇಲುಕೋಟೆ ತಾಲ್ಲೂಕುಗಳಲ್ಲಿ ಸಂಚರಿಸಿ ಕೀರ್ತನೆ, ಕಾವ್ಯವಾಚನ ಮತ್ತು ವ್ಯಾಖ್ಯಾನಗಳನ್ನು ನಡೆಸಿರು ತ್ತಾರೆ. ತಮ್ಮ ಕೀರ್ತನ ಕ್ಷೇತ್ರವನ್ನು ವಿಸ್ತರಿಸಿಕೊಂಡು ಸುಮಾರು ಐವತ್ತು ವರ್ಷಗಳ ಕಾಲ ಕೀರ್ತನಕಾರರಾಗಿ ಸೇವೆ ಸಲ್ಲಿಸಿದ್ದಾರೆ ಹಾಗೂ ಸಲ್ಲಿಸುತ್ತಿದ್ದಾರೆ. 1972ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಇವರ ಸೇವೆ ಯನ್ನು ಗುರುತಿಸಿ ಪ್ರಸಿದ್ಧ ಕೀರ್ತನಕಾರರೆಂದು ಗೌರವಿಸಿದೆ.

ಮನ್ನಾರು ಅವರು ಬಾಲ್ಯದಲ್ಲಿ ತಮ್ಮ ತಂದೆ (ಶ್ರೀಯುತ ನಂಜಪ್ಪ ನವರು)ಯವರಿಂದಲೇ ಕಾವ್ಯವಾಚನ ಮತ್ತು ದಾಸರಪದಗಳನ್ನು ಹಾಡುವ ಶಿಕ್ಷಣ ಪಡೆದರು. ಬಾಲ್ಯದ ಉಪಾಧ್ಯಾಯರಾದ ಶ್ರೀ ಗೋಪಾಲಕೃಷ್ಣಮಾ ಚಾರ್ಯರಿಂದ ಸಾಹಿತ್ಯಾಸಕ್ತಿಯನ್ನೂ ಬೆಳೆಸಿಕೊಂಡರು. ಪ್ರಸಿದ್ಧ ಕೀರ್ತನ ಕಾರರಾಗಿದ್ದ ಅಣ್ಣಪ್ಪದಾಸರು, ಕೊಡಸೋಗೆ ಆರಾಧ್ಯರು, ಕಿರುಗುಂದದ ಶ್ರೀಕಂಠಯ್ಯನವರು ಇವರ ಕೀರ್ತನ ಕೃಷಿಗೆ ಗೊಬ್ಬರವನ್ನು ಹಾಕಿದರು. ಶಾಲಾ ಮಾಸ್ತರರೂ ಸಂಸ್ಕೃತ ವಿದ್ವಾಂಸರೂ ಆಗಿದ್ದ ಶ್ರೀ ಸೂರ್ಯನಾರಾ ಯಣಪ್ಪನವರಿಂದ ಸಂಸ್ಕೃತಾಭ್ಯಾಸವನ್ನು ಪಡೆದರು. ಸತತ ಸಂಸ್ಕೃತಾ ಭ್ಯಾಸದ ಫಲವಾಗಿ 1200 ಸಂಸ್ಕೃತ ನೀತಿ ಶ್ಲೋಕಗಳನ್ನು ಕನ್ನಡಿಸಿ ಪದ್ಯರೂಪದಲ್ಲಿ ಬರೆದರು. ಹೊಸಕೆರೆ ಚಿದಂಬರಯ್ಯನವರ 'ಕೀರ್ತನ ಕಂಠಾಭರಣ'ವನ್ನು ಅಭ್ಯಸಿಸಿ ಕಂದ ಪದ್ಯಗಳೇ ಮೊದಲಾದ ಛಂದೋ ನಿಯಮಕ್ಕೆ ಒಳಪಟ್ಟ ಶ್ಲೋಕ ವೃತ್ತಗಳನ್ನು ರಚಿಸುವ ಪ್ರಯತ್ನವನ್ನು ಕೈಗೊಂಡರು. ಹುಲ್ಲಹಳ್ಳಿಯಲ್ಲಿ ನೆಲೆಸಿದ್ದ ಬಸವಾಪಟ್ಟಣದ ಶೆಟ್ಟಪ್ಪನವರ ಬಳಿ ಸಂಗೀತವನ್ನು ಅಭ್ಯಾಸ ಮಾಡಿದರು. ಈ ನಡುವೆ ಗಣೇಶೋತ್ಸವ ಮತ್ತು ರಾಮೋತ್ಸವಗಳಲ್ಲಿ ಕಾವ್ಯವಾಚನ ಮತ್ತು ಹರಿಕಥಾ ಸಂಕೀರ್ತನೆ

ನಡೆಸುವ ಪ್ರಯೋಗಾತ್ಮಕ ಅವಕಾಶಗಳು ಒದಗಿದವು.

ಪ್ರಥಮ ಬಾರಿಗೆ ಮನ್ನಾರು ಅವರೇ ರಚಿಸಿದ ಅಜಮಿಳೋಪಾಖ್ಯಾನ, ಗಿರಿಜಾ ಕಲ್ಯಾಣ, ಲಕ್ಷ್ಮೀ ಕಲ್ಯಾಣ ಮತ್ತು ಅದ್ಭುತ ರಾಮಾಯಣ (ಮೂಲ ಮುದ್ದಣ ಕವಿ) ಕಥೆಗಳನ್ನು ಕಂಠಪಾಠ ಮಾಡಿ ಹುಲ್ಲಹಳ್ಳಿ, ಕಿತ್ತೂರು, ಕೃಷ್ಣರಾಜಪುರಗಳಲ್ಲಿ ಕೀರ್ತನೆ ನಡೆಸಿ 1937 ರಲ್ಲಿ ಹೆಗ್ಗಡದೇವನಕೋಟೆಯ ಮಗ್ಗೆ ಗ್ರಾಮದಲ್ಲಿ ಗಣೇಶೋತ್ಸವದಂದು ವಿದ್ವಾಂಸರ ನಡುವೆ ಕೀರ್ತನೆಯನ್ನು ಭಾವಪೂರ್ಣವಾಗಿ ಮಾಡಿ ಕೇಳುಗರ ಮೆಚ್ಚುಗೆಯನ್ನು ಗಳಿಸಿದರು. ಈ ಸಭೆಯಲ್ಲಿ, ಹಿಂದೊಮ್ಮೆ ಮನ್ನಾರು ಅವರ ಕೀರ್ತನ ಕಾರ್ಯೋತ್ಸಾಹಕ್ಕೆ ತಣ್ಣೀರೆರಚಿದ್ದ ಪ್ರಸಿದ್ಧ ಕೀರ್ತನಕಾರರಾದ ಶ್ರೀ ವೆಂಕಟದಾಸಪ್ಪನವರೂ ಸಹ ಇವರ ಕೀರ್ತನೆಗೆ ಮಾರು ಹೋಗಿ ಪ್ರಶಂಸೆಯ ಮಳೆಗರೆದರು.

ಮನ್ನಾರು ಅವರು ಕೇವಲ ಕೀರ್ತನಕಾರರಲ್ಲದೆ ಉತ್ತಮ ಸಾಹಿತಿಗಳೂ ಮತ್ತು ಶ್ರೀರಾಮನ ಭಕ್ತರೂ ಆಗಿದ್ದಾರೆ. ದೇವರಕ್ಷಿಪುದು, ಸುದತಿಶತಕ (ಪ್ರಕಟವಾಗಿಲ್ಲ), ಪಾರ್ವತೀ ಸುಪ್ರಭಾತಗಳಲ್ಲಿ ಇವರ ಭಗವದ್ಭಕ್ತಿಯು ಹರಿದು 'ಕನ್ನಡ ಸುಲಭ ಸಂಕ್ಷೇಪ ರಾಮಾಯಣ'ದಲ್ಲಿ ನೆಲೆಗೊಂಡಿದೆ. 'ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂಬ ಕುಮಾರವ್ಯಾಸನ ಉಕ್ತಿಗೆ ಹುಲ್ಲಹಳ್ಳಿಯ ಮನ್ನಾರು ಕೃಷ್ಣಯ್ಯನವರೂ ಸೇರಿಹೋಗಿದ್ದಾರೆ.

ಪತಿತರನ್ನು ಪಾವನಗೊಳಿಸುವ ಪರಬ್ರಹ್ಮ ಪರಾತ್ಪರನಾದ ಶ್ರೀರಾಮನ ಕಥೆಯನ್ನು ಬರೆದ ಎಲ್ಲ ಕವಿಗಳ ಜೀವನ ಚಿತ್ರವೂ ಹಲವು ವೈಶಿಷ್ಟ್ಯಗಳಿಂದ ಕೂಡಿರುವಂತೆ ಮನ್ನಾರು ಅವರ ಜೀವನವೂ ರಾಮಭಕ್ತಿ ನೆಲೆಗೊಳ್ಳುವಂಥ ಅನೇಕ ಘಟನೆಗಳನ್ನು ಹೊಂದಿದೆ.

ಬಾಲ್ಯದಲ್ಲಿ ಮನ್ನಾರು ಅವರು ಒಮ್ಮೆ ತಮ್ಮ ಹೊಲದಲ್ಲಿದ್ದ ಹುಣಸೆಮರವನ್ನು ಹತ್ತಿ, ಹಣ್ಣು ಕೀಳಲು ಮರದ ರೆಂಬೆಯ ತುದಿಯ ವರೆಗೂ ಬರಲು, ಅಲ್ಲಿಂದ ಜಾರಿ ಜೋಳದ ಕೂಳೆ ಇದ್ದ ಭೂಮಿಯ ಮೇಲೆ ಬಿದ್ದರು. ಆದರೂ ಅವರ ಶರೀರಕ್ಕೆ ಒಂದು ಕೂಳೆಯೂ ತಾಗಲಿಲ್ಲ. ಕಾರಣ ಅವರ ಮನದಲ್ಲಿ ನಡೆಯುತ್ತಿದ್ದ ರಾಮಧ್ಯಾನ.

ಕಪಿಲಾ ನದಿಯ ತುಂಬು ಪ್ರವಾಹದ ಕಾಲ. ತಮ್ಮ ತಂಗಿಯ ಮಗುವಿನ ನಾಮಕರಣಕ್ಕೆ ನದಿಯನ್ನು ದಾಟಿಕೊಂಡು ಆಚೆದಡದ ಹಳ್ಳಿಗೆ

ಹೋಗಬೇಕಾಗಿತ್ತು. ಅಂದು ನದಿ ದಾಟಲು ತೆಪ್ಪವೇ ಸಾಧನ. ತೆಪ್ಪದಲ್ಲಿ ಇವರ ತಂದೆ, ಭಾವ, ಅತ್ತೆ ಮೂವಂದಿರೂ ಕುಳಿತಿದ್ದರು. ಮನ್ನಾರು ಅವರೇ ಜಲ್ಲೆ ಹಿಡಿದು ಅದನ್ನು ನೀರಿನಲ್ಲಿ ಇಳಿಬಿಟ್ಟು ನೆಲಕ್ಕೆ ಒತ್ತಿ ತೆಪ್ಪ ವನ್ನು ಸಾಗಿಸುತ್ತಿದ್ದರು. ಮುಂದೆ ಮುಂದೆ ಹೋಗುತ್ತಾ ಇರಲು ಜಲ್ಲೆಯು ನೀರಿನ ಆಳದಿಂದಾಗಿ ನೆಲವನ್ನು ತಾಗಲಿಲ್ಲ. ಎರಡು ಮೂರು ಬಾರಿ ತಮ್ಮ ಶರೀರವನ್ನು ಬಗ್ಗಿಸಿ ಜಲ್ಲೆಯನ್ನು ನೀರಿನೊಳಗೆ ಇಳಿಯ ಬಿಟ್ಟರು. ನೀರಿನ ಪ್ರವಾಹದ ರಭಸವು ಇವರನ್ನು ಜಲ್ಲೆ ಸಮೇತ ನೀರಿನಲ್ಲಿ ಮುಳುಗಿಸಿತು. ತೆಪ್ಪದಲ್ಲಿದ್ದವರೆಲ್ಲಾ ಭಯದಿಂದ ಹಾಹಾಕಾರಿದರು. ಮನ್ನಾರುವನ್ನು ಕಾಣದಾದರು. ತೆಪ್ಪವು ಪ್ರವಾಹದೊಡನೆ ವೇಗವಾಗಿ ಸಾಗುತ್ತಿತ್ತು. ಮನ್ನಾರುವೂ ಸಹಾ ತೆಪ್ಪದ ತಳದಲ್ಲೇ ನೀರಿನೊಳಗೇ ಉರುಳಿಕೊಂಡೇ ಹೋಗುತ್ತಿದ್ದಾರೆ. ರಾಮನ ದಯೆ, ಕಾಲಿಗೆ ಸಿಕ್ಕಿದ ನೆಲವನ್ನು ಒತ್ತಿ ಮೇಲಕ್ಕೆ ಚಿಮ್ಮಿದರು. ಕೂಡಲೆ, ಸಾಗುತ್ತಿರುವ ತೆಪ್ಪದ ಯಾವ ಭಾಗದಲ್ಲಿ ಮುಳುಗಿದ್ದರೋ ಅದೇ ಭಾಗದಲ್ಲಿ ತೆಪ್ಪದ ದಟ್ಟೆಯನ್ನು ಹಿಡಿದು ಮನ್ನಾರು ಕಾಣಿಸಿಕೊಂಡರು. ತೆಪ್ಪದಲ್ಲಿದ್ದವರು ಇವರನ್ನು ಮೇಲಕ್ಕೆ ಎಳೆದುಕೊಂಡರು. ಬದುಕಿದುದು ರಾಮನಿಂದಲೇ ಎಂಬುದು ಇವರ ಅಚಲ ನಂಬಿಕೆ. ಅಂದಿನಿಂದ ಹುಲ್ಲಹಳ್ಳಿಯಲ್ಲಿ ಪ್ರತಿವರ್ಷ ರಾಮೋತ್ಸವವನ್ನು ನಡೆಸಿಕೊಂಡು ಬರತೊಡಗಿದರು.

1968ರ ಒಂದು ದಿನ. ಆಂಧ್ರದ ಪೋರ್ರ್ಮಾಮಿಳಂನಲ್ಲಿನ ಮಗಳ ಮನೆಗೆ ಹೋಗಿ ಹಿಂದಿರುಗುವ ಮಾರ್ಗದಲ್ಲಿ ಚಿಂತಾಮಣಿ ಎಂಬಲ್ಲಿ ಸಾಯಂಕಾಲ ಮನ್ನಾರು ಅವರು ಪ್ರಯಾಣ ಮಾಡುತ್ತಿದ್ದ ಬಸ್ಸು ಕೆಟ್ಟು ನಿಂತಿತು. ಅನಿವಾರ್ಯವಾಗಿ ಅಂದು ಅಲ್ಲಿಯೇ ಉಳಿಯಬೇಕಾಯಿತು. ಛಳಿ ಗಾಲ. ಸಾಲದುದಕ್ಕೆ ಆ ಊರಿನಲ್ಲಿ ಪ್ಲೇಗ್ ಹರಡಿ ಅನೇಕ ಮನೆಯವರು ಸ್ಥಳ ಬಿಟ್ಟು ಬೇರೆಡೆಗೆ ಹೋಗಿದ್ದರು. ಇಲಿಗಳು ಸತ್ತ ದುರ್ವಾಸನೆ ಎಲ್ಲೆ ಡೆಯೂ ಉಂಟಾಗಿತ್ತು. ಮಲಗಿಕೊಳ್ಳಲು ಸೂಕ್ತ ಸ್ಥಳ ಯಾವುದೆಂದು ಮನದಲ್ಲೇ ಶ್ರೀರಾಮನನ್ನು ನೆನೆಯುತ್ತಾ ಬರುತ್ತಿರಲು ರಾಮದೇವರ ಭವ್ಯವಾದ ದೇವಾಲಯವೇ ಕಂಡುಬಂದಿತು. ಮನ್ನಾರುವು ಶ್ರೀರಾಮನ ದರ್ಶನ ಪಡೆದರು. ಅಲ್ಲಿಯೇ ಜಗಲಿಯ ಮೇಲೆ ಮಲಗಲು ಯತ್ನಿಸಿದಾಗ ಅಲ್ಲಿಯ ಅರ್ಚಕರು ಬಂದು, 'ಇಲ್ಲಿ ಮಲಗಲು ಯಾರಿಗೂ ಸ್ಥಳ ಕೊಡು ವುದಿಲ್ಲ'ವೆಂದು ರೇಗಿದರು. ಮನ್ನಾರು ಅವರಿಗೆ ರಾಮನ ಸಾನ್ನಿಧ್ಯವನ್ನು

ಬಿಡಲು ಮನಸ್ಸು ಬಾರದೆ ಕಣ್ಣಿನಲ್ಲಿ ನೀರು ತಂದುಕೊಂಡರು. ಗರ್ಭಗುಡಿಯಲ್ಲಿ ನಂದಾದೀಪದ ಮಂದ ಬೆಳಕಿನಲ್ಲಿ ಕಂಗೊಳಿಸುತ್ತಿದ್ದ ಶ್ರೀರಾಮನ ಬಳಿಗೆ ಬಂದು 'ಕಲ್ಯಾಣಾನಾಂ ನಿಧಾನಂ' ಎಂಬ ಸ್ತೋತ್ರವನ್ನು ಒಮ್ಮೆ ಕಲ್ಯಾಣಿರಾಗದಲ್ಲಿ ಹಾಡಿದರು. ಅರ್ಚಕರಿಗೆ ಇವರ ಮನದ ಸ್ಥಿತಿ ಅರ್ಥವಾಯಿತು. ಅರ್ಚಕರು, 'ಈ ದೇವಾಲಯ ವೈಶ್ಯರದು. ದೇವರ ಮೈಮೇಲೆ ಬೆಲೆಬಾಳುವ ಆಭರಣಗಳಿವೆ. ಅದರ ರಕ್ಷಣೆಗಾಗಿ ನಾವಲ್ಲದೆ ಬೇರೆ ಯಾರನ್ನೂ ಮಲಗಿಸುವುದಿಲ್ಲ. ಆದ್ದರಿಂದ ನಾನು ನಿಮ್ಮನ್ನು ರೇಗಿಕೊಂಡೆ. ನಿಮ್ಮ ಮನಸ್ಸಿಗೆ ನೋವಾಗಿರಬಹುದು. ದಯವಿಟ್ಟು ಕ್ಷಮಿಸಿ ಈ ರಾತ್ರಿ ಇಲ್ಲಿಯೇ ಮಲಗಿದ್ದು ಬೆಳಗ್ಗೆ ನಿಮ್ಮ ಪ್ರಯಾಣವನ್ನು ಮುಂದುವರಿಸಿ' ಎಂದು ಹೇಳಿ, ಮನ್ನಾರುವಿಗೆ ರಾತ್ರಿಯ ಉಪಹಾರವನ್ನು ಕೊಟ್ಟು ಮಲಗಲು ತಮ್ಮ ಮನೆಯಿಂದ ಹಾಸಿಗೆಯನ್ನು ತರಿಸಿಕೊಟ್ಟರು. ಅರ್ಚಕರು ಹಾಗೂ ಅವರ ತಂದೆ, ಮನ್ನಾರು ಅವರ ವಿಷಯವನ್ನೆಲ್ಲಾ ತಿಳಿದು, ಇವರಿಂದ 'ಅದ್ಭುತ ರಾಮಾಯಣದ ಸುಂದರ ಕತೆಯನ್ನು ಕೇಳಿ ಆನಂದಿಸಿದರು. ರಾತ್ರಿ ಘಂಟೆ ಹನ್ನೆರಡಾದರೂ ಸಮಯದ ಅರಿವೇ ಇರಲಿಲ್ಲ. ಮಾರನೆಯ ಬೆಳಗ್ಗೆ ಶ್ರೀರಾಮನ ದರ್ಶನವನ್ನು ಪಡೆದು, ಅವನ ಮಹಿಮೆಯನ್ನು ನೆನೆಯುತ್ತಾ ಮನ್ನಾರುವು ಪ್ರಯಾಣವನ್ನು ಬೆಳೆಸಿದರು. ಅಂದೇ ಶ್ರೀಮದ್ರಾಮಾಯಣವನ್ನು ಬರೆಯಬೇಕೆಂದು ಸಂಕಲ್ಪಿಸಿ, 'ಕನ್ನಡ ಸುಲಭ ಸಂಕ್ಷೇಪ ರಾಮಾಯಣ'ದ ರಚನೆಗೆ ತೊಡಗಿದರು.

ಭಾಮಿನೀ ಷಟ್ಪದಿಯಲ್ಲಿ, ಹುಲ್ಲಹಳ್ಳಿಯ ಶ್ರೀವರದರಾಜಸ್ವಾಮಿಯ ಅಂಕಿತದಲ್ಲಿ 1536 ಪದ್ಯಗಳಲ್ಲಿ ಕೃತಿ ರಚನೆ ಮಾಡಿದರು. ದಕ್ಷಿಣಾಮ್ನಾಯ ಶೃಂಗೇರಿ ಶ್ರೀ ಶಾರದಾ ಪೀಠ ಶ್ರೀ ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನ ಶ್ರೀ ಶ್ರೀ ಶ್ರೀಗಳವರ ಕೃಪಾಶೀರ್ವಾದವನ್ನು ಪಡೆದು ಸೆಪ್ಟಂಬರ್ 1986ನೇ ಶುಭದಿನದಂದು ಶ್ರೀ ಮನ್ನಾರು ಕೃಷ್ಣಯ್ಯ ವಿರಚಿತ 'ಕನ್ನಡ ಸುಲಭ ಸಂಕ್ಷೇಪ ರಾಮಾಯಣ (ತೃಣಪುರಿ ರಾಮಾಯಣ)' ಕೃತಿಯು ಬಿಡುಗಡೆಯಾಯಿತು.

ಎಂಭತ್ತೆರಡು ವಸಂತಗಳನ್ನು ಕಂಡಿರುವ ಶ್ರೀ ಮನ್ನಾರು ಅವರು ಈಗ್ಗೆ ಇಪ್ಪತ್ತು ವರ್ಷಗಳಿಂದಲೂ ಶ್ರೀ ವರದರಾಜ ದೇವಾಲಯದಲ್ಲಿ ಪ್ರತಿ ಶನಿವಾರ ಸಂಜೆ ರಾಮಾಯಣ, ಮಹಾಭಾರತ ಮತ್ತು ಭಾಗವತಗಳನ್ನು ಭಗವಂತನ ಸನ್ನಿಧಿಯಲ್ಲಿ ಕಾವ್ಯವಾಚನ ಸೇವೆಯನ್ನು ಸಲ್ಲಿಸು

ತ್ತಿದ್ದಾರೆ. ಇವರ ಕಾವ್ಯವಾಚನಕ್ಕೆ ನಿವೃತ್ತ ಕನ್ನಡ ಪಂಡಿತರಾದ ಶ್ರೀ ನರಸಿಂಹಶಾಸ್ತ್ರಿಗಳು ವ್ಯಾಖ್ಯಾನವನ್ನು ನೀಡುತ್ತಿದ್ದಾರೆ.

ಶ್ರೀ ಮನ್ನಾರು ಕೃಷ್ಣಯ್ಯನವರ ಸಾಹಿತ್ಯ ಮತ್ತು ಸಾಂಸ್ಕೃತಿಕ ಸೇವೆಯನ್ನು ಗಮನಿಸಿದ ಕರ್ನಾಟಕ ಸಂಸ್ಕೃತಿ ಇಲಾಖೆಯು ಒಂದು ನೂರು ರೂ.ಗಳ ಮಾಸಿಕ ಗೌರವ ಧನವನ್ನು ನೀಡುತ್ತಿದೆ.

## ಕೀರ್ತನಕಾರ ಹಾಗೂ ರಂಗನಿರ್ದೇಶಕ
## ಶ್ರೀ ಹೆಚ್. ಎಂ. ಮಲ್ಲಾರಾಧ್ಯ

ಹುಲ್ಲಹಳ್ಳಿಯ ನಾಟಕದ ಕಂಪನಿಯಲ್ಲಿ ಹಾರ್ಮೋನಿಯಂ ಮಾಸ್ಟರ್ ಆಗಿದ್ದು, ಕಂಪನಿ ಮರೆಯಾದ ನಂತರ ನಾಟಕದ ಕಲೆಯನ್ನು ಉಳಿಸಿ ಬೆಳೆಸಲು ಕಂಕಣ ತೊಟ್ಟವರು ಶ್ರೀ ಹೆಚ್. ಎಂ. ಮಲ್ಲಾರಾಧ್ಯರು.

ಹುಲ್ಲಹಳ್ಳಿಯ ಯುವಕರನ್ನು ಸಂಘಟಿಸಿ 'ಬಸವೇಶ್ವರ ಕಲಾ ಸಂಘದ'ದ ಮೂಲಕ ನಾಟಕಗಳನ್ನು ಕಲಿಸಿ ಪ್ರದರ್ಶಿಸುತ್ತಿದ್ದರು. ಹುಲ್ಲ ಹಳ್ಳಿಯ ಸುತ್ತಲ ಗ್ರಾಮಗಳಲ್ಲೂ ಬೇಸಿಗೆ ಕಾಲದಲ್ಲಿ ಜನರನ್ನು ಕಲೆಹಾಕಿ ಪೌರಾಣಿಕ ನಾಟಕಗಳನ್ನು (ಕುರುಕ್ಷೇತ್ರ, ಕೃಷ್ಣಸಂಧಾನ, ರಾಮಾಯಣ ಮೊದಲಾದುವು) ನಿರ್ದೇಶಿಸಿ, ಬಯಲಾಟವನ್ನು ಆಡಿಸಿ 'ನಾಟಕದ ಮೇಷ್ಟ್ರು' ಎಂದು ಜನರಿಂದ ಗೌರವವನ್ನು ಗಳಿಸಿದ್ದಾರೆ.

ಶ್ರೀಯುತರು ವಿದ್ಯಾ ಇಲಾಖೆಯಲ್ಲಿ 30 ವರ್ಷಗಳ ಕಾಲ ಪ್ರಾಥ ಮಿಕ ಶಾಲಾ ಅಧ್ಯಾಪಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಈ ಕಾಲದಲ್ಲಿ ಉಪಾಧ್ಯಾಯರ ಸಂಘದ ಆಶ್ರಯದಲ್ಲಿ, ತಮ್ಮ ನಿರ್ದೇಶನದಲ್ಲಿ ಉಪಾಧ್ಯಾ ಯರುಗಳಿಂದಲೇ ಅನೇಕ ನಾಟಕಗಳನ್ನು ಪ್ರದರ್ಶಿಸಿದ್ದಾರೆ.

'ಗಮಕ ಕಲಾ ಚತುರ' ಹೆಚ್. ಎಂ. ರಾಮಾರಾಧ್ಯರು ಇವರ ಅಣ್ಣಂದಿರು. 'ಕಲಾತಪಸ್ವಿ' ಹೆಚ್. ಎಂ. ಸಿದ್ಧಲಿಂಗಾರಾಧ್ಯರು ಇವರ ತಮ್ಮಂದಿರು. ಇಂತಹವರ ಮನೆತನ ಮತ್ತು ಪರಿಸರದ ಪ್ರಭಾವದಿಂದಾಗಿ ಉತ್ತಮ ಕೀರ್ತನಕಾರರೂ ಮತ್ತು ಗಮಕಿಗಳೂ ಆಗಿದ್ದಾರೆ. ರಾಮಾ ಯಣ, ಮಹಾಭಾರತ ಮತ್ತು ಶಿವಶರಣರ ಚರಿತ್ರೆಗಳನ್ನು ಆಧರಿಸಿದ ಕಥೆ ಗಳ ಕೀರ್ತನೆಗಳನ್ನು ಸುಶ್ರಾವ್ಯವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಶ್ರೀ ಹೆಚ್. ಎಂ. ಮಲ್ಲಾರಾಧ್ಯರು ಗ್ರಾಮದಲ್ಲಿ ನಡೆಯುವ ಸಭೆ ಸಮಾರಂಭಗಳಲ್ಲಿ ಆಗಮಿಸುವ ಮುಖ್ಯ ಅತಿಥಿಗಳ ಗೌರವಾರ್ಥವಾಗಿ

ಸ್ವಾಗತ ಪದ್ಯವನ್ನು ಭಾಮಿನೀ ಷಟ್ಪದಿಯಲ್ಲಿ (ಆಶುಕವಿತೆಯೋಪಾದಿಯಲ್ಲಿ) ಬರೆದುಕೊಡುವುದರಲ್ಲಿ ಸಿದ್ಧಹಸ್ತರು. ಅನೇಕ ವೇಳೆ ಅಂತಹ ಸಂದರ್ಭದಲ್ಲಿ ತಾವೇ ಬರೆದು ಸುಶ್ರಾವ್ಯವಾಗಿ ವಾಚನವನ್ನೂ ಮಾಡಬಲ್ಲವರು. ಇವರ ಕಲೆ ಮತ್ತು ಸಂಸ್ಕೃತಿಯ ಸೇವೆಗಾಗಿ ಕನ್ನಡ ಸಾಹಿತ್ಯ ಪರಿಷತ್ತು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಕೀರ್ತನಕಾರರ ಸಮ್ಮೇಳನದಲ್ಲಿಯೂ, ಗಮಕ ಸಮ್ಮೇಳನದಲ್ಲೂ ಪ್ರಶಸ್ತಿ ಮತ್ತು ಅಭಿನಂದನಾ ಪತ್ರಗಳನ್ನು ನೀಡಿ ಗೌರವಿಸಿದೆ.

## ಪುರಾಣವಾಚಕ ಸಂಗಪ್ಪ

ಪುರಾಣ ಪ್ರಿಯರ ಮನೆಗಳಲ್ಲಿ, ಬಸವ ಜಯಂತಿಯೇ ಮೊದಲಾದ ಸಂದರ್ಭಗಳಲ್ಲಿ ಭೀಮ ಕವಿಯ 'ಬಸವ ಪುರಾಣ'ದ ವಾಚನ ಮತ್ತು ವ್ಯಾಖ್ಯಾನವನ್ನು ಮಾಡಿ ಜನರನ್ನು ಸಂತೋಷಗೊಳಿಸುತ್ತಿರುವ ಸಂಗಪ್ಪನವರು ರೈತ ಕುಟುಂಬದಲ್ಲಿ ಜನಿಸಿ ತಮ್ಮ ತಾತನವರಾದ ಮಹಂತಪ್ಪನವರ ಧಾರ್ಮಿಕ ಗುಣಗಳನ್ನು ಮೈಗೂಡಿಸಿಕೊಂಡವರು.

ಮಹಂತಪ್ಪನವರು ಪ್ರತಿನಿತ್ಯ ತಮ್ಮ ಮನೆಯ ಪಡಸಾಲೆಯಲ್ಲಿ ಪುರಾಣಿಕರನ್ನು ಕೂರಿಸಿಕೊಂಡು ಅವರಿಂದ ಪುರಾಣ ಪಠಣವನ್ನು ಕೇಳಿ ಆನಂದಿಸುತ್ತಿದ್ದರು. ಕಪಿಲಾನದಿಯಲ್ಲಿ ಮರಳಿನಲ್ಲಿ ಮುಚ್ಚಿಹೋಗಿದ್ದ ಗೌರಿಕಟ್ಟೆಯ ಹಂತಗಳನ್ನು ನೇಗಿಲಿನಿಂದ ಬಿಡಿಸಿ ಊರ ಜನರಿಗೆ ಅನುಕೂಲವನ್ನು ಮಾಡಿದ್ದರು ಸಂಗಮ ಕ್ಷೇತ್ರದ ಅಭಿವೃದ್ಧಿ ಕಾರ್ಯದಲ್ಲಿ ಭಾಗವಹಿಸಿದ್ದರು. ಒಂದು ನೂರು ವರ್ಷಗಳ ಸಾರ್ಥಕ ಜೀವನವನ್ನು ನಡೆಸಿದ ಈ ಮಹಂತಪ್ಪನವರ ಮಗಳ ಮಗನಾಗಿ ಸಂಗಪ್ಪನವರು ಜನಿಸಿದರು. ಸಂಗಪ್ಪನವರ ತಂದೆ ರಾಮಪ್ಪನೆಂಬ ರೈತರು.

ಹುಲ್ಲಹಳ್ಳಿಯಲ್ಲಿ ಪುರಾಣ ಪಠಣ ಮಾಡುತ್ತಿದ್ದ ಸೂರಳ್ಳಿ ಬಸವಣ್ಣ ಎಂಬುವರ ಬಳಿ ಗಮಕ ಶಿಕ್ಷಣವನ್ನು ಕಲಿತ ಸಂಗಪ್ಪನವರು ತಮ್ಮ ರೈತ ಜೀವನದಲ್ಲಿ ಗಮಕ ಕಲೆಯನ್ನು ಹಾಸು ಹೊಕ್ಕಾಗಿ ಉಳಿಸಿ ಬೆಳೆಸಿಕೊಂಡು ಬರುತ್ತಿದ್ದಾರೆ. 57 ವರ್ಷಗಳ ಸಂಗಪ್ಪನವರು ಶುಭಾಶುಭ ಸಂದರ್ಭಗಳಲ್ಲಿ, ಜನರು ಕರೆದಾಗ ನಕಾರವಿಲ್ಲದೆ ಶ್ರದ್ಧೆಯಿಂದ ಬಸವ ಪುರಾಣವನ್ನು ಓದಿ ವ್ಯಾಖ್ಯಾನಿಸಿ ಪುರಾಣ ಪ್ರಿಯತೆಯನ್ನು ಎಲ್ಲರಲ್ಲೂ ಉಂಟುಮಾಡುತ್ತಿರುವುದು ಶ್ಲಾಘನೀಯ.

## ಕೊಳಲು ಮುನಿಸ್ವಾಮಿ

ಹಲವು ಸಂಗೀತ. ಹರಿಕಥೆ, ಮದುವೆ ಸಮಾರಂಭಗಳಲ್ಲಿ ಒಬ್ಬ ಕಲಾವಿದನಾಗಿ ಭಾಗವಹಿಸಿ ಹೆಸರನ್ನು ಗಳಿಸಿಕೊಂಡಿರುವ ಹುಲ್ಲಹಳ್ಳಿಯ 'ನಯನಜ ಕ್ಷತ್ರಿಯ' ಪಂಗಡದ ಮುನಿಸ್ವಾಮಿ ಎಂಬುವರು ಜನಿಸಿದ್ದು ಮದ್ರಾಸಿನ ಪಯವಣ್ಣಾರ್ ಪೇಟೆಯಲ್ಲಿ. ತಂದೆ ನಾರಾಯಣ ಪಂಡಿತರ್, ತಾಯಿ ಮುನಿಯಮ್ಮ. ಪೊಟ್ಟ ಪಂಡಿತರ್ ಎಂಬುವರು ಮುನಿಸ್ವಾಮಿ ಯವರ ಮೊದಲ ಸಂಗೀತದ ಗುರು. ಚಿತ್ತೂರು (ಆಂಧ್ರ) ಅರಕ್ಕೋಣಂ (ಮದ್ರಾಸ್)ನಲ್ಲಿ ನೆಲೆಸಿದ್ದಾಗ ಇವರ ಸಂಗೀತದ ಸಾಧನೆ ಮುಂದುವರಿ ಯಿತು. ಕಣ್ಣನ್ ಪಂಡಿತರ್ (ದೊಡ್ಡಪ್ಪನ ಮಗ) ಮುನಿಸ್ವಾಮಿಯ ಡೋಲು ವಾದನದ ಪ್ರೇರಣೆಗೆ ಕಾರಣರಾದರು. ಮುನಿಸ್ವಾಮಿ, ತಮ್ಮ ಸ್ವಂತ ಸಾಧನೆಯಿಂದ ಡೋಲು, ಮೊಹರಿ ಮತ್ತು ಕೊಳಲು ವಾದಗಳಲ್ಲಿ ನಿಷ್ಣಾತರಾದರು. ತಮ್ಮ 23ನೇ ವಯಸ್ಸಿನಲ್ಲಿ ಮೈಸೂರಿಗೆ ಆಗಮನ. ಆಗ ಸುಪ್ರಸಿದ್ಧ ಕ್ಲಾರೋನೆಟ್ ಹೆಜ್ಜೂರಪ್ಪನವರ 'ಸಾಯಿಬಾಬ ಆರ್ಕೆಸ್ಟ್ರಾ'ದಲ್ಲಿ ಕಲಾವಿದನಾಗಿ ಸೇರಿದರು. ಮೈಸೂರು ಹಾಸನ ಜಿಲ್ಲೆಗಳಲ್ಲಿ ಆರ್ಕೆಸ್ಟ್ರದೊಡನೆ ಇವರ ಪ್ರವಾಸ. 40 ವರ್ಷಗಳ ಹಿಂದೆ ಹುಲ್ಲಹಳ್ಳಿಗೆ ಆಗಮನ. ಹುಲ್ಲಹಳ್ಳಿಯ ನಾಟಕ ಕಂಪನಿಯಲ್ಲಿ ಕೊಳಲುವಾದಕನಾಗಿ ಸೇರ್ಪಡೆ. ರಂಗಕಲಾವಿದ ಕೊಟ್ಟೂರಪ್ಪನವರಿಂದ ಮುನಿಸ್ವಾಮಿಯವರ ಪ್ರಶಂಸೆ. ಮುಂದಿನ ದಿನಗಳಲ್ಲಿ ಹೆಚ್. ಎಂ. ಮಲ್ಲಾರಾಧ್ಯರು ಮತ್ತು ಮನ್ನಾರು ಕೃಷ್ಣಪ್ಪನವರು ನಡೆಸುವ ಹರಿಕಥೆಗಳಲ್ಲಿ ಮುನಿಸ್ವಾಮಿಯವರ ಕೊಳಲು ವಾದನವೂ ಸೇರ್ಪಡೆಯಾಗುತ್ತಿತ್ತು. ಹುಲ್ಲಹಳ್ಳಿಯ ಪ್ರಸಿದ್ಧ ದೇವಾಲಯಗಳಲ್ಲಿ, ವಿಶೇಷ ದಿನಗಳಲ್ಲಿ ದೇವರ ಪೂಜಾ ಸೇವಾರ್ಥದಾರರ ಸಮ್ಮುಖದಲ್ಲಿ ಮುನಿಸ್ವಾಮಿಯವರು ಕೊಳಲು ನುಡಿಸಿರುವುದೂ ಉಂಟು. ಹೀಗೆ ಮುನಿಸ್ವಾಮಿಯವರ ಅಳಿಲು ಕಲಾ ಸೇವೆಯಿಂದಾಗಿ ಮೈಸೂರಿನಲ್ಲಿ 'ಡೋಲು ಮುನಿಸ್ವಾಮಿ' ಎಂದೂ, ಹುಲ್ಲಹಳ್ಳಿಯಲ್ಲಿ 'ಕೊಳಲು ಮುನಿ ಸ್ವಾಮಿ' ಎಂದೂ ಪ್ರಸಿದ್ಧರಾಗಿದ್ದಾರೆ.



ಶ್ರೀ. ಕಪಿಲ ಮಲ್ಲಿಕಾರ್ಜುನ ದೇವಾಲಯದ ಮಂಟಪದ
ಜಗಲಿಯ ಮೇಲೆ ಪ್ರತಿಷ್ಠಾಪಿಸಿರುವ ನವಗ್ರಹಮಂಟಪ



ಸಾರ್ವಜನಿಕ ಆಸ್ಪತ್ರೆ
ಕಟ್ಟಡದ ದಾನಿ
ಶ್ರೀಮತಿ ಶಿವಮ್ಮನವರು



ನವಗ್ರಹ ಪ್ರತಿಷ್ಠಾಪನೆ
ಮಾಡಿಸಿದ
ಶ್ರೀಮತಿ ಸುಬ್ಬಮ್ಮನವರು





ಪಶುವೈದ್ಯ ಶಾಲ ಕಟ್ಟಡದ ದಾನಿ
ಶ್ರೀ ಬಿ. ಎನ್. ಸುಬ್ಬಣ್ಣ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ಶಂಕರಮ್ಮ





ಹೆರಿಗೆ ಆಸ್ಪತ್ರೆ ಕಟ್ಟಡದ ದಾನಿ
ಶ್ರೀ ಬಿ. ಕೆ. ರಾಜಶೇಖರಯ್ಯ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ಸರ್ವಮಂಗಳಮ್ಮ



ಧರ್ಮ ರತ್ನಾಕರ ಕೆ. ಸಂದೀಬಸಪ್ಪನವರ
ಮಕ್ಕಳು ಧರ್ಮಕಾರ್ಯಧುರೀಣ
ಬಿ. ಚಂದ್ರಶೇಖರಪ್ಪನವರು



ಧರ್ಮರತ್ನಾಕರ
ಕೆ. ನಂದೀಬಸಪ್ಪನವರು



ಧರ್ಮ ರತ್ನಾಕರ
ಕೆ. ನಂದೀಬಸಪ್ಪನವರ
ಕುಟುಂಬ
ಶ್ರೀಮತಿ ಶಿವಮ್ಮನವರು

# 5. ಹುಲ್ಲಹಳ್ಳಿಯ ಅಭಿವೃದ್ಧಿಯಲ್ಲಿ ಸಹಕರಿಸಿದ ದಾನ ಶ್ರೇಷ್ಠರು

ಹುಲ್ಲಹಳ್ಳಿಯ ಅಭಿವೃದ್ಧಿಗಾಗಿ ದುಡಿದು ರಾಜ್ಯ ಮಟ್ಟದಲ್ಲಿ ಈ ಗ್ರಾಮವನ್ನು ಗುರುತಿಸುವಂತಾಗಲು ಮುಖ್ಯ ಕಾರಣರಾದ ಕೆಲವು ಮಹ ದಾನಿಗಳನ್ನು ಪರಿಚಯಿಸುವುದು ಇಲ್ಲಿನ ಉದ್ದೇಶ, ಹಾಗೂ ನಿಸ್ವಾರ್ಥ ಮನೋಭಾವದಿಂದ ಗ್ರಾಮಕ್ಕಾಗಿ ತನುಮನ ಧನಗಳನ್ನು ಅರ್ಪಿಸಿದ ಈ ನವನಾಗರಿಕರಿಗೆ ಇದೊಂದು ನಲ್ಮೆಯ ನುಡಿಕಾಣಿಕೆ.

## 1. 'ಮಾರ್ಗದರ್ಶಕಿ' ಶ್ರೀಮತಿ ಶಿವಮ್ಮ

ಕ್ರಿ.ಶ. 1895. ಹುಲ್ಲಹಳ್ಳಿಯಲ್ಲಿ ಮರಿಯಪ್ಪ ಮತ್ತು ನಾಗಮ್ಮ ದಂಪತಿಗಳ ಉದರದಲ್ಲಿ ಒಂದು ಕನ್ಯಾರತ್ನದ ಜನನವಾಯಿತು. ತಂದೆ ತಾಯಿಯರು ಆ ಮಗುವಿಗೆ ಮಂಗಳಾತ್ಮಕವಾದ ಶಿವಮ್ಮ ಎಂಬ ನಾಮ ಕರಣವನ್ನು ಮಾಡಿದರು. ಈ ಮಗು ಎಲ್ಲರಂತೆ ಬೆಳೆದು ಪ್ರಾಪ್ತ ವಯಸ್ಸಿಗೆ ಕಾಲಿಟ್ಟಾಗ ಕಳಲೆ ಶೆಟ್ಟಪ್ಪನವರ (ವಾಸ–ಹುಲ್ಲಹಳ್ಳಿ) ಪುತ್ರರಾದ ಮುದ್ದಣ್ಣ ಎಂಬ ವರನಿಗೆ ಕೊಟ್ಟು ಮದುವೆ ಮಾಡಿದರು. ಈ ನವ ದಂಪತಿಗಳಲ್ಲಿ ಎರಡು ಮಕ್ಕಳಾದರೂ ಬಾಲ್ಯದಲ್ಲಿಯೇ ಆ ಮಕ್ಕಳು ವಿಧಿವಶರಾದರು. ಚಿಂತೆಯನ್ನು ದೂರಮಾಡಿ ಬಾಳನ್ನು ಸಾಗಿಸುತ್ತಿರು ವಾಗಲೇ ಮತ್ತೊಂದು ಬರಸಿಡಿಲು ಈ ಕುಟುಂಬದಲ್ಲಿ ಬಡಿಯಿತು. ಆಗಾಗ್ಗೆ ಊರಿನಲ್ಲಿ ಪ್ಲೇಗ್‌ರೋಗ ಕಾಣಿಸಿಕೊಳ್ಳುತ್ತಿತ್ತು. ಒಮ್ಮೆ ಶ್ರೀಮತಿ ಶಿವಮ್ಮನವರ ಪತಿಗೂ ಈ ರೋಗ ಕಾಣಿಸಿಕೊಂಡಿತು. ನಿರ್ದಯಿಯಾದ ವಿಧಿ ಬಹು ಬೇಗನೆ ಮುದ್ದಣ್ಣನವರನ್ನೂ ಬಲಿತೆಗೆದು ಕೊಂಡಿತು. ಮಕ್ಕಳನ್ನೂ ಪತಿಯನ್ನು ಕಳೆದುಕೊಂಡ ಶಿವಮ್ಮನವರು ತಮ್ಮ ಅಣ್ಣನಾದ ಶ್ರೀ ಡಿ. ಎಸ್. ಪುಟ್ಟಸ್ವಾಮಯ್ಯನವರ ಆಶ್ರಯದಲ್ಲಿ ಉಳಿದರು. ದಿನಗಳು ಉರುಳಿದುವು. ಕ್ರೂರ ವಿಧಿ ಮತ್ತೊಮ್ಮೆ ತನ್ನ ಗದಾಪ್ರಹಾರವನ್ನು ಶಿವಮ್ಮನವರ ಮೇಲೆಯೇ ಬೀಸಿತು. ಪ್ಲೇಗ್‌ರೋಗ ದಿಂದ ಪೀಡಿತರಾದರು. ಇಂತಹ ಕಠಿಣ ಪರಿಸ್ಥಿತಿಯಲ್ಲಿ ಶಿವಮ್ಮನವರ ಮನಸ್ಸು ಭಗವಂತನ ಕಡೆ ಹರಿಯಿತು. 'ಇಡೀ ನನ್ನ ಕುಟುಂಬವನ್ನೇ

ಕೊಂಡೊಯ್ಯುವಂತಹ ಅಪರಾಧವನ್ನು ನಾನೇನು ಮಾಡಿದೆ' ? ಎಂದು ಪರಮಾತ್ಮನನ್ನು ಪ್ರಶ್ನಿಸಿದರು. ಆಗ ಅವರ ಹೃದಯಾಂತರಾಳದಲ್ಲಿ ಒಂದು ಧ್ವನಿ ಹೊರಟಿತು. 'ನಿನ್ನ ಜೀವನವನ್ನು ನನಗೆ ಮೀಸಲಿಡು. ನಿನಗೆ ನಿನ್ನ ಗ್ರಾಮಕ್ಕೆ ಒಳಿತಾಗುತ್ತದೆ.' ಈ ಮಾತು ಸಾಕ್ಷಾತ್ ಪರಮಾತ್ಮನದೇ ಎಂದು ಭಾವಿಸಿ, 'ನಮ್ಮ ಊರಿಗೆ ಒಂದು ಆಸ್ಪತ್ರೆಯನ್ನು ಕಟ್ಟಿಸುತ್ತೇನೆ. ವೈದ್ಯಕೀಯ ಸೌಲಭ್ಯವನ್ನು ಒದಗಿಸಿಕೊಡುತ್ತೇನೆ. ನಿನ್ನ ಧ್ಯಾನದಲ್ಲೇ ಬಾಳನ್ನು ಸಾಗಿಸುತ್ತೇನೆ' ಎಂದು ಶಿವಮ್ಮನವರು ಮಾತುಕೊಟ್ಟರು. ರೋಗದಿಂದ ನಿವಾರಣೆ ಹೊಂದಿದರು. 1940ನೇ ಇಸವಿ. ಸರ್ಕಾರವು ಹುಲ್ಲಹಳ್ಳಿಗೆ ಒಂದು ಆಸ್ಪತ್ರೆಯನ್ನು ಮಂಜೂರ್ಮಾಡಿ ಒಬ್ಬ ಡಾಕ್ಟರನ್ನು ಕಳುಹಿಸಿಕೊಟ್ಟಿತು. ಶಿವಮ್ಮನವರು ಎರಡು ವರ್ಷಗಳ ಕಾಲ ಬೇರೊಂದು ಮನೆಯನ್ನು ಒದಗಿಸಿ, ಆ ಮನೆಗೆ ತಾವೇ ಬಾಡಿಗೆ ಕೊಟ್ಟು ಆಸ್ಪತ್ರೆಗೆ ಅವಕಾಶ ಮಾಡಿಕೊಟ್ಟರು. ಈ ವೇಳೆಯಲ್ಲಿ ನಂಜನಗೂಡು ತಾಲ್ಲೋಕು ಬೆಳುಗಲಿ ಎಂಬ ಗ್ರಾಮದಲ್ಲಿನ ತಮ್ಮ ಸ್ವಂತ ಗದ್ದೆಯಾದ ಮೂರು ಎಕರೆ ಜಮೀನನ್ನು ಮಾರಿದರು. ಬಂದ ಹಣದಲ್ಲಿ ಊರಿನ ಬಸ್‌ಸ್ಟಾಂಡ್ ಬಳಿ ಒಂದು ಸುಸಜ್ಜಿತವಾದ ಕಟ್ಟಡವನ್ನು ಕಟ್ಟಿಸಿದರು. 1942ರಲ್ಲಿ ಆ ನವೀನ ಕಟ್ಟಡಕ್ಕೆ ಸರ್ಕಾರಿ ಆಸ್ಪತ್ರೆಯನ್ನು ವರ್ಗಾಯಿಸಿದರು. ತಮ್ಮ ವಚನ ವನ್ನು ಪಾಲಿಸಿದರು.

ಮುಂದಿನ ದಿನಗಳಲ್ಲಿ ಶಿವಮ್ಮನವರು ತಮ್ಮ ಸ್ವಂತ ಮನೆಯ ಮುಂದಿನ ಜಗಲಿಯಲ್ಲಿ ಅಂಗಡಿ ಮಳಿಗೆಯನ್ನು ಕಟ್ಟಿಸಿ ಬಾಡಿಗೆಗೆಕೊಟ್ಟರು. ಊರಿನ ಗದ್ದೆಯಲ್ಲಿ ಬರುವ ಆದಾಯ ಮತ್ತು ಮನೆ ಬಾಡಿಗೆ ಹಣವನ್ನು ಕೂಡಿಸಿ ಆಗಾಗ್ಗೆ ತೀರ್ಥಯಾತ್ರೆಯನ್ನು ಕೈಗೊಂಡು, ಕಾಶಿ ರಾಮೇಶ್ವರವೆ ಮೊದಲ್ಗೊಂಡು ಅಖಂಡ ಭಾರತದ ಪುಣ್ಯ ಕ್ಷೇತ್ರಗಳನ್ನು ದರ್ಶನ ಮಾಡಿ ದರು.

ತಮ್ಮ ಊರಾದ ಹುಲ್ಲಹಳ್ಳಿಗೆ ಮೊದಲ ಹಿರಿಯ ದಾನಿಗಳಾಗಿ, ಮುಂದಿನ ಕಿರಿಯ ದಾನಿಗಳಿಗೆ ಹಾಗೂ ಸಮಾಜ ಸೇವಕರಿಗೆ ಮಾರ್ಗ ದರ್ಶಕಿಯಾಗಿದ್ದು, ತಮ್ಮ ತೊಂಬತ್ತೆರಡನೇ ವಯಸ್ಸಿನಲ್ಲಿ ಅಂದರೆ ಜೂನ್, 1987ರಲ್ಲಿ ದೈವಾಧೀನರಾದರು.

ಶ್ರೀಮತಿ ಶಿವಮ್ಮನವರು ತಮ್ಮ ಅಂತ್ಯಕಾಲದವರೆಗೂ ತಮ್ಮ ಸೋದರ ಸೊಸೆಯ ಮಗನನ್ನು (ಶಿವಕುಮಾರ್) ದತ್ತು ತೆಗೆದುಕೊಂಡು

ತಮ್ಮ ಮನೆಯಲ್ಲೇ ಸುದೃಢವಾಗಿ ಆರೋಗ್ಯವಾಗಿದ್ದರು. ಭಗವಂತನು ಅವರ ಆತ್ಮಕ್ಕೆ ಮಂಗಳವನ್ನುಂಟುಮಾಡಲಿ.

2. 'ಮರಣೋತ್ತರ ಪುಣ್ಯದಾನಿ' ಶ್ರೀಮತಿ ಸುಬ್ಬಮ್ಮ

ಶ್ರೀಮತಿ ಸುಬ್ಬಮ್ಮನವರು ಮೈಸೂರಿನ ಶೆಟ್ಟರ ನಂಜಪ್ಪನವರ ಮಗಳು. ಮಧುಗಿರಿ ಭೋಜಪ್ಪನವರನ್ನು ಲಗ್ನವಾದರು. ಸುಖ ಜೀವನ ವನ್ನು ಅನುಭವಿಸುತ್ತಿರುವಾಗಲೇ ಪತಿಯು ಮರಣ ಹೊಂದಿದರು. ವಿಧವೆ ಯಾದ ಸುಬ್ಬಮ್ಮನವರಿಗೆ ಆಶ್ರಿತರು ಯಾರೂ ಇಲ್ಲವಾದಾಗ ತಮ್ಮ 40 ನೆಯ ವಯಸ್ಸಿನಲ್ಲಿ ಹುಲ್ಲಹಳ್ಳಿಗೆ ಆಗಮಿಸಿದರು. ತಮ್ಮ ಜನರ ಮನೆಗಳಲ್ಲಿ ಸಣ್ಣಪುಟ್ಟ ಮನೆಗೆಲಸ ಮಾಡಿಕೊಂಡು ಊಟದ ಎಲೆ ಹಚ್ಚುವ ಕಾರ್ಯ ದಲ್ಲಿ ನಿರತರಾಗಿ ಅಷ್ಟು ಇಷ್ಟು ಹಣವನ್ನು ಶೇಖರಿಸುತ್ತಾ ಬಂದರು. ಹೀಗೆಯೇ ದಿನಗಳುರುಳಲು ಖಾಯಿಲೆಯಿಂದ ದೈವಾಧೀನರಾದರು. ಸುಬ್ಬಮ್ಮನವರ ಬಳಿಯಿದ್ದ ಹಣವು ಅವರ ಸಮೀಪವರ್ತಿಗಳಾದ ಅನ್ನಪೂರ್ಣಮ್ಮನವರ ಬಳಿ ಸೇರಿತು.

ಅನ್ನಪೂರ್ಣಮ್ಮನವರೂ ಮತ್ತು ಇವರ ಗೆಳತಿ ದಾಕ್ಷಾಯಿಣಿ ಯವರೂ, ಒಂದು ಉಚಿತ ತೀರ್ಮಾನವನ್ನು ಕೈಗೊಂಡರು. ಹುಲ್ಲ ಹಳ್ಳಿಯ ಮಲ್ಲೇಶ್ವರಸ್ವಾಮಿ ದೇವಾಲಯದಲ್ಲಿ ನವಗ್ರಹವನ್ನು ಪ್ರತಿಷ್ಠಾಪಿ ಸಲು ಶ್ರೀಮತಿ ಸುಬ್ಬಮ್ಮನವರ ಆರುಸಾವಿರ ರೂಪಾಯಿಗಳಲ್ಲಿ ನವಗ್ರಹ ಗಳಿಗೆ ಎರಡು ಸಾವಿರದ ಐದುನೂರು ರೂಪಾಯಿಗಳನ್ನೂ, ಪ್ರತಿಷ್ಠಾಪನಾ ಕಾರ್ಯಕ್ಕೆ ಮೂರು ಸಾವಿರದ ಐದುನೂರು ರೂಪಾಯಿಗಳನ್ನೂ ವಿನಿ ಯೋಗಿಸಿ ರೌದ್ರಿನಾಮ ಸಂವತ್ಸರದ ವೈಶಾಖ ಶುದ್ಧ ಚತುರ್ದಶಿಯಂದು ದಿನಾಂಕ (28–4–1980) ನವಗ್ರಹ ಪ್ರತಿಷ್ಠಾಪನಾ ಮಹೋತ್ಸವವು ಜರುಗಿತು.

ಶ್ರೀಮತಿ ಸುಬ್ಬಮ್ಮನವರು ಜಾಣರಲ್ಲ, ನಾಗರಿಕರಲ್ಲ. ವ್ಯವಹಾರ ಸ್ಥರೂ ಅಲ್ಲ. ಇವರ ಹಣ ಸದ್ವಿನಿಯೋಗವಾಗಿ ಶಾಶ್ವತ ಕೀರ್ತಿಯನ್ನು ತಂದುಕೊಟ್ಟಿತು. ಶ್ರೀಮತಿ ಸುಬ್ಬಮ್ಮನವರಿಂದ ಪರೋಕ್ಷವಾಗಿಯಾದರೂ ಹುಲ್ಲಹಳ್ಳಿಯ ಜನತೆಗೆ ನವಗ್ರಹಗಳ ಪೂಜಾ ಸೌಭಾಗ್ಯವು ದೊರೆಯು ವಂತಾಯಿತು. ಇಂತಹ ಶ್ರೀಮತಿ ಸುಬ್ಬಮ್ಮನವರಿಗೆ ಉತ್ತಮ ಲೋಕವು ದೊರೆಯಲೆಂದು ಹಾರೈಸೋಣ. ಹಣದ ಸದ್ವಿನಿಯೋಗದಲ್ಲಿ ಪಾತ್ರವಹಿ

ಸಿದ ಅನ್ನಪೂರ್ಣಮ್ಮ ಮತ್ತು ದಾಕ್ಷಾಯಣಿಯವರು ಅಭಿನಂದನಾರ್ಹರು.

3. 'ದಯಾಹೃದಯಿ' ಶ್ರೀ ಬಿ. ಎನ್. ಸುಬ್ಬಣ್ಣ

ಈಗ್ಗೆ ತೊಂಬತ್ತು ವರ್ಷಗಳ ಹಿಂದೆ ಹುಲ್ಲಹಳ್ಳಿಯಲ್ಲಿ ಪ್ರಸಿದ್ಧ ಹತ್ತಿ ವ್ಯಾಪಾರಿಗಳಾಗಿದ್ದ ಯಜಮಾನ್ ತಮ್ಮಣ್ಣನವರಿಗೆ ಮೂವರು ಗಂಡು ಮಕ್ಕಳು ಮತ್ತು ಒಬ್ಬಳೇ ಹೆಣ್ಣುಮಗಳು ಇದ್ದರು. 'ಹೆಣ್ಣು ಹೆತ್ತವರ ಮನೆಯು ಬೆಳೆವುದು ಬೇಗ' ಎಂಬಂತೆ ತಮ್ಮಣ್ಣನವರ ಮಗ ಳಾದ ಶಂಕರಮ್ಮನವರು ಮೈಸೂರು ಸಂತೇಪೇಟೆ ವರ್ತಕರಾದ ಬಿ. ಎನ್. ಸುಬ್ಬಣ್ಣನವರ ಧರ್ಮಪತ್ನಿಯಾದರು. ಬಿ. ಎನ್. ಸುಬ್ಬಣ್ಣನವರು ಒಳ್ಳೆಯ ಮನೆತನದವರು, ಪಿತೃಭಕ್ತಿ ಸಂಪನ್ನರು. ಇವರ ತಾಯಿ ಚನ್ನ ವೀರಮ್ಮ ಸಾಧ್ವೀಮಣಿ. ಇವರ ತಂದೆಯಾದ ಬೆಟ್ಟದಪುರದ ನಾಗಣ್ಣ ನವರು ತಮ್ಮ ಸಂಸಾರದ ಜವಾಬ್ದಾರಿಯನ್ನು ಪೂರೈಸಿ, ಎಲ್ಲ ವ್ಯವಹಾರ ಗಳನ್ನೂ ಮಗನಿಗೆ ವಹಿಸಿ ಶಂಭುಲಿಂಗ ಬೆಟ್ಟದ ಸ್ವಾಮೀಜಿಯ ಬಳಿ ಸೇವಾ ತತ್ಪರರಾಗಿ ಉಳಿದರು. ಕೇವಲ ಹಾಲನ್ನು ಮಾತ್ರ ತಮ್ಮ ಆಹಾರ ಕ್ಕಾಗಿ ಉಪಯೋಗಿಸುತ್ತಿದ್ದ ಸ್ವಾಮೀಜಿಯವರಿಗೂ ಮತ್ತು ತಮ್ಮ ತಂದೆ ಯವರಿಗೂ ಶ್ರೀ ಬಿ ಎನ್. ಸುಬ್ಬಣ್ಣನವರು ಒಂದು ಕರೆಯುವ ಹಸುವನ್ನು ಒದಗಿಸಿ ಬೆಟ್ಟದಲ್ಲಿಯೇ ಒಂದು ಸಣ್ಣ ಮನೆಯನ್ನು ಕಟ್ಟಿಸಿ ಎಲ್ಲಾ ಅನು ಕೂಲಗಳನ್ನೂ ಮಾಡಿಕೊಟ್ಟರು. ಬೆಟ್ಟದ ನಿವಾಸಿಗಳಿಗೆ ನೀರಿನ ತೊಂದರೆ ಯಿರುವುದನ್ನು ಗಮನಿಸಿ ಒಂದು ಬೀಸಗಣಿಗೆಯ ಭಾವಿಯನ್ನೂ ತೆಗೆಸಿ ಕೊಟ್ಟರು. ಇಂತಹ ಧರ್ಮಾತ್ಮರಾದ ಬಿ.ಎನ್. ಸುಬ್ಬಣ್ಣನವರ ಕೈಹಿಡಿದ ಶಂಕರಮ್ಮನವರು ಪತಿಯ ಇಚ್ಛೆಗನುಗುಣವಾಗಿ ಬಾಳತೊಡಗಿದರು. ಹುಲ್ಲಹಳ್ಳಿಯಲ್ಲಿ ಬಹಳ ಶಿಥಿಲಗೊಂಡಿದ್ದ ಹಾಗೂ ಕಣ್ಮರೆಯಾಗಿದ್ದ ಕಾಳಿಕಾ ದೇವಾಲಯವನ್ನು ಮತ್ತೊಮ್ಮೆ ಕಟ್ಟಿಸಬೇಕೆಂಬ ಬಯಕೆ ಶಂಕರಮ್ಮನವರಿಗಿತ್ತು. ಆ ಬಯಕೆಯನ್ನು ತಮ್ಮ ಪತಿಗೂ ತಿಳಿಸಿದ್ದರು. ಈ ನಡುವೆ ಬಿ. ಎನ್. ಸುಬ್ಬಣ್ಣನವರು ಆಲನಹಳ್ಳಿಯಲ್ಲಿ ಒಂದು ಪಶು ವೈದ್ಯಶಾಲೆಯನ್ನು ಧರ್ಮಾರ್ಥವಾಗಿ ಕಟ್ಟಿಸಿದ್ದರು ಶ್ರೀಮತಿ ಶಂಕರಮ್ಮ ನವರು ಎರಡು ಹೆಣ್ಣು, ಎರಡು ಗಂಡುಮಕ್ಕಳ ತಾಯಿಯಾಗಿ 1942ರಲ್ಲಿ ನಿಧನರಾದರು. ಇವರ ಆಸೆ ಹಾಗೆಯೇ ಉಳಿದಿತ್ತು. ಹುಲ್ಲಹಳ್ಳಿಯಲ್ಲಿ ಜನ-ಜಾನುವಾರಗಳ ಸಂಖ್ಯೆ ಹೆಚ್ಚುತ್ತಾ ಬಂದಂತೆ ಒಂದು ಪಶುವೈದ್ಯ

ಶಾಲೆಯ ಆವಶ್ಯಕತೆಯುಂಟಾಗಿ ಊರ ಹಿರಿಯರು ಶ್ರೀ ಬಿ. ಎನ್. ಸುಬ್ಬಣ್ಣನವರನ್ನು ಭೇಟಿಯಾಗಲು, ಅವರು ತಮ್ಮ ಪತ್ನಿ ಶಂಕರಮ್ಮನವರ ಆಸೆಯನ್ನು ನೆನಪು ಮಾಡಿಕೊಂಡು, ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮಗಳ ಪಶು-ಪ್ರಾಣಿಗಳಿಗೆ ಉತ್ತಮ ವೈದ್ಯಕೀಯ ಚಿಕಿತ್ಸೆ ದೊರೆಯುವುದಾದರೆ ಪಶುವೈದ್ಯಶಾಲೆಯೂ ಒಂದು ದೇವಾಲಯವೆಂದು ಭಾವಿಸಿ, ಹುಲ್ಲಹಳ್ಳಿಯಲ್ಲಿ ಅದರ ನಿರ್ಮಾಣಕ್ಕೆಂದು 15,000 ರೂಪಾಯಿಗಳ ನೆರವನ್ನು ಒದಗಿಸಿದರು. ಗ್ರಾಮಪಂಚಾಯ್ತಿ ನೀಡಿದ ನಿವೇಶನದಲ್ಲಿ...... ಪಶುವೈದ್ಯಶಾಲಾ ಕಟ್ಟಡವು ನಿರ್ಮಾಣವಾಯಿತು. ಕರ್ನಾಟಕ ಸರ್ಕಾರವು ವೈದ್ಯರನ್ನೂ ಮತ್ತು ಔಷಧಿ ಸಲಕರಣೆಗಳನ್ನು ಒದಗಿಸಿ ಹುಲ್ಲಹಳ್ಳಿಯ ಜಾನುವಾರುಗಳಿಗೆ ವೈದ್ಯಕೀಯ ಸೌಲಭ್ಯವು ನಿರಂತರವಾಗಿ ದೊರೆಯುವಂತಾಗಿದೆ.

ತಮ್ಮ ದಾನಗುಣದಿಂದ ಪಶು-ಪ್ರಾಣಿಗಳಲ್ಲೂ ಅನುಕಂಪವನ್ನು ತೋರಿದ 'ದಯಾ ಹೃದಯಿ' ಶ್ರೀ ಬಿ. ಎನ್. ಸುಬ್ಬಣ್ಣನವರು 1978 ರಲ್ಲಿ ತಮ್ಮ ಇಹಲೋಕಯಾತ್ರೆಯನ್ನು ಮುಗಿದರು. ಆದರೂ ಅವರ ಧರ್ಮಕಾರ್ಯವು ಎಂದೆಂದಿಗೂ ಅವರ ನೆನಪನ್ನು ತಂದುಕೊಡುತ್ತದೆ.

### 4. 'ಹೆರಿಗೆ ಬೇನೆಯನ್ನು ಬಲ್ಲ ಹೆಣ್ಣು' ಶ್ರೀಮತಿ ಸರ್ವಮಂಗಳಮ್ಮ

ಕಾಲ ಕ್ರಿ. ಶ. 1935. ಹುಲ್ಲಹಳ್ಳಿಯಲ್ಲಿ ಶ್ರೀ ಹೆಚ್ ಎಸ್. ಸುಬ್ಬಣ್ಣ ಮತ್ತು ಶ್ರೀಮತಿ ರಾಮಮ್ಮ ಎಂಬ ದಂಪತಿಗಳಿಗೆ ನಾಲ್ಕು ಜನ ಹೆಣ್ಣುಮಕ್ಕಳು. ಈ ಮಕ್ಕಳಲ್ಲಿ ಸರ್ವಮಂಗಳಮ್ಮ ಒಬ್ಬಳು. ಸರ್ವಮಂಗಳಮ್ಮ ಮತ್ತು ಈಕೆಯ ದೊಡ್ಡಪ್ಪ ವೆಂಕಟಪ್ಪನವರ ಮಗಳಾದ ಜಯಮ್ಮ ಇಬ್ಬರೂ ಸ್ವಂತ ಅಕ್ಕತಂಗಿಯರಂತೆ ಒಟ್ಟಿಗೆ ಬೆಳೆದಿದ್ದರು. ವಯಸ್ಸಿನಲ್ಲಿ ಹಿರಿಯಳಾದ ಜಯಮ್ಮನಿಗೆ ಒಂದೇ ಊರಿನವರಾದ ಶ್ರೀ ಪುಟ್ಟಸ್ವಾಮಪ್ಪನವರ (ಈಗಲೂ ಇರುವರು) ಜೊತೆ ಲಗ್ನಮಾಡಲಾಗಿತ್ತು ಹೊಸ ಬಾಳಿನ ದಿನಗಳು ಉರುಳಿದಂತೆ ಜಯಮ್ಮ ಗರ್ಭಿಣಿಯಾದಳು. ಹೆರಿಗೆಯ ದಿನ ಹತ್ತಿರ ಬಂದಿತು ಹೊಟ್ಟೆ ನೋವು ಕಾಣಿಸತೊಡಗಿತು ಆಗಿನ್ನೂ ಹುಲ್ಲಹಳ್ಳಿಗೆ ಡಾಕ್ಟರರೂ ಆಸ್ಪತ್ರೆಯೂ ಬಂದಿರಲಿಲ್ಲ. ಜಯಮ್ಮನ ಗಂಡ ಮತ್ತು ತಂದೆ ತಾಯಿಯರಿಗೆ ಚಿಂತೆ ಆವರಿಸಿತು. ಡಾಕ್ಟರನ್ನು ಕಾಣ

ಬೇಕಾದರೆ ನಂಜನಗೂಡಿಗೆ ಬರಬೇಕು, ಇಲ್ಲವೇ ಸುರ ಗ್ರಾಮದಲ್ಲಿ ಆಗ ತಾನೆ ಪ್ರಾರಂಭವಾಗಿದ್ದ ಸರ್ಕಾರಿ ಆಸ್ಪತ್ರೆಗೆ ಹೋಗಬೇಕಾಗಿತ್ತು. ಬಸ್ಸುಗಳ ಸಂಚಾರವೂ ಹೆಚ್ಚಾಗಿರಲಿಲ್ಲ. ಒಂದು ಬಸ್ಸು ಮಾತ್ರ ನಂಜನಗೂಡಿಗೆ ಹೋಗಿಬರುತ್ತಿತ್ತು. ಆ ಬಸ್ಸಿನ ಡ್ರೈವರನ್ನು ಕಂಡು ನಿಜಸ್ಥಿತಿ ತಿಳಿಸಿ, ಆತನನ್ನು ಒಪ್ಪಿಸಿ, ನಂಜನಗೂಡಿಗೆ ಗರ್ಭಿಣಿಯನ್ನು ಕರೆದುಕೊಂಡು ಹೋಗಲು ವ್ಯವಸ್ಥೆಯನ್ನು ಮಾಡಿದರು. ಮನೆಯ ಬಳಿಗೂ ಬಸ್ಸುಬಂದು ನಿಂತಿತು. ಅಷ್ಟರಲ್ಲೆ ತೀವ್ರವಾದ ಹೊಟ್ಟೆ ನೋವಿನಿಂದ ಗರ್ಭಪಾತವಾಗಿ ಜಯಮ್ಮ ಅಸು ನೀಗಿದಳು. ಹಿರಿಯರ ದುಃಖದ ನಡುವೆ ಜಯಮ್ಮನ ತಂಗಿಯಾದ ಸರ್ವಮಂಗಳಮ್ಮನಿಗೆ, ತನ್ನ ಪ್ರೀತಿಯ ಅಕ್ಕನ ಸಾವು ಜೀವನದಲ್ಲಿಯೇ ಮರೆಯಲಾರದ ನೋವಾಗಿ ಉಳಿಯಿತು. 'ಹುಲ್ಲಹಳ್ಳಿಯಲ್ಲಿ ಆಸ್ಪತ್ರೆಯಿಲ್ಲದೆ, ಡಾಕ್ಟರಿಲ್ಲದೆ ಅಕ್ಕನಂತಹ ಎಷ್ಟು ಹೆಂಗಸರು ಇಂತಹ ವೇದನೆಯನ್ನು ಅನುಭವಿಸುವರೋ? ಎಂದಿಗೆ ಇದು ನಿವಾರಣೆಯಾಗುವುದೋ? ಎಂಬುದಾಗಿ ಬಾಲಕಿಯ ಮನದಲ್ಲಿ ಭಾವನಾ ತರಂಗಗಳು ಮೂಡಿದುವು. ಈ ಬಾಲಕಿ ಸರ್ವಮಂಗಳಮ್ಮನಿಗೂ ತನ್ನ ಹದಿಮೂರನೆಯ ವಯಸ್ಸಿನಲ್ಲಿ ಲಗ್ನವಾಯಿತು. ಒಮ್ಮೆ ತನ್ನ ತಾತನಾದ ಸಾಹುಕಾರ್ ಪುಟ್ಟಸ್ವಾಮಪ್ಪನವರನ್ನು ಕೇಳಿದಳು, 'ತಾತ, ನಮ್ಮೂರಿಗೆ ಒಂದು ಹೆರಿಗೆ ಆಸ್ಪತ್ರೆಯನ್ನು ಕಟ್ಟಿಸಿಕೊಡು, ಡಾಕ್ಟರು ಬರುವಂತೆ ಮಾಡು' ಎಂದಳು. ಹುಡುಗಿಯ ಮಾತಿಗೆ ಉತ್ತರವಾಗಿ 'ನಿನ್ನ ಗಂಡನೇ ಶ್ರೀಮಂತನಾಗಿರುವಾಗ ನನ್ನನ್ಯಾಕಮ್ಮ ಕೇಳ್ತೀಯ? ಹೋಗಿ ನಿನ್ನ ಗಂಡನಿಗೆ ಹೇಳು, ಅವನೇ ಆಸ್ಪತ್ರೆ ಕಟ್ಟಿಸಬಲ್ಲ' ಎಂದರು ಆಕೆಯ ತಾತ. ಸರ್ವಮಂಗಳಮ್ಮನ ಕೈಹಿಡಿದವರು ಶ್ರೀ ಬಿ.ಕೆ. ರಾಜಶೇಖರಯ್ಯ ಎಂಬ ಗಣ್ಯವ್ಯಕ್ತಿಗಳು. ಇವರು ಪೂರ್ವದಲ್ಲಿ ಬೆಟ್ಟದಪುರದವರು. ಇವರ ತಂದೆ ಕರಿಶೆಟ್ಟಿ, ತಾಯಿ ಕರಿಸಿದ್ದಮ್ಮ. ಪಿರಿಯಾಪಟ್ಟಣದಲ್ಲಿ ವ್ಯಾಪಾರ-ವ್ಯವಸಾಯ ಮಾಡಿಕೊಂಡಿದ್ದವರು. ಬಿ. ಕೆ. ರಾಜಶೇಖರಯ್ಯನವರು ಚಿಕ್ಕವಯಸ್ಸಿನಲ್ಲಿ ಮೈಸೂರಿನ ತಮ್ಮ ದೊಡ್ಡಪ್ಪನವರ ಮನೆಯಲ್ಲಿ ಇದ್ದುಕೊಂಡು ವಿದ್ಯಾಭ್ಯಾಸ ಮಾಡಿದರು. ನಂತರ ಮೈಸೂರಿನಲ್ಲೇ ವ್ಯಾಪಾರ ವೃತ್ತಿಯನ್ನು ಅವಲಂಬಿಸಿದರು. ರಾಜಕೀಯದಲ್ಲಿ ನುರಿತವರಾಗಿ, ಮೈಸೂರಿನ ಮುನಿಸಿಪಾಲಿಟಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ತಮ್ಮ ವ್ಯಾಪಾರೋದ್ಯಮದಲ್ಲಿ ಅಧಿಕ ಸಂಪತ್ತನ್ನು ಗಳಿಸಿಧರು. ಅನೇಕ ಧಾರ್ಮಿಕ ಕಾರ್ಯಗಳನ್ನು

ನಡೆಸಿದರು. ಇಂತಹ ಗಂಡನ ಕೈಹಿಡಿದಿದ್ದ ಸರ್ವಮಂಗಳಮ್ಮನವರಿಗೆ ಯಾವುದರಲ್ಲೂ ಕೊರತೆಯಿರಲಿಲ್ಲ. ತಮ್ಮ ಮನದ ಮಹದಾಸೆಯನ್ನು ಗಂಡನಿಗೆ ತಿಳಿಸಿದರು. ಅವರು ಹುಲ್ಲಹಳ್ಳಿಯಲ್ಲಿ ಹೆರಿಗೆ ಆಸ್ಪತ್ರೆಯನ್ನು ಕಟ್ಟಿಸಿ ಕೊಡಲು ಒಪ್ಪಿದರು.

ಸರ್ವಮಂಗಳಮ್ಮನವರು ಬಿ. ಕೆ. ರಾಜಶೇಖರಯ್ಯನವರಿಗೆ ಎರಡನೇ ಹೆಂಡತಿ. ಮೊದಲ ಹೆಂಡತಿ ಶಂಕರಮ್ಮನವರು ಒಂದು ಹೆಣ್ಣು ಒಂದು ಗಂಡುಮಗುವನ್ನು ಹಡೆದು ತೀರಿಕೊಂಡಿದ್ದರು. ಆ ಮಕ್ಕಳ ಲಾಲನೆ ಪಾಲನೆ ಇವರಿಗೇ ಸೇರಿತ್ತು. ಸರ್ವಮಂಗಳಮ್ಮನವರಿಗೂ ಎರಡು ಗಂಡು, ನಾಲ್ಕು ಹೆಣ್ಣುಮಕ್ಕಳಾದರು. ಎಲ್ಲರೂ ಬೆಳೆದು ದೊಡ್ಡವರಾಗಿ, ಸಂಸಾರಸ್ಥರಾಗಿ ಉದ್ಯೋಗಶೀಲರಾಗಿದ್ದಾರೆ. ಈಗ್ಗೆ ಹನ್ನೆರಡು ವರ್ಷಗಳ ಹಿಂದೆ ಬಿ. ಕೆ. ರಾಜಶೇಖರಯ್ಯನವರು ದೈವಾಧೀನರಾದರು. ಮಕ್ಕಳು ಸೊಸೆಯರ ನಡುವೆ ಸರ್ವಮಂಗಳಮ್ಮ ಜೀವಿಸುತ್ತಿದ್ದಾರೆ.

1983ರಲ್ಲಿ ಸರ್ವಮಂಗಳಮ್ಮನವರ ಬಾಲ್ಯದ ಬಯಕೆ ಈಡೇರುವ ಕಾಲ ಒದಗಿತು. ಐವತ್ತು ಸಾವಿರ ರೂಪಾಯಿಗಳ ದಾನವನ್ನು ನೀಡಿ ಹುಲ್ಲಹಳ್ಳಿಯಲ್ಲಿ ಹೆರಿಗೆ ಆಸ್ಪತ್ರೆಯ ಭವ್ಯ ಕಟ್ಟಡವನ್ನು ಕಟ್ಟಿಸಿ ಊರಿನ ಮತ್ತು ಸುತ್ತಮುತ್ತಲಿನ ಮಹಿಳೆಯರಿಗೆ ಮಹದುಪಕಾರವನ್ನು ಮಾಡಿದ್ದಾರೆ. ಈ ಪುಣ್ಯಕಾರ್ಯದಲ್ಲಿ ಬಿ. ಕೆ. ರಾಜಶೇಖರಯ್ಯನವರ ಹಿರಿಯ ಹೆಂಡತಿಯ ಮಗನಾದ ಆರ್. ನಾಗೇಶ್ವರಯ್ಯನವರು ಬಹುವಾಗಿ ಧನ ಸಹಾಯವನ್ನು ಮಾಡಿ ತಮ್ಮ ಚಿಕ್ಕಮ್ಮನವರಿಗೆ ನೆರವಾಗಿದ್ದಾರೆ.

ಕಳೆದ ವರ್ಷದಿಂದ ಸರ್ಕಾರವು ಒಬ್ಬ ಮಹಿಳಾವೈದ್ಯರನ್ನೂ ಸಿಬ್ಬಂದಿ ವರ್ಗದವರನ್ನೂ ನೇಮಕಮಾಡಿ ಇಲ್ಲಿನ ಹೆರಿಗೆ ಆಸ್ಪತ್ರೆಯು ಕಾರ್ಯ ನಿರ್ವಹಿಸುವಂತೆ ಮಾಡಲಾಗಿದೆ.

ಹೆರಿಗೆ ಬೇನೆಯನ್ನು ಬಲ್ಲ ಹೆಣ್ಣಿನಿಂದಲ್ಲದೆ ಈ ಮಹತ್ಕಾರ್ಯ ಸಾಧ್ಯವಾಗುತ್ತಿರಲಿಲ್ಲ. ಭಗವಂತನು ಈ ಮಹಾದಾನಿ ಶ್ರೀಮತಿ ಸರ್ವಮಂಗಳಮ್ಮನವರಿಗೂ ಮತ್ತು ಈ ತಾಯಿಗೆ ನೆರವಾದ ಆರ್. ನಾಗೇಶ್ವರಯ್ಯನವರಿಗೂ, ಸ್ವರ್ಗಸ್ಥರಾದ ಬಿ. ಕೆ. ರಾಜಶೇಖರಯ್ಯನವರಿಗೂ ಮಂಗಳವನ್ನುಂಟುಮಾಡಲಿ.

## 5. ಸಾರ್ಥಕ ಬದುಕಿನ ಶ್ರೀ ಬಿ. ಚಂದ್ರಶೇಖರಪ್ಪ

ಅಂದು ಹುಲ್ಲಹಳ್ಳಿಯ ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಾಲಯವು ಅತ್ಯಂತ ಶಿಥಿಲತೆಯನ್ನು ಹೊಂದಿತ್ತು. ಪುರಾತನವಾದ ಈ ದೇವಾಲಯವು ಪುಣ್ಯವಂತರಿಂದಲೇ ಜೀರ್ಣೋದ್ಧಾರವನ್ನು ಬಯಸಿದ್ದಿತೋ ಎನ್ನುವಂತೆ 196 ನೆಯ ಇಸವಿಯಲ್ಲಿ ಧರ್ಮರತ್ನಾಕರರ ಮನೆತನದಲ್ಲಿ ಜನಿಸಿದ ಶ್ರೀ ಬಿ. ಚಂದ್ರಶೇಖರಪ್ಪನವರ ಗಮನವು ಈ ದೇವಾಲಯದ ಮೇಲೆ ಹರಿಯಿತು. ತಮ್ಮ ಸ್ವಂತ ಮೇಲ್ವಿಚಾರಣೆಯಲ್ಲಿಯೇ ಮಲ್ಲಿಕಾರ್ಜುನಸ್ವಾಮಿ ದೇವಾಲಯದ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಂಡರು. ಈ ಮಹೋನ್ನತ ಸಂತೋಷದ ಸಮಯದಲ್ಲಿ ಅಂದಿನ ಕರ್ನಾಟಕದ ಆಹಾರ ಮಂತ್ರಿಗಳಾದ ಶ್ರೀ ಬಸಪ್ಪದಾನಪ್ಪ ಜತ್ತಿಯವರೂ ಮತ್ತು ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರಸ್ವಾಮಿಯವರೂ ಹಾಜರಿದ್ದರು.

ಹುಲ್ಲಹಳ್ಳಿ ಬೆಳೆದಂತೆ ಈ ಊರಿಗೆ ಒಂದು 'ಉಚಿತ ಕಲ್ಯಾಣ ಮಂದಿರ'ದ ಅವಶ್ಯಕತೆಯನ್ನು ಮನಗಂಡು, ಇದೇ ವೇಳೆಯಲ್ಲಿ ತಮ್ಮ ತಾಯಿಯವರಾದ ಶ್ರೀಮತಿ ಶಿವಮ್ಮನವರ ಹೆಸರಿನಲ್ಲಿ ಶ್ರೀ ಬಿ. ಚಂದ್ರಶೇಖರಪ್ಪನವರು ಒಂದು ಕಲ್ಯಾಣ ಮಂದಿರವನ್ನೂ ನಿರ್ಮಿಸಿ ಅಂದಿನ ಶ್ರೀಮನ್ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರ್ ಅವರಿಂದ ಉದ್ಘಾಟನಾ ಮಹೋತ್ಸವವನ್ನು ನೆರವೇರಿಸಿದರು. ಇಂದು ಈ ಕಲ್ಯಾಣ ಮಂದಿರವು ಎಲ್ಲ ವರ್ಗದ ಜನರಿಗೂ ಮದುವೆ–ಮುಂಜಿ ಮೊದಲಾದ ಶುಭ ಕಾರ್ಯವನ್ನು ನಡೆಸಲು ಅನುಕೂಲವಾಗಿದೆ.

ಇಂದಿಗೂ ಹುಲ್ಲಹಳ್ಳಿಯಲ್ಲಿ ನಡೆಯುವ ಯಾವುದೇ ಸಾಮಾಜಿಕ ಅಥವಾ ಸಾಮೂಹಿಕ ಕಾರ್ಯಕ್ರಮಗಳಿಗೆ ಉದಾರ ನೆರವು ನೀಡುವುದರಲ್ಲಿ ಇವರು ಮೊದಲಿಗರು. ಹುಲ್ಲಹಳ್ಳಿಯ ಜೆ. ಎಸ್. ಎಸ್. ಪ್ರೌಢಶಾಲೆಗಾಗಿ ಒಂದು ಎಕರೆ ಜಮೀನನ್ನು ಬಿಟ್ಟಿರುವುದನ್ನೂ ಮಹಿಳಾ ಸಮಾಜದ ಪ್ರಗತಿಗಾಗಿ ಒಂದು ಸಾವಿರ ರೂ.ಗಳನ್ನು ನೀಡಿರುವುದನ್ನೂ ಇಲ್ಲಿ ಸ್ಮರಿಸಬಹುದು.

ಶ್ರೀ ಬಿ. ಚಂದ್ರಶೇಖರಪ್ಪನವರು 1964ರಲ್ಲಿ ಮೈಸೂರಿನ ಶ್ರೀಜಯಚಾಮರಾಜೇಂದ್ರ ಇಂಜಿನಿಯರಿಂಗ್ ಕಾಲೇಜಿನಲ್ಲಿ ಒಂದು ಗ್ರಂಥಾಲಯ ವಿಭಾಗವನ್ನು ಕಟ್ಟಿಸಿ, ಅದರ ಪ್ರಾರಂಭೋತ್ಸವ ಸಮಯದಲ್ಲಿ ಸುತ್ತೂರು

ವೀರ ಸಿಂಹಾಸನಾಧೀಶ್ವರ ರಾಜಗುರು ತಿಲಕ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಯವರ ದಿವ್ಯ ಸನ್ನಿಧಿಯಲ್ಲಿ ಮೈಸೂರಿನ ಮಹಾರಾಜ ರಾದ ಶ್ರೀ ಜಯಚಾಮರಾಜ ಒಡೆಯರ್ ಅವರಿಂದ ಚಿನ್ನದ ಪದಕ ದೊಂದಿಗೆ "ಧರ್ಮಕಾರ್ಯ ಧುರೀಣ' ಎಂಬ ಬಿರುದನ್ನು ಸ್ವೀಕರಿಸಿದರು.

ಇಂತಹ ಸದ್ಗುಣಿ ಶ್ರೀ ಬಿ. ಚಂದ್ರಶೇಖರಪ್ಪನವರನ್ನು ಪಡೆದ ಇವರ ತಂದೆ ತಾಯಿಯರು ಪುಣ್ಯಜೀವಿಗಳು. ಮಹಾರಾಜ ಶ್ರೀ ಜಯಚಾಮ ರಾಜ ಒಡೆಯರ್ ಅವರಿಂದ 'ಧರ್ಮರತ್ನಾಕರ' ಎಂಬ ಬಿರುದನ್ನು ಹೊಂದಿದ್ದ ಶ್ರೀ ಕೆ. ನಂದಿಬಸಪ್ಪನವರೇ ಇವರ ತಂದೆಯವರು.

ಕ್ರಿ. ಶ. 1895ರಂದು ಪಿರಿಯಾಪಟ್ಟಣದಲ್ಲಿ ಜನಿಸಿದ ಶ್ರೀ ಕೆ. ನಂದೀಬಸಪ್ಪನವರು 1924ರಲ್ಲಿ ಮೈಸೂರಿಗೆ ಬಂದು ನೆಲೆಸಿದರು. ಇವರು ಬೆಂಗಳೂರಿನ ಶ್ರೀ ಚನ್ನಮಲ್ಲಪ್ಪನವರ ಮಗಳಾದ ಶಿವಮ್ಮ ಎಂಬುವರನ್ನು ಲಗ್ನವಾದರು. ವ್ಯಾಪಾರೋದ್ಯಮದಲ್ಲಿ ದಿನೇ ದಿನೇ ವೃದ್ಧಿಹೊಂದಿದ ಇವರು ಸಾಹುಕಾರರೆನಿಸಿದರೂ ಅಹಂಕಾರಕ್ಕೆಡೆಗೊಡದೆ ಧರ್ಮಕಾರ್ಯ ಗಳಲ್ಲಿ ನಿರತರಾದರು. ತಮ್ಮ ಸ್ವಂತ ಊರಾದ ಪಿರಿಯಾಪಟ್ಟಣದಲ್ಲಿ ಒಂದು ಪಶುವೈದ್ಯಶಾಲೆಯನ್ನೂ, ಒಂದು ಹೆರಿಗೆ ಆಸ್ಪತ್ರೆಯನ್ನೂ ಕಟ್ಟಿಸಿದರು. ಮೈಸೂರಿನ ಒಂಟಿಕೊಪ್ಪಲ್ ಬಡಾವಣೆಯಲ್ಲಿ 'ಶ್ರೀ ರಾಮಕೃಷ್ಣ ಮಿಷನ್' ಸಂಸ್ಥೆಯವರು ಕೆ. ನಂದೀಬಸಪ್ಪನವರಿಂದ ಹದಿನಾಲ್ಕು ಎಕರೆ ಖಾಲಿ ಪ್ರದೇಶವನ್ನು ದಾನವಾಗಿ ಪಡೆದು ತಮ್ಮ ವಿದ್ಯಾಸಂಸ್ಥೆಯನ್ನು ಕಟ್ಟಿಸಿರು ತ್ತಾರೆ. ಮೈಸೂರಿನ ಶಾರದಾವಿಲಾಸ ಕಾಲೇಜಿನ ಒಂದು ಕಟ್ಟಡ ಮತ್ತು ಜಯಚಾಮರಾಜೇಂದ್ರ ಸ್ಕೌಟ್ ಹೆಡ್ ಕ್ವಾರ್ಟರ್ಸ್ ಎಂಬ ಭವ್ಯ ಕಟ್ಟ ಡವೂ ಶ್ರೀ ನಂದೀಬಸಪ್ಪನವರ ಕೊಡುಗೆಯೇ ಆಗಿದೆ.

ಇಂದು ಶ್ರೀ ಕೆ. ನಂದೀಬಸಪ್ಪನವರಾಗಲೀ, ಇವರ ಧರ್ಮಪತ್ನಿ ಶಿವಮ್ಮನವರಾಗಲೀ ಇಲ್ಲ. ಆದರೆ ಧರ್ಮಕಾರ್ಯವೇ ತಮ್ಮ ಉಸಿರೆಂದು ಭಾವಿಸಿದ್ದ ಮಹಾನ್ ವ್ಯಕ್ತಿಗಳ ಮಗನಾಗಿ ಜನಿಸಿದ (ಜನನ ಕ್ರಿ. ಶ. 1916) ಶ್ರೀ ಬಿ. ಚಂದ್ರಶೇಖರಪ್ಪನವರು ತಮ್ಮ ತಂದೆ ತಾಯಿಯವರ ಸಮಾಧಿಯ ಬಳಿ ಮೈಸೂರಿನಲ್ಲಿ ಒಂದೊಂದು ದೇವಾಲಯವನ್ನು ನಿರ್ಮಿಸಿ ಅವರಿಗೆ ಕೃತಜ್ಞತೆಯನ್ನು ಅರ್ಪಿಸಿರುವುದೇ ಅಲ್ಲದೆ, ಅವರು ತೋರಿದ ಮತ್ತು ನಡೆದ ಹಾದಿಯಲ್ಲಿಯೇ ಸಾಗುತ್ತಿದ್ದಾರೆ. ಇಂತಹ ಸಾರ್ಥಕ ಬದು ಕಿನ, ಧಾರ್ಮಿಕ ಮನೋಭಾವದ ಶ್ರೀ ಬಿ. ಚಂದ್ರಶೇಖರಪ್ಪನವರಿಗೆ

ಭಗವಂತನು ಆಯುರಾರೋಗ್ಯ ಸಂಪತ್ತುಗಳನ್ನು ಇನ್ನೂ ವೃದ್ಧಿಸಲಿ ಎಂದು ಪ್ರಾರ್ಥಿಸೋಣ.

## 7. ನೆರವು ಸಣ್ಣದು ಧ್ಯೇಯ ದೊಡ್ಡದು

1950ನೇ ಇಸವಿಯವರೆಗೂ ಹುಲ್ಲಹಳ್ಳಿಯಲ್ಲಿ ಪ್ರಾಥಮಿಕ ಶಾಲೆಯು ಕಡಿಮೆಯ ಸಂಖ್ಯೆಯ ಶಿಕ್ಷಕರನ್ನೂ, ವಿದ್ಯಾರ್ಥಿಗಳನ್ನೂ ಹೊಂದಿದ್ದಿತು. ಇವರಿಗೆ ತಕ್ಕಂತೆ ಶಾಲಾಕಟ್ಟಡವು 5 ಅಥವಾ 6 ಕೊಠಡಿಗಳನ್ನು ಮಾತ್ರ ಹೊಂದಿತ್ತು. ದಿನಕ್ರಮೇಣ ಶಾಲಾಮಕ್ಕಳ ಸಂಖ್ಯೆ ಹೆಚ್ಚುತ್ತಾ ಬರಲು ಶಿಕ್ಷಕರ ಜೊತೆಗೆ ಕೊಠಡಿಗಳ ಅವಶ್ಯಕತೆಯೂ ಹೆಚ್ಚುತ್ತಾ ಬಂದಿತು. ಇದನ್ನು ಮನಗಂಡ ಹುಲ್ಲಹಳ್ಳಿಯ ದಾನಶೀಲರು ಮಕ್ಕಳವಿದ್ಯಾಸೌಕರ್ಯ ಕ್ಕಾಗಿ ತಮ್ಮ ತಮ್ಮ ಹೆಸರಿನಲ್ಲಿ ಒಂದೊಂದು ಕೊಠಡಿಯನ್ನು ಕಟ್ಟಿಸಿ ಕೊಡಲು ಮುಂದೆ ಬಂದರು. ಅಂದು ಅವರುಗಳು ನೀಡಿದ ಹಣ ಸಹಾ ಯವು ಅಲ್ಪವಾದರೂ, ಇಂದು ದಾನಿಗಳು ಕಟ್ಟಿಸಿಕೊಟ್ಟ ಕೊಠಡಿಯಲ್ಲಿ ಕುಳಿತು ವಿದ್ಯಾಭ್ಯಾಸ ಮಾಡಿದ ಮಕ್ಕಳು ಸಹಸ್ರಾರು. ಹುಲ್ಲಹಳ್ಳಿಯು ಒಂದು ವಿದ್ಯಾಕೇಂದ್ರವಾಗಿ ಬೆಳೆಯಲು ತುಂಬಾ ಸಹಾಯಕವಾಗಿದೆ. ಇಂತಹ ಶಾಲಾ ಕಟ್ಟಡದ ಕೊಠಡಿಗಳ ನಿರ್ಮಾಣಕ್ಕೆ ಕಾರಣಕರ್ತರಾದ ದಾನಿಗಳನ್ನು ಸ್ಮರಿಸಿಕೊಳ್ಳುವುದು ಸುಸಂಸ್ಕೃತರ ಲಕ್ಷಣ.

1. ದಿವಂಗತ ದೊಡ್ಡಪ್ಪಯ್ಯನವರ ಕುಟುಂಬ ಶ್ರೀಮತಿ ಗೌರಮ್ಮ ಮತ್ತು ಹುಲ್ಲಹಳ್ಳಿ ಶಿವರುದ್ರಪ್ಪನವರ ತಾಯಿ ದಿವಂಗತ ಶ್ರೀಮತಿ ಪುಟ್ಟ ವೀರಮ್ಮ–ಇವರುಗಳು ತಲಾ ರೂ. 1000 (ಒಂದು ಸಾವಿರ ರೂಪಾಯಿ ಗಳು) ಉದಾರ ಧನಸಹಾಯ ನೀಡಿ ಒಂದೊಂದು ಕೊಠಡಿಯ ನಿರ್ಮಾ ಣಕ್ಕೆ ಕಾರಣರಾಗಿದ್ದಾರೆ.

2. ಹುಲ್ಲಹಳ್ಳಿಯ ಶ್ರೀಮತಿ ಪುಟ್ಟತಾಯಮ್ಮ ಶ್ರೀ ಕೆ. ಸಿ. ವೀರಭದ್ರಪ್ಪನವರು ಧರ್ಮಾರ್ಥವಾಗಿ ರೂ 3,000 (ಮೂರು ಸಾವಿರ ರೂಪಾಯಿಗಳು) ನೀಡಿ ಒಂದು ಕೊಠಡಿಯನ್ನು ನಿರ್ಮಿಸಿಕೊಟ್ಟಿದ್ದಾರೆ.

3. ಶ್ರೀ ಹೆಚ್. ಎಸ್. ನಂಜುಂಡಪ್ಪ, ಎಸ್ಸೋ ಡೀಲರ್, ಮೈಸೂರು ಇವರು ಹೆಣ್ಣುಮಕ್ಕಳ ಶಾಲಾ ಕೊಠಡಿಗಾಗಿ ರೂ. 1,050 (ಒಂದು ಸಾವಿರದ ಐವತ್ತು ರೂಪಾಯಿಗಳು) ದಾನವಾಗಿ ನೀಡಿದ್ದಾರೆ.

4. ಶ್ರೀಮತಿ ಸರ್ವಮಂಗಳಮ್ಮ ಬಿ. ಕೆ. ರಾಜಶೇಖರಪ್ಪ,

ಮೈಸೂರು, ಇವರೂ ಸಹ ಹೆಣ್ಣುಮಕ್ಕಳ ಶಾಲಾ ಕೊಠಡಿಯ ನಿರ್ಮಾಣ ಕ್ಕಾಗಿ ರೂ. 1050 (ಒಂದು ಸಾವಿರದ ಐವತ್ತು ರೂಪಾಯಿಗಳು) ದಾನ ವಾಗಿ ನೀಡಿದ್ದಾರೆ.

5. ಪಿ. ಡಬ್ಲ್ಯು. ಡಿ. ಕಂಟ್ರಾಕ್ಟರೂ, ಹಲವು ಕಟ್ಟಡಗಳ ನಿರ್ಮಾಪಕರೂ, ಎಲ್. ಐ ಸಿ. ಏಜೆಂಟರೂ ಆದ ಶ್ರೀ ಡಿ. ಮಾದೇಗೌಡರು ಹನ್ನೊಂದು ಸಾವಿರದ ಐದುನೂರು (ರೂ. 11,500) ರೂಪಾಯಿಗಳನ್ನು ದಾನವಾಗಿ ನೀಡಿ ಪ್ರಾಥಮಿಕ ಶಾಲಾ ಕೊಠಡಿಯೊಂದನ್ನು ನಿರ್ಮಿಸಿ ಕೊಟ್ಟಿರುತ್ತಾರೆ.

## ಶ್ರೀವರದರಾಜಸ್ವಾಮಿ ದೇವಾಲಯದ ಜೀರ್ಣೋದ್ಧಾರದಲ್ಲಿ ಭಾಗವಹಿಸಿದ ದಾನಿಗಳು

1. ಈ ದೇವಾಲಯದ ಸೀತಾರಾಮಲಕ್ಷ್ಮಣ (ಕೋದಂಡರಾಮ) ಗುಡಿಯನ್ನು ಜೀರ್ಣೋದ್ಧಾರ ಮಾಡಿಸಿದವರು ದಿವಂಗತ ಶ್ರೀ ಹೆಚ್. ಎನ್. ಕೃಷ್ಣಪ್ಪನವರ ಧರ್ಮಪತ್ನಿ ಲಕ್ಷ್ಮೀದೇವಮ್ಮನವರು.

2. ಯಾಗ ಮಂಟಪವನ್ನು ರಿಪೇರಿ ಮಾಡಿಸಿದವರು ದುಗ್ಗಹಳ್ಳಿಯ ಶ್ರೀ ವರದಪ್ಪನವರು.

3. ಕೊಳಲು ಗೋಪಾಲಸ್ವಾಮಿಯ ಗರ್ಭಾಂಕಣವನ್ನು ರಿಪೇರಿ ಮಾಡಿಸಿದವರು ಸ್ವಾಮಿನಾಯ್ಕ ಅವರು.

4. ಶ್ರೀ ವರದರಾಜ ದೇವಾಲಯದ ಮೇಲೆ ಹತ್ತುವಂತಹ ಹಂತ ಗಳನ್ನು ಕಟ್ಟಿಸಿಕೊಟ್ಟವರು ಉಪಾಧ್ಯಾಯರಾದ ಶ್ರೀ ಎನ್.ವಿ. ನಂಜುಂಡ ಸ್ವಾಮಿಯವರು.

5. ಆಳ್ವಾರರ ಗುಡಿಯನ್ನು ರಿಪೇರಿ ಮಾಡಿಸಿದವರು ಶ್ರೀ ಕೆಂಚ ನಾಯ್ಕರು.

6. ಕಾಳಿಂಗ ಮರ್ಧನ ಮತ್ತು ವೇದಾಂತ ದೇಶಿಕರ್ ಗುಡಿಗಳನ್ನು ರಿಪೇರಿ ಮಾಡಿಸಿದವರು ಶ್ರೀ ತೊಪ್ಪೆ ಮರಿಲಿಂಗನಾಯ್ಕರು.

7. ಲಕ್ಷ್ಮೀದೇವಿ ಅಮ್ಮನವರ ಸನ್ನಿಧಿಯನ್ನು ರಿಪೇರಿ ಮಾಡಿಸಿ ದವರು ಗ್ರಾಮದ ಉಪಾಧ್ಯಕ್ಷರಾಗಿದ್ದ ಶ್ರೀ ನಂಜುಂಡನಾಯ್ಕರು.

8. ಲಕ್ಷ್ಮೀನಾರಾಯಣಸ್ವಾಮಿಯ ಸನ್ನಿಧಿಯನ್ನು ರಿಪೇರಿ ಮಾಡಿ

ಸಿದವರು ಹುಲ್ಲಹಳ್ಳಿಯಲ್ಲಿ ಇಂಜಿನಿಯರ್ ಆಗಿದ್ದ ಶ್ರೀ ಅಶ್ವತ್ಥನಾರಾಯಣ ಶಾಸ್ತ್ರಿಗಳು.

9. ದೇವಾಲಯದ ಪ್ರವೇಶದ್ವಾರದ ಬಲಭಾಗದ ಒಂದು ಅಂಕಣ ಜಗಲಿಯನ್ನು ರಿಪೇರಿ ಮಾಡಿಸಿದವರು ಛೇರ್ಮನ್ ಹೆಚ್. ಎಸ್. ಶಿವ ನಾಗಪ್ಪನವರು.

10. ಪ್ರವೇಶದ್ವಾರದ ಎಡಭಾಗದ ಒಂದು ಅಂಕಣ ಜಗಲಿಯನ್ನು ರಿಪೇರಿ ಮಾಡಿಸಿದವರು ಕಣೇನೂರು ಛೇರ್ಮನ್ ಸುಬ್ಬಣ್ಣನವರು.

11. ನರಸಿಂಹಸ್ವಾಮಿ ಸನ್ನಿಧಿಯನ್ನು ರಿಪೇರಿ ಮಾಡಿಸಿದವರು ದಿವಂಗತ ಶ್ರೀ ಹೆಚ್. ಜಿ. ಕೃಷ್ಣಸ್ವಾಮಿಯವರು.

12. ಆಳ್ವಾರರ ಗುಡಿಯನ್ನು ರಿಪೇರಿ ಮಾಡಿಸಿದವರು ಶ್ರೀ ನಾರಾಯಣಶೆಟ್ಟಿ (ಮರಿಯಪ್ಪ) ಅವರು.

13. ನರಸಿಂಹಸ್ವಾಮಿ ಗುಡಿಯ ಹೊರಾಂಗಣವನ್ನು ರಿಪೇರಿ ಮಾಡಿಸಿದವರು ದಿವಂಗತ ಶ್ಯಾನುಭೋಗ್ ಸದಾಶಿವರಾಯರು.

14. ಓಲಗದ ಜಗಲಿಯನ್ನು ರಿಪೇರಿ ಮಾಡಿಸಿದವರು ಕರಿನಾಯ್ಕನ ನಾಟಿ ಜನರ ಸಮೂಹ.

15. ಬೃಂದಾವನ ಮತ್ತು ಅದರ ಮಂಟಪದ ರಿಪೇರಿ ಮಾಡಿಸಿದವರು ಡಾ. ದ್ವಾರಕಾನಾಥ್.

16. ದೇವಾಲಯಕ್ಕೆ ವಿದ್ಯುದ್ದೀಪ ಒದಗಿಸಿಕೊಟ್ಟವರು ಶೇಖರಪ್ಪ ಮತ್ತು ಅವರ ಮಗ ಅಂಗಡಿ ನಂಜುಂಡಸ್ವಾಮಿಯವರು.

17. ಶ್ರೀವರದರಾಜಸ್ವಾಮಿ ಗರ್ಭಗುಡಿಯ ಸುತ್ತ ವರಾಂಡದ ರಿಪೇರಿ ಮತ್ತು ದೇವಾಲಯದ ಮುಖ್ಯದ್ವಾರದ ಬೃಹತ್ ಬಾಗಿಲಿಗಾಗಿ ತೇಗದ ಮರದ ಹಲಗೆ ಮತ್ತು ಪಟ್ಟಿಗಳನ್ನು ಒದಗಿಸಿಕೊಟ್ಟವರು ಹುಲ್ಲು ಮನೆ ರಾಮೇಗೌಡನ ಮಗ ವೆಂಕಟೇಗೌಡರು.

18. ದೇವಾಲಯದ ಮಜ್ಜನ ಭಾವಿಯ ರಿಪೇರಿ ಶ್ರೀ ಚಂದ್ರಶೇಖರಪ್ಪನವರು.

19. ಶ್ರೀ ವರದರಾಜಸ್ವಾಮಿ ದೇವರಿಗೆ ಪ್ರಭಾವಳಿ (ಕಲಾತ್ಮಕ ಪ್ಲೇವುಡ್)ಯನ್ನು ಮಾಡಿಸಿಕೊಟ್ಟವರು ದಿವಂಗತ ನಿವೃತ್ತ ಉಪಾಧ್ಯಾಯರಾದ ಶ್ರೀ ಹೆಚ್. ಎಸ್. ಭೀಮರಾವ್ ಅವರು.

20. ಶ್ರೀವರದರಾಜಸ್ವಾಮಿಯವರ ಗೋಪುರವನ್ನು ರಿಪೇರಿ ಮಾಡಿ

ಸಿದವರು ಮೈಸೂರಿನ ಶ್ರೀಮತಿ ಮತ್ತು ಶ್ರೀ ಬಿ. ಎಸ್. ಶಿವಪ್ಪನವರು.

21. ನರಸಿಂಹಸ್ವಾಮಿ ದೇವರ ಗೋಪುರವನ್ನು ರಿಪೇರಿ ಮಾಡಿಸಿದವರು ಕಂಟ್ರಾಕ್ಟರ್ ಚೆನ್ನಮ್ಮನವರು.

22. ಲಕ್ಷ್ಮೀ ಅಮ್ಮನವರ ಗೋಪುರವನ್ನು ರಿಪೇರಿ ಮಾಡಿಸಿದವರು ಮಾಜಿ ಪಟೇಲ್ ಹೆಚ್. ಟಿ. ಪುಟ್ಟಯ್ಯನವರು.

23. ವರದರಾಜಸ್ವಾಮಿ, ಲಕ್ಷ್ಮೀ ಅಮ್ಮನವರು ಮತ್ತು ನರಸಿಂಹ ಸ್ವಾಮಿ ದೇವರುಗಳಿಗೆ ಒಂದೊಂದು ಸರ್ಚ್‌ಲೈಟ್ ಒದಗಿಸಿದವರು, ರಂಗಣ್ಣನ ಮಗ ದಿವಂಗತ ನಾಗೇಶ್‌ರಾವ್, ಎಲೆಕ್ಟ್ರಿಕಲ್ ಇಂಜಿನಿಯರ್ ಕೃಷ್ಣಪ್ಪನವರ ಮಗ ಹೆಚ್. ಕೆ. ನಾಗರಾಜ ಮತ್ತು ಶ್ರೀಮತಿ ಗೌರಮ್ಮ ಎಂ. ಜಿ. ಪುಟ್ಟಸ್ವಾಮಯ್ಯ, ಮೈಸೂರು ಇವರುಗಳು.

24. ಪ್ರಮೀಳಾಂಬಿಕೆ ಸೋಮಸುಂದರ್, ಬೆಂಗಳೂರು ಮತ್ತು ಕಮಲಮ್ಮ ಕೆಂಪೇಗೌಡ, ಜ್ಯೂನಿಯರ್ ಇಂಜಿನಿಯರ್ ಇವರುಗಳು ಒಂದೊಂದು ಟ್ಯೂಬ್‌ಲೈಟ್ ಒದಗಿಸಿದ್ದಾರೆ.

25. ಮೇಲುಕೋಟೆ ವರದಶೆಟ್ಟಿ ಮತ್ತು ನಿಂಗನಾಯ್ಕನ ಕೂಯಿಲ್ಲ ನವರು ಒಂದೊಂದು ಕಂಚಿನ ಘಂಟೆಯನ್ನು ಒದಗಿಸಿದ್ದಾರೆ.

26. ಶ್ರೀಮತಿ ಎಂ. ಜಿ. ಪುಟ್ಟಸ್ವಾಮಯ್ಯ ಮತ್ತು ಮಕ್ಕಳು ದೇವಾಲಯಕ್ಕೆ ಸುಭದ್ರವಾದ ಕಬ್ಬಿಣದ ಗೇಟನ್ನು ಮಾಡಿಸಿರುತ್ತಾರೆ.

### ಇತರೇ ದೇವಾಲಯಗಳಿಗೆ ಸಹಕರಿಸಿದ ದಾನಿಗಳು

27. ಭಾವಿಹಟ್ಟಿ ಸುಬ್ಬಣ್ಣನವರ ಧರ್ಮಪತ್ನಿ ಶ್ರೀಮತಿ ಪುಟ್ಟಮ್ಮ ನವರು, ಭಿಕ್ಷದ ಮಠ ಮತ್ತು ಪ್ರಸನ್ನ ಗಣಪತಿ ಗುಡಿಗೆ ವಿದ್ಯುದ್ದೀಪವನ್ನು ಹಾಕಿಸಿರುತ್ತಾರೆ.

28. ಪೂಜ್ಯ ಜ. ಚ. ನಿ. ಮಹಾಸನ್ನಿಧಿಯವರಿಂದ 'ಸಮಾಜ ಸೇವಾ ಧುರೀಣ' ಎಂಬ ಬಿರುದನ್ನು ಪಡೆದ ಮತ್ತು ಮೈಸೂರಿನ 'ಶರಣ ಮಂಡಲಿ ಸಂಗಪ್ಪನೆಂದು ಪ್ರಸಿದ್ಧರಾಗಿರುವ ಮೈಸೂರು ನಿವಾಸಿಯಾದ ಹುಲ್ಲಹಳ್ಳಿಯ ಹೆಚ್. ಸಿ. ಸಂಗಪ್ಪನವರು ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಾಲಯದ ಮೂಲದೇವರಿಗೆ 'ಬೆಳ್ಳಿ ನಾಗಾಭರಣವುಳ್ಳ ಕೊಳಗ'ವನ್ನು ಧಾರಣೆ ಮಾಡಿಸಿರುತ್ತಾರೆ.

29. ಆಂಜನೇಯ ಸ್ವಾಮಿ ದೇಗುಲದ ಕಾಂಪೌಂಡಿಗೆ ಕಬ್ಬಿಣದ

ಗೇಟನ್ನು ದಿವಂಗತ ಅಂಗಡಿ ಕಾಳಮಾದಪ್ಪನವರು ಹಾಕಿಸಿರುತ್ತಾರೆ.

30. ಕನ್ನಿಕಾ ಸತ್ಯನಾರಾಯಣ್, ಹೆಚ್. ಡಿ. ಕೋಟೆ ಇವರು ಆಂಜನೇಯ ದೇವಾಲಯಕ್ಕೆ ಪಂಚಲೋಹದ ತೂಗುದೀಪವನ್ನು ಕೊಟ್ಟಿರುತ್ತಾರೆ.

ಮೇಲ್ಕಂಡ ದಾನಿಗಳಲ್ಲದೆ ಇನ್ನೂ ಹಲವಾರು ಸಹೃದಯರು ವಿವಿಧ ದೇವಾಲಯಗಳ ಜೀರ್ಣೋದ್ಧಾರ ಕಾರ್ಯದಲ್ಲಿ, ಹಣ ನೀಡುವುದರ ಮೂಲಕ, ದೈಹಿಕ ಶ್ರಮವನ್ನು ಒದಗಿಸುವುದರ ಮೂಲಕ (ಮುಖ್ಯವಾಗಿ ಗಾರೆ ಕೆಲಸದ ಮೇಲುಸ್ವಾಮಿ) ಸಹಕರಿಸಿರುತ್ತಾರೆ. ಎಲ್ಲರನ್ನೂ ಹೆಸರಿಸಲು ಇಲ್ಲಿ ಸಾಧ್ಯವಾಗಿಲ್ಲ ಎಂಬುದನ್ನು ಓದುಗರ ಗಮನಕ್ಕೆ ಈ ಮೂಲಕ ತಿಳಿಸಲಾಗಿದೆ.

ಹುಲ್ಲಹಳ್ಳಿಯ ಅರಮನೆ ಇದ್ದಿತೆನ್ನಲಾದ ಗುಡ್ಡದ ಪ್ರದೇಶದಲ್ಲಿ ನಿರ್ಮಿಸಿರುವ
ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ



ಹುಲ್ಲಹಳ್ಳಿಗ್ರಾಮದ ಪಂಚಾ
ಯತ್‌ನ ಮೊದಲ ಅಧ್ಯಕ್ಷರು
ಶ್ರೀ ವೆಂಕಟಸುಬ್ಬಾಪಂಡಿತರು



ಹುಲ್ಲಹಳ್ಳಿ ಗ್ರಾಮ ಪಂಚಾಯತ್‌ನ
ಎರಡನೆಯ ಅಧ್ಯಕ್ಷರು
ಶ್ರೀ ಶ್ರೀಕಂಠಜೋಯಿಸರು



ಹುಲ್ಲಹಳ್ಳಿಗ್ರಾಮ ಪಂಚಾಯತಿ ನ
ಮೂರನೆಯ ಅಧ್ಯಕ್ಷರು
ಶ್ರೀ ಹೆಚ್. ಎಸ್. ಶಿವನಾಗಪ್ಪನವರು



ಹುಲ್ಲಹಳ್ಳಿ ಮಂಡಲ ಪಂಚಾಯಿತ್ತಿಯ
ಮೊದಲ ಪ್ರಧಾನರು
ಶ್ರೀ ಕೃಷ್ಣನಾಯಕ ಅವರು



ಹುಲ್ಲಹಳ್ಳಿ ಮಂಡಲ ಪಂಚಾಯಿತ್ತಿಯ
ಮೊದಲ ಉಪ ಪ್ರಧಾನರು
ಶ್ರೀ ಹೆಚ್. ಡಿ. ಪಾಪಣ್ಣನವರು



ಹುಲ್ಲಹಳ್ಳಿ ಜಿಲ್ಲಾ ಪರಿಷತ್‌ನ ಮೊದಲ
ಮಹಿಳಾ ಸದಸ್ಯೆ ಡಾ. ಶೈಲಾಬಾಲರಾಜ್
ಅವರು

# 6. ಹುಲ್ಲಹಳ್ಳಿಯ ಆಡಳಿತ

ಮೌರ್ಯರು, ಶಾತವಾಹನರು ಕ್ರಿಸ್ತಪೂರ್ವದಲ್ಲೂ ; ಕದಂಬರು, ಗಂಗರು, ಚೋಳರು, ಹೊಯ್ಸಳರೂ, ವಿಜಯನಗರದ ಅರಸರು ಹಾಗೂ ಮೈಸೂರಿನ ಒಡೆಯರು ಕ್ರಿಸ್ತಶಕದಲ್ಲೂ ನಮ್ಮ ಚೆಲುವ ಕನ್ನಡನಾಡನ್ನು ಆಳಿದಂಥ ಪ್ರಸಿದ್ಧ ರಾಜವಂಶಗಳು.

ಈ ರಾಜವಂಶಗಳು ತಮ್ಮ ಆಡಳಿತದ ಅವಧಿಯಲ್ಲಿ ಕನ್ನಡನಾಡಿನ ಕೀರ್ತಿಪತಾಕೆಯನ್ನು ಭರತಖಂಡದಲ್ಲಿ ಮಾತ್ರವಲ್ಲದೆ ಸಾಗರದಾಚೆಯ ರಾಷ್ಟ್ರಗಳಲ್ಲೂ ಹಾರಿಸಿದ್ದುವು. ಇಂತಹ ರಾಜವಂಶಗಳ ಆಡಳಿತದ ಪ್ರಭಾವಲಯದಲ್ಲಿ ಬೆಳಗುತ್ತ ಬಂದ ಹುಲ್ಲಹಳ್ಳಿಯು ರಾಜಪ್ರತಿನಿಧಿಗಳ ಮೂಲಕವೋ ಅಥವಾ ಪಾಳೆಯಗಾರರ ಮೂಲಕವೋ ವ್ಯವಸ್ಥಿತ ಆಳ್ವಿಕೆಯನ್ನು ಕಂಡು ಕರ್ನಾಟಕದ ಚರಿತ್ರೆಯಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದಿತು, ಎಂಬುದು ಹುಲ್ಲಹಳ್ಳಿಯಲ್ಲಿ ದೊರೆತಿರುವ ತಾಮ್ರ ಮತ್ತು ಶಿಲಾಶಾಸನಾಧಾರಗಳಿಂದ ತಿಳಿದುಬರುತ್ತದೆ.

1981ರಲ್ಲಿ ಹುಲ್ಲಹಳ್ಳಿಯಲ್ಲಿ ದೊರೆತ ತಾಮ್ರಶಾಸನವೊಂದು, ಕ್ರಿ. ಶ. 7ನೇ ಶತಮಾನದಲ್ಲಿದ್ದ ತಲಕಾಡು ಗಂಗರ ಶಾಖೆಗೆ ಸೇರಿದ ಮುಷ್ಕರ ಮಹಾರಾಜನು ಬರೆಸಿದ್ದು ಎಂದು ತಿಳಿದುಬರುತ್ತದೆ. 'ಕಿರು ಮೊರೆ ಕೊಳಿ' ಎಂಬ ಗ್ರಾಮವನ್ನು ಕುಂಭಶರ್ಮಣ ಎಂಬ ಬ್ರಾಹ್ಮಣನಿಗೆ ದಾನಕೊಟ್ಟ ವಿಷಯವು ಈ ತಾಮ್ರಶಾಸನದಲ್ಲಿದೆ. 'ಕಿರು ಮೊರೆ ಕೊಳಿ' ಎಂಬುದು ಹುಲ್ಲಹಳ್ಳಿಯ ಹಿಂದಿನ ಹೆಸರೇ ? ಅಥವಾ ಹುಲ್ಲಹಳ್ಳಿಯ ಬಳಿ ಈ ಗ್ರಾಮವಿತ್ತೆ ಎಂಬುದು ಸಂದೇಹಾಸ್ಪದವಾಗಿರುವುದರಿಂದ ಈ ತಾಮ್ರಶಾಸನವು ಹುಲ್ಲಹಳ್ಳಿಯ ಬಗ್ಗೆ ಯಾವ ಮಾಹಿತಿಯನ್ನೂ ಒದಗಿಸುವುದಿಲ್ಲವಾದರೂ ನಮ್ಮ ಕನ್ನಡನಾಡಿನ ಇತಿಹಾಸದ ಬಗ್ಗೆ ಹೊಸ ಬೆಳಕನ್ನು ನೀಡಿದೆ ಎಂಬುದರಲ್ಲಿ ಸಂದೇಹವಿಲ್ಲ. (ಈ ತಾಮ್ರಶಾಸನದ ಪೂರ್ಣಪಾಠವನ್ನು ಮುಂದೆ ಕೊಡಲಾಗಿದೆ) ಹುಲ್ಲಹಳ್ಳಿಯ ಬಗ್ಗೆ ಅರಿಯಲು ಇಲ್ಲಿನ ಶಿಲಾಶಾಸನಗಳೇ ಪ್ರಮುಖ ಆಧಾರಗಳು.

ಕ್ರಿ.ಶ. 1332ರಲ್ಲಿ ರಚಿತವಾದ ಹುಲ್ಲಹಳ್ಳಿಯ–(ಶಾಸನ ಸಂ. 138 ರಲ್ಲಿ) 'ಹುಲ್ಲನ ಹಳ್ಳಿಯ ನಾಡಿನೊಳಗಾದ' ಎಂದೂ, ಕ್ರಿ ಶ. 1372ರಲ್ಲಿ

ರಚಿತವಾದ ಗುಂಡ್ಲಪೇಟೆ (ಶಾಸನ ಸಂ. 17) ಮತ್ತು ತೆರಕಣಾಂಬಿ ಶಾಸನ (ಸಂ. 113) ಗಳಲ್ಲಿ 'ಹುಲ್ಲನ ಹಳ್ಳಿಯ ಸ್ಥಳ' ಎಂಬುದಾಗಿಯೂ ಸೂಚಿತ ವಾಗಿದೆ. ಈ ನಾಡು, ಸ್ಥಳ ಎಂಬ ನಾಮ ಸೂಚಿಗಳು ಹುಲ್ಲಹಳ್ಳಿಯ ಅಂದಿನ ಸ್ಥಾನವನ್ನು ತಿಳಿಸುತ್ತವೆ.

ವಿಜಯನಗರ ಚಕ್ರವರ್ತಿಯಾದ ಒಂದನೇ ಹರಿಹರನು ತನ್ನ ಸಾಮ್ರಾಜ್ಯವನ್ನು ಗ್ರಾಮ, ಸ್ಥಳ ಮತ್ತು ನಾಡು ಎಂಬ ಘಟಕಗಳನ್ನಾಗಿ ಮಾಡಿ ಆಡಳಿತವನ್ನು ನಡೆಸುತ್ತಿದ್ದನು.

ಸಣ್ಣದಾದ ಹಳ್ಳಿಗಳನ್ನು ಗ್ರಾಮವೆಂದೂ, ಇಪ್ಪತ್ತು ಮೂವತ್ತು ಗ್ರಾಮಗಳನ್ನು ಒಳಗೊಂಡದ್ದು ಸ್ಥಳವೆಂದೂ ಮತ್ತು ಇವುಗಳಿಗಿಂತಲೂ ದೊಡ್ಡದಾದ ಘಟಕವನ್ನು ನಾಡು ಎಂದೂ ಕರೆಯುತ್ತಿದ್ದರು.

ಸಣ್ಣ ಘಟಕವಾದ ಗ್ರಾಮಗಳಿಗೆ ಶಾನುಭೋಗರೂ, ಸ್ಥಳಗಳಿಗೆ ಸ್ಥಳಕರ್ಮಣರೂ ಮತ್ತು ನಾಡುಗಳಿಗೆ ನಾಡಗಂಡರೂ ಅಧಿಕಾರಿಗಳಾಗಿರು ತ್ತಿದ್ದರು.

ಕ್ರಿ.ಶ. 1332ಕ್ಕಿಂತ ಹಿಂದೆ ಹುಲ್ಲಹಳ್ಳಿಯು 'ನಾಡು' ಎಂಬ ಹೆಸ ರಿನ ದೊಡ್ಡ ಆಡಳಿತ ಘಟಕವಾಗಿ ಪ್ರಸಿದ್ಧಿಯನ್ನು ಹೊಂದಿದ್ದಿತು ಎಂದು ತಿಳಿದುಬರುತ್ತದೆ. 'ಹುಲ್ಲನಹಳ್ಳಿ' ಎಂದೂ ಶಾಸನದಲ್ಲಿ ಉಕ್ತವಾಗಿರುವುದ ರಿಂದ ಬಹಳಕಾಲದ ಹಿಂದೆ ಇದು ಒಂದು ಹಳ್ಳಿಯಾಗಿದ್ದು, ಸ್ಥಳವಾಗಿ ನಂತರ ನಾಡಾಗಿ, ಮುಂದಿನ ದಿನಗಳಲ್ಲಿ ಮತ್ತೆ ಸ್ಥಳ ಹಳ್ಳಿಯಾಗಿ ಏರಿಳಿತ ಗಳ ಉಯ್ಯಾಲೆಯಲ್ಲಿ ಸಾಗುತ್ತಾ ಬಂದಿದೆ.

ಸಮಸ್ತ ಭುವನಾಶ್ರಯಂ, ಶ್ರೀ ಪೃಥ್ವೀವಲ್ಲಭಂ, ಮಹಾರಾಜಾಧಿ ರಾಜ ರಾಜಪರಮೇಶ್ವರಂ, ದ್ವಾರಾವತೀಪುರವರಾಧೀಶ್ವರಂ, ಶ್ರೀ ವಿಷ್ಣು ವರ್ಧನ ಚಕ್ರವರ್ತಿ, ಯಾದವ ಕುಲಾಂಬರದ್ಯುಮಣಿ, ಸತ್ಯಚೂಡಾಮಣಿ ಮಲೆರಾಜ, ರಾಜಮಲೆಪರೊಳುಗಂಡ, ರಾಯಭೇರುಂಡ, ಶಸಿವಾರಸಿದ್ಧಿ, ಗಿರಿದುರ್ಗಮಲ್ಲ, ಕದನಪ್ರಚಂಡ, ಏಕಾಂಗವೀರ, ಅಸಹಾಯಶೂರ, ಶರಣಾಗತ ವಜ್ರಪಂಜರ, ವಾಸಂತಿಕಾದೇವಿ ಲಬ್ಧವರಪ್ರಸಾದ, ಹೊಯ್ಸಳ ಭುಜಬಲ ನಿಸ್ಸಂಕ ಪ್ರತಾಪ, ಚಕ್ರವರ್ತಿ ವೀರಬಲ್ಲಾಳ ದೇವರಸನೆಂದು ಸುಪ್ರಸಿದ್ಧನಾಗಿದ್ದ ಹೊಯ್ಸಳ ಸಾಮ್ರಾಜ್ಯದ ಮೂರನೇ ವೀರಬಲ್ಲಾಳನ ಆಳ್ವಿಕೆಯಲ್ಲಿ ಸೇನಾಧಿಪತಿಯಾಗಿದ್ದ ಶ್ರೀ ಮಾಧವ ದಣ್ಣಾಯಕನ ಮಗ ನಾದ ಶ್ರೀ ವೀರಕೇತಯ ದಣ್ಣಾಯಕನು ತೆರಕಣಾಂಬಿಯಿಂದ 'ಹುಲ್ಲ

ಹಳ್ಳಿಯ ನಾಡ'ನ್ನು ಕ್ರಿ.ಶ. 14ನೇ ಶತಮಾನದ ಪ್ರಾರಂಭದಲ್ಲಿ ಆಳು ತ್ತಿದ್ದನು.

ಈತನು ಹುಲ್ಲಹಳ್ಳಿಯ ನಾಡನ್ನೊಳಗೊಂಡಂತೆ ಹದಿನಾಲ್ಕು ನಾಡು ಗಳನ್ನು ಹೊಂದಿದ್ದನು. ಇಂತಹ ಪ್ರಬಲನಾದ ಸೇನಾಧಿಪತಿಯು ಪ್ರಚಂಡ ದೋರ್ದ್ದಂಡ, ಇಮ್ಮಡಿ ರಾವುತರವ, ನೀಲಗಿರಿ ಸಾಧರ, ಗಿರಿದುರ್ಗ ಮಲ್ಲ, ಜಲದುರ್ಗ ಮಂಡಳಿಕ ಹೃದಯಶಲ್ಯ, ಹೊಯಿಸಳ ರಾಜ್ಯಲಕ್ಷ್ಮೀ ಪ್ರಾಕಾರ, ಅಭಿನವ ಮದನಾವತಾರ, ಪಾಂಡ್ಯಕುಳ ಕಮಲವನ ಕುಂಜರ ವೈರಿ ಮಂಡಳಿಕ ಸಂಗ್ರಮರಮ, ಅರಸುಗಂಡ, ಕೀತರ್ಯ್ಯಂಗನಾ ವಲ್ಲಭ, ಧೃಷ್ಟಜನ ದುರ್ಲಭ, ಅಲ್ಲಾಳನಾಥ ದಿವ್ಯಶ್ರೀಪಾದ ಪದ್ಮಾರಾಧಕ, ಏಕಾದಶೀವ್ರತನಿರತ, ಗೋಬ್ರಾಹ್ಮಣಪ್ರಿಯ, ಪರನಾರೀ ಸಹೋದರ ಮತ್ತು ಸ್ವಸ್ತಿಪುರವರಾಧೀಶ್ವರ ಎಂಬ ಬಿರುದಾವಳಿಗಳನ್ನೇ ಹೊಂದಿದ್ದನು.

ಶ್ರೀ ವೀರಕೇತಯ ದಣ್ಣಾಯಕನು ತನ್ನ ನಾಡುಗಳಲ್ಲಿ ಸಾಮ್ರಾಜ್ಯದ ರಕ್ಷಣೆಗಾಗಿ ಸೈನ್ಯವನ್ನು ಸಂಗ್ರಹಿಸುತ್ತಿದ್ದನು. ಈ ಸೈನ್ಯವು ನಾಡುಗಳ ಅಭಿವೃದ್ಧಿ ಕಾರ್ಯದಲ್ಲೂ ಮತ್ತು ತನ್ನ ಚಕ್ರವರ್ತಿಯು ಶತ್ರು ರಾಜ ರೊಡನೆ ಯುದ್ಧವನ್ನು ಹೂಡಿದಾಗ ಅವನಿಗೆ ಸಹಾಯಕವಾಗಿಯೂ ಭಾಗವಹಿಸುತ್ತಿತ್ತು.

ಮೂರನೇ ವೀರಬಲ್ಲಾಳನು ಕ್ರಿ.ಶ. 1291 ರಿಂದ 1343 ರವರೆಗೂ ರಾಜ್ಯಭಾರವನ್ನು ನಡೆಸಿದನು. ಇವನ ರಾಜ್ಯವು ತುಂಗಭದ್ರೆಯಿಂದ ಕಾವೇರಿಯವರೆಗೆ ಹಬ್ಬಿತ್ತು. ಪೂರ್ವ ಪಶ್ಚಿಮಗಳಲ್ಲಿ ಸಮುದ್ರಗಳು ಗಡಿ ಯಾಗಿದ್ದವು. ಬಲ್ಲಾಳನು ತನ್ನ ರಾಜ್ಯವನ್ನು ಉತ್ತರದಲ್ಲಿ ಲಕ್ಕುಂಡಿ ಮತ್ತು ಬಂಕಾಪುರ, ಮಧ್ಯದಲ್ಲಿ ದ್ವಾರ ಸಮುದ್ರ, ದಕ್ಷಿಣದಲ್ಲಿ ತಿರುವಣ್ಣಾ ಮಲೆ ಮತ್ತು ಕಣ್ಣಾನೂರು ಎಂಬ ಐದು ರಾಜಧಾನಿಗಳ ಮೂಲಕ ಆಳುತ್ತಿದ್ದನು. ಬಲ್ಲಾಳನು ಪಾಂಡ್ಯರನ್ನು ಸೋಲಿಸಿ ಕಂಚಿ ಮತ್ತು ತೊಂಡೈ ಮಂಡಲವನ್ನೂ ಪಡೆದಿದ್ದನು. ಈ ಸಂದರ್ಭದಲ್ಲಿ ಪಾಂಡ್ಯರನ್ನು ಸೋಲಿಸಲು ಹುಲ್ಲಹಳ್ಳಿ ನಾಡಿನ ಸೈನಿಕರು ಶ್ರೀ ವೀರಕೇತಯ ದಣ್ಣಾಯಕನ ನಾಯಕತ್ವದಲ್ಲಿ ಬಲ್ಲಾಳನಿಗೆ ಸಹಾಯಕರಾಗಿದ್ದರು. ಶ್ರೀ ವೀರಕೇತಯ ದಣ್ಣಾಯಕನು ಬಲ್ಲಾಳನಿಂದ 'ಪಾಂಡ್ಯ ಕುಲ ಕಮಲ ವನ ಕುಂಜರ' ಎಂಬ ಬಿರುದನ್ನು ಪಡೆದನು.

ಕ್ರಿ.ಶ. 1310 ರಲ್ಲಿ ದೆಹಲಿಯ ಸುಲ್ತಾನ ಅಲ್ಲಾ ಉದ್ದೀನ್

ಖಿಲ್ಜಿಯು ತನ್ನ ದಂಡನಾಯಕನಾದ ಮಲ್ಲಿಕಾಫರನನ್ನು ದಾಳಿಮಾಡ ಲೆಂದು ದಕ್ಷಿಣಭಾರತಕ್ಕೆ ಕಳುಹಿಸಿದನು. ಮಲ್ಲಿಕಾಫರನು ದ್ವಾರಸಮುದ್ರ ವನ್ನು ಹಿಡಿಯಲು, ತಿರುವಣ್ಣಾಮಲೆಯಲ್ಲಿದ್ದ ಬಲ್ಲಾಳನು ಅಪರಿಮಿತ ವಾದ ಬಲವನ್ನು ಹೊಂದಿರುವ ಮಲ್ಲಿಕಾಫರನೊಡನೆ ಹೋರಾಡುವುದು ಉಚಿತವಲ್ಲವೆಂದು ಭಾವಿಸಿ ಆತನಿಗೆ ಹೇರಳವಾದ ಹಣವನ್ನೂ ಆನೆ ಮತ್ತು ಕುದುರೆಗಳನ್ನೂ ಕಾಣಿಕೆಯಾಗಿ ಕೊಟ್ಟು ಹಿಂದಿರುಗುವಂತೆ ಮಾಡಿದನು. ಕನ್ನಡಿಗರ ಔದಾರ್ಯ ಮತ್ತು ವಿಶ್ವಾಸವು ದೆಹಲಿಯ ಸುಲ್ತಾನನಿಗೆ ಸಂತೋಷವನ್ನುಂಟುಮಾಡಿದುವು. ನಂತರ ಬಲ್ಲಾಳನು ಹಂಪೆಯಲ್ಲಿ ಮತ್ತೊಂದು ರಾಜಧಾನಿಯನ್ನು ಕಟ್ಟಿದನು. ಮಲ್ಲಿಕಾಫರನು ತನ್ನ ಆಕ್ರಮಣವನ್ನು ಮುಂದುವರಿಸಿ ಮಧುರೆಯನ್ನು ಹಿಡಿದಾಗ, ದೆಹಲಿ ಯಲ್ಲಿ ಖಿಲ್ಜಿ ಸುಲ್ತಾನರು ಅಳಿದು, ತುಘಲಕ್ ಸುಲ್ತಾನರ ಆಳ್ವಿಕೆ ಪ್ರಾರಂಭವಾಯಿತು. ಈ ಸಮಯದಲ್ಲಿ ಬಲ್ಲಾಳನು ಮಧುರೆಯಲ್ಲಿ ಮುಸ್ಲಿಂ ಆಡಳಿತವನ್ನು ಕೊನೆಗಾಣಿಸಲು ಮತ್ತು ಗಂಡಾಂತರವೊದಗಿರುವ ಹಿಂದೂ ಧರ್ಮವನ್ನು ಸಂರಕ್ಷಿಸಲು ದಕ್ಷಿಣದ ಎಲ್ಲಾ ಹಿಂದೂ ರಾಜರು ಗಳನ್ನು, ತನ್ನ ಸಾಮಂತರು ಮತ್ತು ಸೇನಾನಾಯಕರನ್ನೂ ಒತ್ತಟ್ಟಿಗೆ ಕೂಡಿಸಿದನು. ಹೀಗೆ ಒಗ್ಗೂಡಿದ ಸೈನ್ಯದೊಡನೆ ಹೋರಾಡಿ ಮೂರನೇ ವೀರಬಲ್ಲಾಳನು ಮಹಾ ವಿಜಯವನ್ನು ಸಾಧಿಸಿದನು (ಕ್ರಿ.ಶ. 1326ರಲ್ಲಿ).

ಯುದ್ಧ ವಿಜಯಾನಂತರ ವೀರಬಲ್ಲಾಳನು ತನ್ನಯೋಧರಿಗೆ ವೀರೋಚಿತ ಸನ್ಮಾನವನ್ನು ಮಾಡಿದನು. ಯುದ್ಧದಲ್ಲಿ ಮಡಿದವರ ನೆನಪಿಗಾಗಿ ವೀರಗಲ್ಲುಗಳನ್ನು ನೆಡೆಸಿದನು. ಇಂತಹ ವೀರಗಲ್ಲುಗಳು ಹುಲ್ಲ ಹಳ್ಳಿಯಲ್ಲಿ ಇಂದಿಗೂ ಕಾಣಸಿಗುತ್ತವೆ. ಇವುಗಳು ಅಂದಿನ ಹುಲ್ಲಹಳ್ಳಿಯ ಜನತೆಯ ವೀರಶೌರ್ಯಗಳ ಸಂಕೇತವಾಗಿ, ರಾಜಭಕ್ತಿಯ ಅಮೂಲ್ಯ ಕುರುಹಾಗಿ, ನಾಡಿಗಾಗಿ ಪ್ರಾಣಾರ್ಪಣೆ ಮಾಡಿದ ಶ್ರೇಷ್ಠ ನೆನಪಿಗಾಗಿ ಮತ್ತು ಇಂದಿನ ಜನತೆಗೆ ಸ್ಫೂರ್ತಿಯ ಬುಗ್ಗೆಯಾಗಿ ಕಂಗೊಳಿಸುತ್ತಾ ತಲೆಯೆತ್ತಿ ನಿಂತಿವೆ.

ಶ್ರೀ ವೀರಕೇತೆಯ ದಣ್ಣಾಯಕನು ವೀರಬಲ್ಲಾಳನಿಂದ ಹುಲ್ಲ ಹಳ್ಳಿಯ ವರದರಾಜಸ್ವಾಮಿ ದೇವಾಲಯಕ್ಕೆ ಕೇತನ್ಮಾ ಹಳ್ಳಿಯನ್ನು ಧಾರಾಪೂರ್ವಕವಾಗಿ ಕೊಡಿಸಿದನೆಂದು ಶಾಸನವು ತಿಳಿಸುತ್ತದೆ.

ಶ್ರೀ ವೀರಕೇತಯ ದಣ್ಣಾಯಕನ ನಂತರ ಹುಲ್ಲಹಳ್ಳಿಯನ್ನು

ಪೆರ್ಮಾಡಿದೇವರಸ ಮತ್ತು ಪೆರುಮಾಳು ದೇವರಸರೆಂಬ ಸಹೋದರರು ಆಳುತ್ತಿದ್ದರು ಎಂಬುದಾಗಿ ಕ್ರಿ.ಶ. 1337ರ ಕಣೇನೂರು ಶಾಸನ ಮತ್ತು ಕ್ರಿ.ಶ. 1371ರ ಹುಲ್ಲಹಳ್ಳಿ ಶಾಸನಗಳಿಂದ ತಿಳಿದು ಬರುತ್ತದೆ. ಈ ಸಹೋದರರು ಮಾಚಿರಾಜ ಮತ್ತು ಮಾಲಾಂಬಿಕೆಯರ ಮಕ್ಕಳು ಇವರು ಜೈನ ಮತಾವಲಂಬಿಗಳಾಗಿದ್ದು ಶ್ರುತಮುನಿಯನ್ನು ರಾಜಗುರುವಾಗಿ ಪಡೆದಿದ್ದರು. ಈ ಶ್ರುತಮುನಿಯು ಮೂಲ ಸಂಘ, ದೇಶೀಯ ಗಣ ಮತ್ತು ಪುಸ್ತಕ ಗಚ್ಛಕ್ಕೆ ಸೇರಿದವನು. ಮತ್ತು ಸಕಲ ಕಲೆಗೂ ಆಶ್ರಯ ನಾಗಿ, ಊರ್ಧ್ವಮುಖವಾಗಿರುವ ಚಕೋರಗಳಿಗೆ (ಶಿಷ್ಯರಿಗೆ) ಅಭಯ ವನ್ನು ನೀಡುವ ಚಂದ್ರನಂತಿದ್ದನು.

ಪೆರ್ಮಾಡಿದೇವರಸ ಮತ್ತು ಪೆರುಮಾಳು ದೇವರಸರು ಹುಲ್ಲಹಳ್ಳಿಯಲ್ಲಿ ತ್ರಿಜಗನ್ಮಂಗಲ ಚೈತ್ಯಾಲಯವನ್ನು ನಿರ್ಮಿಸಿ, ಪುರಾತನವಾದ ಆದಿ ಪರಮೇಶ್ವರ ಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡಿ ಅವುಗಳ ಪೂಜಾವಿಧಿಗೆಂದು ಗದ್ದೆ–ತೋಟಗಳನ್ನು ನೀಡಿರುತ್ತಾರೆ. ಇವರ ಕಾಲದಲ್ಲಿ ಹುಲ್ಲಹಳ್ಳಿಯಲ್ಲಿ ಪರಿಶುದ್ಧ ಚಾರಿತ್ರ್ಯವಂತನೂ, ಎಲ್ಲ ಶಾಸ್ತ್ರಗಳನೂ ಪ್ರಮಾಣವಾಗಿ ಉಳ್ಳವನೂ, ಅಜ್ಞಾನವೆಂಬ ಪರ್ವತವನ್ನು ಸೀಳುವ ವಜ್ರದ್ಲೋಪಾದಿಯಲ್ಲಿರುವವನ್ನೂ ಆದ ಚಂದ್ರಕೀರ್ತಿವ್ರತಿ ಎಂಬ ಜೈನ ಯತಿಯೂ, ಶ್ರುತಮುನಿ ಶಿಷ್ಯರಾದ ಮಾಘನಂದಿ, ಸಿದ್ಧಾಂತಿ ದೇವರು, ಪರಮಾಗಮ ಉಪದೇಶ ನಿಪುಣರಾದ ಶ್ರುತಿ ಕೀರ್ತಿ ದೇವರು, ಪಾರ್ಶ್ವ ದೇವರು ಮತ್ತು ಜಿನಚಂದ್ರ ದೇವರು ಎಂಬುವರು ನೆಲೆಸಿ ಹುಲ್ಲಹಳ್ಳಿಯು ಪ್ರಸಿದ್ಧ ಜೈನ ಕ್ಷೇತ್ರವಾಗಿ ರಾರಾಜಿಸುತ್ತಿತ್ತು. ಪೆರ್ಮಾಡಿದೇವರಸ ಮತ್ತು ಪೆರುಮಾಳು ದೇವರಸರ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ತಲೆ ಯೆತ್ತಿ ಹರಿಹರನು ಚಕ್ರವರ್ತಿಯಾಗಿದ್ದನು. ಹರಿಹರನಿಗೆ ಈ ಅರಸರು ಸಾಮಂತರಾಗಿದ್ದರು. ಇವರ ಕಾಲದಲ್ಲಿ ಹುಲ್ಲಹಳ್ಳಿಯು ಸುಖ ಸಮೃದ್ಧಿ ಯಿಂದ ಕೂಡಿತ್ತು. ಚೈತ್ಯಾಲಯ ಮತ್ತು ದೇವಾಲಯಗಳು ವಿದ್ಯಾ ಕೇಂದ್ರವಾಗಿದ್ದುವು. ಸಾಹಿತ್ಯ, ಸಂಗೀತ ಮತ್ತು ನೃತ್ಯಕಲೆಗಳ ಆಗರ ವಾಗಿದ್ದ ಹುಲ್ಲಹಳ್ಳಿಯಲ್ಲಿ ಜೈನ, ವೈಷ್ಣವ ಮತ್ತು ವೀರಶೈವ ಧರ್ಮೀಯರು ಸಹಿಷ್ಣುಗಳಾಗಿಬಾಳುತ್ತಿದ್ದರು. ಈ ಮೂವರುಗಳ ಧರ್ಮ ಮಂದಿರಗಳಾದ ತ್ರಿಜಗನ್ಮಂಗಲ ಮತ್ತು ಪರಮೇಶ್ವರ ಚೈತ್ಯಾಲಯ, ಶ್ರೀವರದರಾಜಸ್ವಾಮಿ ಮತ್ತು ಕಪಿಲಮಲ್ಲಿಕಾರ್ಜುನ ದೇವಾಲಯಗಳಲ್ಲಿ

ಪೂಜೋತ್ಸವಗಳು, ಅಂಗಭೋಗ ಮತ್ತು ರಂಗಭೋಗಗಳು ವೈಭವದಿಂದ ನಡೆಯುತ್ತಿದ್ದವು. ದೇವದಾಸಿ ಪದ್ಧತಿಯು ರೂಢಿಯಲ್ಲಿತ್ತು. ಈ ದೇವದಾಸಿಯರಿಗೆ ಸಮಾಜವು ಗೌರವ ಸಂಭಾವನೆಯನ್ನು ಕೊಟ್ಟು ಈ ಪದ್ಧತಿಯನ್ನು ಬಹುಕಾಲ ರಕ್ಷಿಸಿಕೊಂಡು ಬಂದಿತು.

ಹುಲ್ಲಹಳ್ಳಿಯ ಸ್ಥಳ ಮಾಹಿತಿಯಿಂದ ಇಂದಿನ ಪ್ರಾಥಮಿಕ ಶಾಲೆ ಇರುವ ದಿಬ್ಬದ ಪ್ರದೇಶದಲ್ಲಿ ಅರಮನೆಯಿದ್ದಿತೆಂದು ತಿಳಿದು ಬರುತ್ತದೆ. ಇಂದಿಗೂ ಈ ದಿಬ್ಬದ ಸುತ್ತಲ ಪ್ರದೇಶವನ್ನು ಕೋಟೆ ಬುಡ ಎಂದು ಕರೆಯುತ್ತಾರೆ. ಈ ಅರಮನೆ ಪ್ರದೇಶದಲ್ಲಿ ಅಂದು ನಿರ್ಮಾಣವಾಗಿದ್ದ "ಶೃಂಗಾರ ಭಾವಿ" ಎಂದು ಕರೆಯಲ್ಪಡುವ ಸುಂದರ ಕೆತ್ತನೆ ಶಿಲೆಗಳಿಂದ ನಿರ್ಮಾಣವಾದ ಭಾವಿಯೊಂದು ಸಾಕ್ಷಿಯಾಗಿ ಇಂದಿಗೂ ಇದೆ. ಪೆರ್ಮಾಡಿದೇವ ಮತ್ತು ಪೆರುಮಾಳು ದೇವರಸರು ತಮ್ಮ ನೆರೆಯ ನಾಡಾದ ಕಣೆಯುಲ ನಾಡಿನ (ಕಣೇನೂರು) ಆದಿನಾಥ ಬಸದಿಗೆ ಸ್ವಲ್ಪ ಭೂಭಾಗವನ್ನು ದಾನ ನೀಡಿರುವುದಾಗಿ ಕಣೇನೂರು (ಸಂ. 146) ಶಾಸನದಿಂದ ತಿಳಿದು ಬರುತ್ತದೆ.

ಹರಿಹರನ ನಂತರ ಬುಕ್ಕರಾಯನು ವಿಜಯನಗರದ ಅರಸನಾಗಲು, ಈತನ ಕಾಲದಲ್ಲಿ ಕರ್ನಾಟಕದಲ್ಲಿ ಜೈನ-ವೈಷ್ಣವರಲ್ಲಿ ಧರ್ಮಯುದ್ಧ ಪ್ರಾರಂಭವಾಯಿತೆಂದೂ ಬುಕ್ಕರಾಯನು ಇವರಲ್ಲಿ ಧರ್ಮ ಬಂಧುತ್ವವನ್ನುಂಟುಮಾಡಿದನೆಂದೂ ಶ್ರವಣಬೆಳಗೊಳದ ಶಾಸನವು ತಿಳಿಸುತ್ತದೆ. ಈ ವೇಳೆಯಲ್ಲಿ ಹುಲ್ಲಹಳ್ಳಿಯ ಜೈನ ಮುನಿಗಳು ಸಂನ್ಯಸನ ವ್ರತದಿಂದ ಪರಮೇಷ್ಠಿ ಮನರಾಗಿ ಸ್ವರ್ಗಸ್ಥರಾದರು. ಪೆರ್ಮಾಡಿದೇವ ಮತ್ತು ಪೆರುಮಾಳು ದೇವರಸರ ನಂತರ ಶ್ರೀನೃಪ ಎಂಬುವನು ಹುಲ್ಲಹಳ್ಳಿಯ ಆಡಳಿತವನ್ನು ನಿರ್ವಹಿಸಿದನು.

15ನೇ ಶತಮಾನದ ಪ್ರಾರಂಭದ ವೇಳೆಗೆ ಹುಲ್ಲಹಳ್ಳಿಯಲ್ಲಿ ಜೈನ ಧರ್ಮದ ಸುವರ್ಣಯುಗ ಮುಗಿದು ಮುಂದಿನ ಆಡಳಿತವನ್ನು ತೆರಕಣಾಂಬಿಯ ಶಾಸನದಿಂದ ತಿಳಿಯಬಹುದಾಗಿದೆ. ಇದರ ಕಾಲ ಕ್ರಿ.ಶ. 1638.

16ನೇ ಶತಮಾನದ ಮಧ್ಯಭಾಗದಲ್ಲಿ ಸೋಮರಾಜವಂಶದ ಶ್ರೀ ಗೋಪಣನೂ, ನಂತರ ಈತನ ಮಗನಾದ ಬಸವ ಉರುಫ್ ವೀರರಾಜ ಒಡೆಯರ್ ಎಂಬುವನು ಹುಲ್ಲಹಳ್ಳಿಯ ದೊರೆಯಾಗಿದ್ದನು. ವೀರ

ರಾಜ ಒಡೆಯನು ತನ್ನ ಅವಧಿಯಲ್ಲಿ ಹುಲ್ಲಹಳ್ಳಿಯ ಮಲ್ಲಿಕಾರ್ಜುನ ಸ್ವಾಮಿ ಮತ್ತು ವರದರಾಜಸ್ವಾಮಿ ದೇವಾಲಯಕ್ಕೆ ಭೂಮಿಯನ್ನೂ ಮತ್ತು ನರಸಿಂಹಸ್ವಾಮಿಗೆ, ಕಣೆಯಲ ನಾಡಿಗೆ ಸೇರಿದ ಪಿಲ್ಲಹಳ್ಳಿ ಎಂಬ ಗ್ರಾಮವನ್ನೂ, ಸ್ವಲ್ಪ ಭೂ ಭಾಗ ಮತ್ತು ತೋಟವನ್ನೂ ಸರ್ವಮಾನ್ಯ ವಾಗಿ ಕೊಟ್ಟಿರುತ್ತಾನೆ. ವೀರರಾಜ ಒಡೆಯನು ಹುಲ್ಲಹಳ್ಳಿಯಿಂದ ಸುತ್ತಲ ಕಣೆಯಲ ನಾಡು, ತರಗನಹಳ್ಳಿ, ಕಾರೆಯನಾಡು ಮೊದಲಾದ ಪ್ರದೇಶಗಳನ್ನು ಆಳುತ್ತಿದ್ದನು. ಈತನ ಕಾಲದಲ್ಲಿ ಶ್ರೀಮಸ್ಥ ಬ್ರಾಹ್ಮಣ ರಾದ ಸ್ಮಾರ್ತರು, ಶ್ರೀವೈಷ್ಣವರು ಮತ್ತು ಮಾಧ್ವರು ಅಗ್ರಹಾರ ಗಳನ್ನು ನಿರ್ಮಿಸಿಕೊಂಡಿದ್ದರು. ವೀರಶೈವರು ಶಾಂತಮಲ್ಲಿಕಾರ್ಜುನ ಮಠದಲ್ಲಿ ಶಕ್ತಿ ವಿಶಿಷ್ಟಾದ್ವೈತ ತತ್ವಾಭ್ಯಾಸದಲ್ಲಿ ನಿರತರಾಗಿದ್ದರು. ಶ್ರೀಮಂತ ವೈಶ್ಯರೂ ಸಾಕಷ್ಟಿದ್ದರು. ವೀರರಾಜನು ತನ್ನ ಆಸ್ಥಾನದಲ್ಲಿ ಆಗಾಗ್ಗೆ ಕವಿಗೋಷ್ಠಿಗಳನ್ನೂ ಮತ್ತು ಸರ್ವಧರ್ಮ ಸಭೆಗಳನ್ನು ನಡೆಸು ತ್ತಿದ್ದನು. ಈತನ ಕಾಲದಲ್ಲಿ ಹೊರನಾಡುಗಳಿಂದ ವಿದ್ವಾಂಸರೂ, ಯತಿಗಳೂ ಹುಲ್ಲಹಳ್ಳಿಗೆ ಬಂದು ಇಲ್ಲಿನ ಪರಿಸರಕ್ಕೆ ಮಾರು ಹೋಗಿ ಇಲ್ಲಿಯೇ ನೆಲೆ ನಿಂತುದೂ ಉಂಟು. ಹುಲ್ಲಹಳ್ಳಿಯು ಉತ್ತಮ ರಾಜ ಬೀದಿಗಳನ್ನೂ ಮತ್ತು ಉದ್ಯಾನವನಗಳನ್ನೂ ಹೊಂದಿದ್ದಿತು.

ವೀರರಾಜ ಒಡೆಯನ ನಂತರ ಅಂದರೆ ಕ್ರಿ.ಶ. 1640ರ ಸಮಯದಲ್ಲಿ ಈತನ ಮಗನಾದ ವೀರಮಹೇಂದ್ರನು ಹುಲ್ಲಹಳ್ಳಿಯನ್ನು ಆಳುತ್ತಿದ್ದನು ಎಂಬುದಾಗಿ ಶಾಂತವೀರಾಚಾರ್ಯ ವಿರಚಿತ 'ಶಿವಲಿಂಗ ಚಾರಿತ್ರ' ಎಂಬ ಗ್ರಂಥದಿಂದ ತಿಳಿದು ಬರುತ್ತದೆ. ವೀರಮಹೇಂದ್ರನ ಕಾಲದಲ್ಲಿ ಹುಲ್ಲ ಹಳ್ಳಿಯ ವೀರಶೈವ ವಿರಕ್ತ ಮಠದ ಮಂದಿರದ ನಿರ್ಮಾಣವಾಯಿತು. ಈ ಮಠದ ಪೀಠಾಧಿಕಾರಿಯಾದ ಚನ್ನವೀರಾರ್ಯರು ವೀರಮಹೇಂದ್ರನ ರಾಜಗುರುವಾಗಿದ್ದರು.

ವೀರಮಹೇಂದ್ರನ ನಂತರದ ಹುಲ್ಲಹಳ್ಳಿಯ ಆಡಳಿತವನ್ನು ಚರಿತ್ರಾರ್ಹ ಮೂಲಗಳಿಂದ ತಿಳಿಯಬಹುದಾಗಿದೆ. ಕ್ರಿ.ಶ. 1611 ರಿಂದ 1761 ರವರೆಗೆ ಮೈಸೂರು ಸಂಸ್ಥಾನವನ್ನು ಮೈಸೂರಿನ ಒಡೆಯರು ಆಳುತ್ತಿದ್ದರು. 1761 ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಬಾಲಕ ನಾದ್ದರಿಂದ ದಂಡನಾಯಕನಾದ ಹೈದರಾಲಿಯು ಪ್ರಬಲನಾಗಿ ತಾನೇ ಅರಸೊತ್ತಿಗೆಯನ್ನು ಏರಿದನು. ನಂತರ ಈತನ ಮಗನಾದ ಟಿಪ್ಪುಸುಲ್ತಾ

ನನು 1799ರ ವರೆಗೂ ರಾಜ್ಯಭಾರವನ್ನು ನಡೆಸಿದನು. ಟಿಪ್ಪುವು ತನ್ನ ಕಾಲದಲ್ಲಿದ್ದ ವಿರೋಧಿ ಪಾಳೆಯಗಾರರನ್ನೆಲ್ಲಾ ಗುಡಿಸಿ ಹಾಕಿ ವೈಭವ ದಿಂದ ರಾಜ್ಯವಾಳಿದನು. ಅತ್ಯಂತ ದಕ್ಷನೂ ಚತುರನೂ ಆದ ಪೂರ್ಣಯ್ಯನು ಈತನ ಪ್ರಧಾನಮಂತ್ರಿಯಾಗಿದ್ದನು. ಟಿಪ್ಪುವಿನ ಸಮರ್ಥ ಆಡಳಿತದಿಂದಾಗಿ ಹುಲ್ಲಹಳ್ಳಿಯಲ್ಲಿ ಗುಡಿ ಕೈಗಾರಿಕೆಗಳು ತಲೆ ಎತ್ತಿದುವು. ಕೈಮಗ್ಗಗಳು, ಎಣ್ಣೆಯ ಗಾಣಗಳು, ಭತ್ತದ ಕೊಟ್ಟಣಗಳು, ಎತ್ತಿನ ಗಾಡಿಯ ಕಾರ್ಖಾನೆಗಳು, ನಾಡುಹೆಂಚು ಮತ್ತು ಕುಂಭಗಳ ತಯಾರಿಕಾ ಘಟಕಗಳು ಮತ್ತು ಕಮ್ಮಾರರ ಕಬ್ಬಿಣದ ವ್ಯವಸಾಯೋಪ ಕರಣಗಳ ಉತ್ಪಾದನಾ ಕೇಂದ್ರಗಳು ಪ್ರಾರಂಭಗೊಂಡವು. ಹುಲ್ಲಹಳ್ಳಿ ಯಲ್ಲಿ ತಯಾರಾದ ಎಳ್ಳೆಣ್ಣೆಯು ನಾಡಿನಲ್ಲೇ 'ಹುಲ್ಲಹಳ್ಳಿ ತುಪ್ಪ'ವೆಂದು ಪ್ರಸಿದ್ಧಿಯನ್ನು ಪಡೆಯಿತು. ಉತ್ಪಾದಿತ ವಸ್ತುಗಳು ರಾಜಧಾನಿಯಾದ ಶ್ರೀರಂಗಪಟ್ಟಣ ಹಾಗೂ ಮೈಸೂರಿನಲ್ಲಿ ಮಾರಾಟವಾಗುತ್ತಿದ್ದುವು.

ಟಿಪ್ಪುಸುಲ್ತಾನನ ಮರಣಾನಂತರ ಬ್ರಿಟಿಷರ ಸಹಾಯದಿಂದ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಡಳಿತವು ಮತ್ತೆ ಪ್ರಾರಂಭ ವಾಯಿತು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನದ ಪ್ರತಿ ಹಳ್ಳಿಯಲ್ಲೂ ಪ್ರಜಾಪ್ರಭುತ್ವದ ವ್ಯವಸ್ಥೆ ಪ್ರಾರಂಭ ಗೊಂಡು 'ಮೊಹತರ್ಪ' ಎಂಬ ಆಡಳಿತ ಪದ್ಧತಿಯು ಜಾರಿಗೆ ಬಂದಿತು. ಮೊಹತರ್ಪದಲ್ಲಿ ನಾಡಗೌಡನು ಮುಖ್ಯಸ್ಥನಾಗಿರುತ್ತಿದ್ದನು. ಇವನಿಗೆ ದೇಶಶೆಟ್ಟಿ, ತಳವಾರ, ನೀರುಗಂಟಿ ಮತ್ತು ಚಕ್ರ ಇವರುಗಳು ಇರು ತ್ತಿದ್ದರು.

ನಾಡಗೌಡನು ಗ್ರಾಮದ ಕುಂದು ಕೊರತೆಗಳ ವಿಚಾರಣೆ ಮತ್ತು ಅದರ ನಿವಾರಣೆಗೆ ಗಮನಕೊಟ್ಟು ಗ್ರಾಮದ ಅಭಿವೃದ್ಧಿಯಲ್ಲಿ ಆಸ್ಥೆ ಯನ್ನು ವಹಿಸುತ್ತಿದ್ದನು. ದೇಶಶೆಟ್ಟಿಯು ತೆರಿಗೆ ಮೊದಲಾದ ಹಣಕಾಸಿನ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದನು. ತಳವಾರನು ಗ್ರಾಮರಕ್ಷಕ ನಾಗಿದ್ದನು. ನೀರುಗಂಟಿಯು ಗ್ರಾಮದ ನೀರಿನ ಸೌಲಭ್ಯವನ್ನು ನೋಡಿ ಕೊಳ್ಳುತ್ತಿದ್ದನು. ಚಕ್ರನು ಇವರೆಲ್ಲರ ಸಹಾಯಕನಾಗಿದ್ದು ಗ್ರಾಮದ ನೈರ್ಮಲ್ಯವನ್ನು ಕಾಪಾಡುತ್ತಿದ್ದನು.

ಹುಲ್ಲಹಳ್ಳಿಯ ನಾಡಗೌಡರಾಗಿ ದೊಡ್ಡಹಟ್ಟಿ ವೀರಪ್ಪ, ಸುಬ್ಬ

ರಾಯಪ್ಪ, ನಂಜಪ್ಪ, ಕಾಳಮಾದಪ್ಪ, ಉರುಫ್ ಕೂಸಣ್ಣ ಇವರುಗಳು ಸೇವೆಸಲ್ಲಿಸಿದ್ದಾರೆ. ದೇಶಶೆಟ್ಟಿಯಾಗಿ ಮಾದಶೆಟ್ಟಿ, ತಳವಾರನಾಗಿ ಮೋರಿ ಬೆಟ್ಟನಾಯ್ಕನ ಮಗ ಸಿದ್ಧನಾಯ್ಕ. ನೀರುಗಂಟಿಯಾಗಿ ಲಕ್ಷ್ಮಣರಾಜು ಮಗ ವೆಂಕಟರಾಜು, ಚಕ್ರನಾಗಿ ತಿಬ್ಬ ಮತ್ತು ತಿಬ್ಬಯ್ಯನ ಮಗ ಹೊನ್ನಯ್ಯ ಇವರುಗಳೂ ಗ್ರಾಮಕ್ಕಾಗಿ ದುಡಿದಿದ್ದಾರೆ. ಸರ್ಕಾರವು ಚಕ್ರರ ಜೀವನಾಂಶಕ್ಕೆ ಜಮೀನನ್ನು ಬಿಟ್ಟುಕೊಟ್ಟಿತ್ತು.

ಕ್ರಿ ಶ. 1890ರ ನಂತರ ಶ್ರೀ ಚಾಮರಾಜೇಂದ್ರ ಒಡೆಯರ್ ಅವರ ಪ್ರಭುತ್ವದಲ್ಲಿ ಗ್ರಾಮಾಡಳಿತದಲ್ಲಿ ಬದಲಾವಣೆಯಾಗಿ ಗ್ರಾಮಯೂನಿಯನ್ ಎಂಬ ಹೆಸರಿನಿಂದ ಆಡಳಿತ ಪ್ರಾರಂಭವಾಯಿತು. ಇದರಲ್ಲಿ ನಾಡಗೌಡ ಮತ್ತು ದೇಶಶೆಟ್ಟಿಗೆ ಬದಲಾಗಿ ಪಟೇಲ ಮತ್ತು ಶ್ಯಾನುಭೋಗರು ಅಧಿಕಾರಿಗಳಾದರು.

ಹುಲ್ಲಹಳ್ಳಿ ಗ್ರಾಮಯೂನಿಯನ್ನಿನ ಪಟೇಲರಾಗಿ ರಂಗಶೆಟ್ಟಿ, ಪುಟ್ಟಶೆಟ್ಟಿ, ಪೆದ್ದ ಅಳಗಿರಿಶೆಟ್ಟಿ, ರಂಗಸ್ವಾಮಿಶೆಟ್ಟಿ, ಬಂಗಾರಶೆಟ್ಟಿ ಹಾಗೂ ಹೆಚ್. ಟಿ. ಪುಟ್ಟಯ್ಯ ಇವರುಗಳೂ ; ಶ್ಯಾನುಭೋಗರಾಗಿ ಕಾಶಿ ನಂಜುಂಡಯ್ಯ, ನಂಜುಂಡಯ್ಯ, ನಂಜಪ್ಪಯ್ಯ, ಶ್ರೀಕಂಠಯ್ಯ ಮತ್ತು ಹೆಚ್. ಎನ್. ಕೃಷ್ಣಪ್ಪ-ಇವರುಗಳು ಸೇವೆಸಲ್ಲಿಸಿರುವರು. ತಳವಾರ, ನೀರುಗಂಟಿ ಮತ್ತು ಚಕ್ರರಾಗಿ ಹಿಂದಿನವರೇ ಮುಂದುವರಿದರು.

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಅಧಿಕಾರದ ಅವಧಿಯಲ್ಲಿ (ಕ್ರಿ.ಶ. 1894-1940) ಎಲ್ಲ ಹಳ್ಳಿಗಳಲ್ಲೂ ಸರ್ಕಾರಿ ಪ್ರಾಥಮಿಕ ಶಾಲೆಗಳನ್ನು ತೆರೆದಂತೆ ಹುಲ್ಲಹಳ್ಳಿಯಲ್ಲೂ ಲೋಯರ್ ಪ್ರೈಮರಿ ಶಾಲೆಯನ್ನು ತೆರೆಯಲಾಯಿತು. ಯಾವ ಸ್ಥಳದಲ್ಲಿ ಕವಿಗೋಷ್ಠಿಯೂ ಮತ್ತು ಸರ್ವಧರ್ಮ ಸಭೆಗಳೂ ಹಿಂದಿನ ಹುಲ್ಲಹಳ್ಳಿಯ ಪಾಳೆಯಗಾರರ ಆಶ್ರಯದಲ್ಲಿ ನಡೆಯುತ್ತಿದ್ದಿತೋ ಅಂತಹ ಅರಮನೆಯಿದ್ದ ಸ್ಥಳದಲ್ಲಿ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿದುದು ಒಂದು ಸುಯೋಗವೆನ್ನಬಹುದು.

ಕ್ರಿ.ಶ. 1927 ರಲ್ಲಿ ಗ್ರಾಮ ಯೂನಿಯನ್ನನ್ನು ಗ್ರಾಮ ಪಂಚಾಯತ್ ಎಂಬ ಹೆಸರಿನಲ್ಲಿ ಬದಲಾಯಿಸಲಾಯಿತು. ಇದರಂತೆ ಗ್ರಾಮ ಪಂಚಾಯತ್‌ನಲ್ಲಿ ಒಬ್ಬ ಅಧ್ಯಕ್ಷ ಅಥವಾ ಛೇರ್ಮನ್ ಹಾಗೂ ಏಳರಿಂದ ಹದಿಮೂರು ಮಂದಿ ಸದಸ್ಯರು ಇರುತ್ತಿದ್ದರು.

ಹುಲ್ಲಹಳ್ಳಿಯ ಗ್ರಾಮ ಪಂಚಾಯತ್‌ನ ಮೊದಲ ಅಧ್ಯಕ್ಷರಾಗಿ

ವೆಂಕಟಸುಬ್ಬಾಪಂಡಿತರೂ (1927 ರಿಂದ 1935), ಎರಡನೇ ಅಧ್ಯಕ್ಷರಾಗಿ ಶ್ರೀಕಂಠಜೋಯಿಸರೂ (1935-1967) ಸೇವೆಯನ್ನು ಸಲ್ಲಿಸಿದರು.

1947 ರಲ್ಲಿ ಬ್ರಿಟಿಷರ ಆಡಳಿತದಿಂದ ಮುಕ್ತಗೊಂಡ ಭಾರತದಲ್ಲಿ ಚುನಾವಣಾ ಪದ್ಧತಿಯನ್ನೊಳಗೊಂಡ ಪ್ರಜಾಪ್ರಭುತ್ವ ವ್ಯವಸ್ಥೆ ಜಾರಿಗೆ ಬಂದಿತು. ಇದರಂತೆ ಮೈಸೂರು ಸಿಂಹಾಸನಾಧೀಶ್ವರ ಶ್ರೀ ಜಯ ಚಾಮರಾಜ ಒಡೆಯರ್ (1940 ರಿಂದ 1950) ಅವರ ಕಾಲದಲ್ಲಿ ಆಡಳಿತವು ಮಹಾರಾಜರಿಂದ ಚುನಾಯಿತ ಸರ್ಕಾರಗಳಿಗೆ ಹಸ್ತಾಂತರಿಸ ಲಾಯಿತು. ಗ್ರಾಮಾಡಳಿತವು ಗ್ರಾಮ ಪಂಚಾಯತ್ ಎಂಬ ಹೆಸರಿನಲ್ಲೇ ಮುಂದುವರಿಯಿತು. ಈ ವೇಳೆಯಲ್ಲೂ ಹುಲ್ಲಹಳ್ಳಿಯ ಗ್ರಾಮಾಧ್ಯಕ್ಷ ರಾಗಿ ಶ್ರೀಕಂಠಜೋಯಿಸರೇ ಚುನಾಯಿತರಾಗಿ 1967ರ ವರೆಗೂ ಸೇವೆ ಯನ್ನು ಸಲ್ಲಿಸಿದರು. ಇವರ ದೀರ್ಘ ಸೇವೆಯ ಅವಧಿಯಲ್ಲಿ ಅಪ್ಪರ್ ಪ್ರೈಮರಿ ಶಾಲೆ, ಪ್ರೌಢಶಾಲೆ, ಸಾರ್ವಜನಿಕ ಆಸ್ಪತ್ರೆ, ಪಶುವೈದ್ಯ ಶಾಲೆ, ಪೋಸ್ಟ್ ಆಫೀಸ್, ವಿದ್ಯುಚ್ಛಕ್ತಿ ಸೌಲಭ್ಯ, ವ್ಯವಸಾಯ ಸಹಕಾರ ಸಂಘ ಸ್ಥಾಪನೆ ಮೊದಲಾದ ಅನುಕೂಲಗಳು ಗ್ರಾಮಕ್ಕೆ ದೊರೆತವು. ಕಪಿಲಾನದಿಯ ಪ್ರವಾಹ ಪೀಡಿತ ಕುಟುಂಬಗಳಿಗೆ ವಸತಿ ಸೌಕರ್ಯ ಕಲ್ಪಿಸಲು 25 ಕುಟುಂಬಗಳಿಗೆ ಉಚಿತ ನಿವೇಶನಗಳನ್ನೂ, 50 ಹರಿಜನ ಕುಟುಂಬಗಳಿಗೂ ಉಚಿತವಾಗಿ ಮತ್ತು ಇತರ ಬಡಕುಟುಂಬಗಳಿಗೆ 150 ರೂ ದರದಲ್ಲಿ 50 ನಿವೇಶನಗಳನ್ನೂ ಹಂಚಲಾಯಿತು. ಗ್ರಾಮದಲ್ಲಿ ನೀರಿನ ಸೌಕರ್ಯವನ್ನು ಹೆಚ್ಚಿಸಲು ವಾಟರ್ ಟ್ಯಾಂಕನ್ನು ನಿರ್ಮಿಸ ಲಾಯಿತು.

ಇಷ್ಟೆಲ್ಲಾ ಅನುಕೂಲವನ್ನು ಹುಲ್ಲಹಳ್ಳಿಗೆ ಒದಗಿಸಿದ ಶ್ರೀಕಂಠ ಜೋಯಿಸರು ದೈವಭಕ್ತರೂ, ಉದಾರಿಗಳೂ, ಸರ್ವಜನಾದರಣೀಯರೂ ಆಗಿದ್ದರು. ಹಸಿದು ಬಂದವರಿಗೆ ಜಾತಿ ವೈಷಮ್ಯವಿಲ್ಲದೆ ತಮ್ಮ ಮನೆಯಲ್ಲಿ ಅನ್ನದಾನ ಮಾಡುತ್ತಿದ್ದರು. ಶ್ರೀಕಂಠಜೋಯಿಸರು, ಸುಬ್ಬರಾಯ ಜೋಯಿಸ್ ಮತ್ತು ಚೆನ್ನಮ್ಮ ದಂಪತಿಗಳ ಮಕ್ಕಳು. ಸುಬ್ಬರಾಯ ಜೋಯಿಸರು ಮೈಸೂರಿನ ಅರಮನೆಯಲ್ಲಿ ಪೇಷ್ಕಾರ್ ವೃತ್ತಿಯಲ್ಲಿದ್ದರು. ಇವರು ನಿವೃತ್ತರಾದ ಮೇಲೆ ಹುಲ್ಲಹಳ್ಳಿಯಲ್ಲಿ ಬಂದು ನೆಲೆಸಿದರು. (ಸು. 1900 ರಲ್ಲಿ) ಶ್ರೀಕಂಠಜೋಯಿಸರ ಬಾಲ್ಯದ ಶಿಕ್ಷಣ ನಂಜನ ಗೂಡಿನಲ್ಲಿ ನಡೆಯಿತು. ತಂದೆಯವರು ನಡೆಸುತ್ತಿದ್ದ ಮುಜಾವತ್ಮಾರು

ಹಳ್ಳಿಯ ನಾಡ'ನ್ನು ಕ್ರಿ.ಶ. 14ನೇ ಶತಮಾನದ ಪ್ರಾರಂಭದಲ್ಲಿ ಆಳು ತ್ತಿದ್ದನು.

ಈತನು ಹುಲ್ಲಹಳ್ಳಿಯ ನಾಡನ್ನೊಳಗೊಂಡಂತೆ ಹದಿನಾಲ್ಕು ನಾಡು ಗಳನ್ನು ಹೊಂದಿದ್ದನು. ಇಂತಹ ಪ್ರಬಲನಾದ ಸೇನಾಧಿಪತಿಯು ಪ್ರಚಂಡ ದೋರ್ದಂಡ, ಇಮ್ಮಡಿ ರಾವುತರವ, ನೀಲಗಿರಿ ಸಾಧರ, ಗಿರಿದುರ್ಗ ಮಲ್ಲ, ಜಲದುರ್ಗ ಮಂಡಳಿಕ ಹೃದಯಶಲ್ಯ, ಹೊಯಿಸಳ ರಾಜ್ಯಲಕ್ಷ್ಮೀ ಪ್ರಾಕಾರ, ಅಭಿನವ ಮದನಾವತಾರ, ಪಾಂಡ್ಯಕುಳ ಕಮಲವನ ಕುಂಜರ ವೈರಿ ಮಂಡಳಿಕ ಸಂಗ್ರಮರಮ, ಅರಸುಗಂಡ, ಕೀರ್ತ್ಯಾಂಗನಾ ವಲ್ಲಭ, ದುಷ್ಟಜನ ದುರ್ಲಭ, ಅಲ್ಲಾಳನಾಥ ದಿವ್ಯಶ್ರೀಪಾದ ಪದ್ಮಾರಾಧಕ, ಏಕಾದಶೀವ್ರತನಿರತ, ಗೋಬ್ರಾಹ್ಮಣಪ್ರಿಯ, ಪರನಾರೀ ಸಹೋದರ ಮತ್ತು ಸ್ವಸ್ತಿಪುರವರಾಧೀಶ್ವರ ಎಂಬ ಬಿರುದಾವಳಿಗಳನ್ನೇ ಹೊಂದಿದ್ದನು.

ಶ್ರೀ ವೀರಕೇತಯ ದಣ್ಣಾಯಕನು ತನ್ನ ನಾಡುಗಳಲ್ಲಿ ಸಾಮ್ರಾಜ್ಯದ ರಕ್ಷಣೆಗಾಗಿ ಸೈನ್ಯವನ್ನು ಸಂಗ್ರಹಿಸುತ್ತಿದ್ದನು. ಈ ಸೈನ್ಯವು ನಾಡುಗಳ ಅಭಿವೃದ್ಧಿ ಕಾರ್ಯದಲ್ಲೂ ಮತ್ತು ತನ್ನ ಚಕ್ರವರ್ತಿಯು ಶತ್ರು ರಾಜ ರೊಡನೆ ಯುದ್ಧವನ್ನು ಹೂಡಿದಾಗ ಅವನಿಗೆ ಸಹಾಯಕವಾಗಿಯೂ ಭಾಗವಹಿಸುತ್ತಿತ್ತು.

ಮೂರನೇ ವೀರಬಲ್ಲಾಳನು ಕ್ರಿ.ಶ. 1291 ರಿಂದ 1343 ರವರೆಗೂ ರಾಜ್ಯಭಾರವನ್ನು ನಡೆಸಿದನು. ಇವನ ರಾಜ್ಯವು ತುಂಗಭದ್ರೆಯಿಂದ ಕಾವೇರಿಯವರೆಗೆ ಹಬ್ಬಿತ್ತು. ಪೂರ್ವ ಪಶ್ಚಿಮಗಳಲ್ಲಿ ಸಮುದ್ರಗಳು ಗಡಿ ಯಾಗಿದ್ದವು. ಬಲ್ಲಾಳನು ತನ್ನ ರಾಜ್ಯವನ್ನು ಉತ್ತರದಲ್ಲಿ ಲಕ್ಕುಂಡಿ ಮತ್ತು ಬಂಕಾಪುರ, ಮಧ್ಯದಲ್ಲಿ ದ್ವಾರ ಸಮುದ್ರ, ದಕ್ಷಿಣದಲ್ಲಿ ತಿರುವಣ್ಣಾ ಮಲೆ ಮತ್ತು ಕಣ್ಣಾನೂರು ಎಂಬ ಐದು ರಾಜಧಾನಿಗಳ ಮೂಲಕ ಆಳುತ್ತಿದ್ದನು. ಬಲ್ಲಾಳನು ಪಾಂಡ್ಯರನ್ನು ಸೋಲಿಸಿ ಕಂಚಿ ಮತ್ತು ತೊಂಡೈ ಮಂಡಲವನ್ನೂ ಪಡೆದಿದ್ದನು. ಈ ಸಂದರ್ಭದಲ್ಲಿ ಪಾಂಡ್ಯರನ್ನು ಸೋಲಿಸಲು ಹುಲ್ಲಹಳ್ಳಿ ನಾಡಿನ ಸೈನಿಕರು ಶ್ರೀ ವೀರಕೇತಯ ದಣ್ಣಾಯಕನ ನಾಯಕತ್ವದಲ್ಲಿ ಬಲ್ಲಾಳನಿಗೆ ಸಹಾಯಕರಾಗಿದ್ದರು. ಶ್ರೀ ವೀರಕೇತಯ ದಣ್ಣಾಯಕನು ಬಲ್ಲಾಳನಿಂದ 'ಪಾಂಡ್ಯ ಕುಲ ಕಮಲ ವನ ಕುಂಜರ' ಎಂಬ ಬಿರುದನ್ನು ಪಡೆದನು.

ಕ್ರಿ.ಶ. 1310 ರಲ್ಲಿ ದೆಹಲಿಯ ಸುಲ್ತಾನ ಅಲ್ಲಾ ಉದ್ದೀನ್

ಖಿಲ್ಜಿಯು ತನ್ನ ದಂಡನಾಯಕನಾದ ಮಲ್ಲಿಕಾಫರನನ್ನು ದಾಳಿಮಾಡ ಲೆಂದು ದಕ್ಷಿಣಭಾರತಕ್ಕೆ ಕಳುಹಿಸಿದನು. ಮಲ್ಲಿಕಾಫರನು ದ್ವಾರಸಮುದ್ರ ವನ್ನು ಹಿಡಿಯಲು, ತಿರುವಣ್ಣಾಮಲೆಯಲ್ಲಿದ್ದ ಬಲ್ಲಾಳನು ಅಪರಿಮಿತ ವಾದ ಬಲವನ್ನು ಹೊಂದಿರುವ ಮಲ್ಲಿಕಾಫರನೊಡನೆ ಹೋರಾಡುವುದು ಉಚಿತವಲ್ಲವೆಂದು ಭಾವಿಸಿ ಆತನಿಗೆ ಹೇರಳವಾದ ಹಣವನ್ನೂ ಆನೆ ಮತ್ತು ಕುದುರೆಗಳನ್ನೂ ಕಾಣಿಕೆಯಾಗಿ ಕೊಟ್ಟು ಹಿಂದಿರುಗುವಂತೆ ಮಾಡಿದನು. ಕನ್ನಡಿಗರ ಔದಾರ್ಯ ಮತ್ತು ವಿಶ್ವಾಸವು ದೆಹಲಿಯ ಸುಲ್ತಾನನಿಗೆ ಸಂತೋಷವನ್ನುಂಟುಮಾಡಿದುವು. ನಂತರ ಬಲ್ಲಾಳನು ಹಂಪೆಯಲ್ಲಿ ಮತ್ತೊಂದು ರಾಜಧಾನಿಯನ್ನು ಕಟ್ಟಿದನು. ಮಲ್ಲಿಕಾಫರನು ತನ್ನ ಆಕ್ರಮಣವನ್ನು ಮುಂದುವರಿಸಿ ಮಧುರೆಯನ್ನು ಹಿಡಿದಾಗ, ದೆಹಲಿ ಯಲ್ಲಿ ಖಿಲ್ಜಿ ಸುಲ್ತಾನರು ಅಳಿದು, ತುಘಲಕ್ ಸುಲ್ತಾನರ ಆಳ್ವಿಕೆ ಪ್ರಾರಂಭವಾಯಿತು. ಈ ಸಮಯದಲ್ಲಿ ಬಲ್ಲಾಳನು ಮಧುರೆಯಲ್ಲಿ ಮುಸ್ಲಿಂ ಆಡಳಿತವನ್ನು ಕೊನೆಗಾಣಿಸಲು ಮತ್ತು ಗಂಡಾಂತರವೊದಗಿರುವ ಹಿಂದೂ ಧರ್ಮವನ್ನು ಸಂರಕ್ಷಿಸಲು ದಕ್ಷಿಣದ ಎಲ್ಲಾ ಹಿಂದೂ ರಾಜರು ಗಳನ್ನು, ತನ್ನ ಸಾಮಂತರು ಮತ್ತು ಸೇನಾನಾಯಕರನ್ನೂ ಒತ್ತಟ್ಟಿಗೆ ಕೂಡಿಸಿದನು. ಹೀಗೆ ಒಗ್ಗೂಡಿದ ಸೈನ್ಯದೊಡನೆ ಹೋರಾಡಿ ಮೂರನೇ ವೀರಬಲ್ಲಾಳನು ಮಹಾ ವಿಜಯವನ್ನು ಸಾಧಿಸಿದನು (ಕ್ರಿ.ಶ. 1326ರಲ್ಲಿ).

ಯುದ್ಧ ವಿಜಯಾನಂತರ ವೀರಬಲ್ಲಾಳನು ತನ್ನಯೋಧರಿಗೆ ವೀರೋಚಿತ ಸನ್ಮಾನವನ್ನು ಮಾಡಿದನು. ಯುದ್ಧದಲ್ಲಿ ಮಡಿದವರ ನೆನಪಿಗಾಗಿ ವೀರಗಲ್ಲುಗಳನ್ನು ನೆಡೆಸಿದನು. ಇಂತಹ ವೀರಗಲ್ಲುಗಳು ಹುಲ್ಲ ಹಳ್ಳಿಯಲ್ಲಿ ಇಂದಿಗೂ ಕಾಣಸಿಗುತ್ತವೆ. ಇವುಗಳು ಅಂದಿನ ಹುಲ್ಲಹಳ್ಳಿಯ ಜನತೆಯ ವೀರಶೌರ್ಯಗಳ ಸಂಕೇತವಾಗಿ, ರಾಜಭಕ್ತಿಯ ಅಮೂಲ್ಯ ಕುರುಹಾಗಿ, ನಾಡಿಗಾಗಿ ಪ್ರಾಣಾರ್ಪಣೆ ಮಾಡಿದ ಶ್ರೇಷ್ಠ ನೆನಪಿಗಾಗಿ ಮತ್ತು ಇಂದಿನ ಜನತೆಗೆ ಸ್ಫೂರ್ತಿಯ ಬುಗ್ಗೆಯಾಗಿ ಕಂಗೊಳಿಸುತ್ತಾ ತಲೆಯೆತ್ತಿ ನಿಂತಿವೆ.

ಶ್ರೀ ವೀರಕೇತೆಯ ದಣ್ಣಾಯಕನು ವೀರಬಲ್ಲಾಳನಿಂದ ಹುಲ್ಲ ಹಳ್ಳಿಯ ವರದರಾಜಸ್ವಾಮಿ ದೇವಾಲಯಕ್ಕೆ ಕೇತಮ್ಮ ಹಳ್ಳಿಯನ್ನು ಧಾರಾಪೂರ್ವಕವಾಗಿ ಕೊಡಿಸಿದನೆಂದು ಶಾಸನವು ತಿಳಿಸುತ್ತದೆ.

ಶ್ರೀ ವೀರಕೇತಯ ದಣ್ಣಾಯಕನ ನಂತರ ಹುಲ್ಲಹಳ್ಳಿಯನ್ನು

ಪೆರ್ಮಾದೇವರಸ ಮತ್ತು ಪೆರುಮಾಳು ದೇವರಸರೆಂಬ ಸಹೋದರರು ಆಳುತ್ತಿದ್ದರು ಎಂಬುದಾಗಿ ಕ್ರಿ.ಶ. 1337ರ ಕಣೇನೂರು ಶಾಸನ ಮತ್ತು ಕ್ರಿ.ಶ. 1371ರ ಹುಲ್ಲಹಳ್ಳಿ ಶಾಸನಗಳಿಂದ ತಿಳಿದು ಬರುತ್ತದೆ. ಈ ಸಹೋದರರು ಮಾಚಿರಾಜ ಮತ್ತು ಮಾಲಾಂಬಿಕೆಯರ ಮಕ್ಕಳು ಇವರು ಜೈನ ಮತಾವಲಂಬಿಗಳಾಗಿದ್ದು ಶ್ರುತಮುನಿಯನ್ನು ರಾಜಗುರುವಾಗಿ ಪಡೆದಿದ್ದರು. ಈ ಶ್ರುತಮುನಿಯು ಮೂಲ ಸಂಘ, ದೇಶೀಯ ಗಣ ಮತ್ತು ಪುಸ್ತಕ ಗಚ್ಛಕ್ಕೆ ಸೇರಿದವನು. ಮತ್ತು ಸಕಲ ಕಲೆಗೂ ಆಶ್ರಯ ಸಾಗಿ, ಊರ್ಧ್ವಮುಖವಾಗಿರುವ ಚಕೋರಗಳಿಗೆ (ಶಿಷ್ಯರಿಗೆ) ಅಭಯ ವನ್ನು ನೀಡುವ ಚಂದ್ರನಂತಿದ್ದನು.

ಪೆರ್ಮಾದೇವರಸ ಮತ್ತು ಪೆರುಮಾಳು ದೇವರಸರು ಹುಲ್ಲಹಳ್ಳಿಯಲ್ಲಿ ತ್ರಿಜಗನ್ಮಂಗಲ ಚೈತ್ಯಾಲಯವನ್ನು ನಿರ್ಮಿಸಿ, ಪುರಾತನವಾದ ಆದಿ ಪರಮೇಶ್ವರ ಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡಿ ಅವುಗಳ ಪೂಜಾವಿಧಿಗೆಂದು ಗದ್ದೆ–ತೋಟಗಳನ್ನು ನೀಡಿರುತ್ತಾರೆ. ಇವರ ಕಾಲದಲ್ಲಿ ಹುಲ್ಲಹಳ್ಳಿಯಲ್ಲಿ ಪರಿಶುದ್ಧ ಚಾರಿತ್ರ್ಯವಂತನೂ, ಎಲ್ಲ ಶಾಸ್ತ್ರಗಳನೂ ಪ್ರಮಾಣವಾಗಿ ಉಳ್ಳವನೂ, ಅಜ್ಞಾನವೆಂಬ ಪರ್ವತವನ್ನು ಸೀಳುವ ವಜ್ರದೋಪಾದಿಯಲ್ಲಿರುವವನೂ ಆದ ಚಂದ್ರಕೀರ್ತಿವ್ರತಿ ಎಂಬ ಜೈನ ಯತಿಯೂ, ಶ್ರುತಮುನಿ ಶಿಷ್ಯರಾದ ಮಾಘನಂದಿ, ಸಿದ್ಧಾಂತಿ ದೇವರು, ಪರಮಾಗಮ ಉಪದೇಶ ನಿಪುಣರಾದ ಶ್ರುತಿ ಕೀರ್ತಿ ದೇವರು, ಪಾರ್ಶ್ವ ದೇವರು ಮತ್ತು ಜಿನಚಂದ್ರ ದೇವರು ಎಂಬುವರು ನೆಲೆಸಿ ಹುಲ್ಲಹಳ್ಳಿಯು ಪ್ರಸಿದ್ಧ ಜೈನ ಕ್ಷೇತ್ರವಾಗಿ ರಾರಾಜಿಸುತ್ತಿತ್ತು. ಪೆರ್ಮಾದೇವರಸ ಮತ್ತು ಪೆರುಮಾಳು ದೇವರಸರ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ತಲೆ ಯೆತ್ತಿ ಹರಿಹರನು ಚಕ್ರವರ್ತಿಯಾಗಿದ್ದನು. ಹರಿಹರನಿಗೆ ಈ ಅರಸರು ಸಾಮಂತರಾಗಿದ್ದರು. ಇವರ ಕಾಲದಲ್ಲಿ ಹುಲ್ಲಹಳ್ಳಿಯು ಸುಖ ಸಮೃದ್ಧಿ ಯಿಂದ ಕೂಡಿತ್ತು. ಚೈತ್ಯಾಲಯ ಮತ್ತು ದೇವಾಲಯಗಳು ವಿದ್ಯಾ ಕೇಂದ್ರವಾಗಿದ್ದುವು. ಸಾಹಿತ್ಯ, ಸಂಗೀತ ಮತ್ತು ನೃತ್ಯಕಲೆಗಳ ಆಗರ ವಾಗಿದ್ದ ಹುಲ್ಲಹಳ್ಳಿಯಲ್ಲಿ ಜೈನ, ವೈಷ್ಣವ ಮತ್ತು ವೀರಶೈವ ಧರ್ಮೀಯರು ಸಹಿಷ್ಣುಗಳಾಗಿಬಾಳುತ್ತಿದ್ದರು. ಈ ಮೂವರುಗಳ ಧರ್ಮ ಮಂದಿರಗಳಾದ ತ್ರಿಜಗನ್ಮಂಗಲ ಮತ್ತು ಪರಮೇಶ್ವರ ಚೈತ್ಯಾಲಯ, ಶ್ರೀವರದರಾಜಸ್ವಾಮಿ ಮತ್ತು ಕಪಿಲಮಲ್ಲಿಕಾರ್ಜುನ ದೇವಾಲಯಗಳಲ್ಲಿ

ಪೂಜೋತ್ಸವಗಳು, ಅಂಗಭೋಗ ಮತ್ತು ರಂಗಭೋಗಗಳು ವೈಭವದಿಂದ ನಡೆಯುತ್ತಿದ್ದವು. ದೇವದಾಸಿ ಪದ್ಧತಿಯು ರೂಢಿಯಲ್ಲಿತ್ತು. ಈ ದೇವ ದಾಸಿಯರಿಗೆ ಸಮಾಜವು ಗೌರವ ಸಂಭಾವನೆಯನ್ನು ಕೊಟ್ಟು ಈ ಪದ್ಧತಿಯನ್ನು ಬಹುಕಾಲ ರಕ್ಷಿಸಿಕೊಂಡು ಬಂದಿತು.

ಹುಲ್ಲಹಳ್ಳಿಯ ಸ್ಥಳ ಮಾಹಿತಿಯಿಂದ ಇಂದಿನ ಪ್ರಾಥಮಿಕ ಶಾಲೆ ಇರುವ ದಿಬ್ಬದ ಪ್ರದೇಶದಲ್ಲಿ ಅರಮನೆಯಿದ್ದಿತೆಂದು ತಿಳಿದು ಬರುತ್ತದೆ. ಇಂದಿಗೂ ಈ ದಿಬ್ಬದ ಸುತ್ತಲ ಪ್ರದೇಶವನ್ನು ಕೋಟೆ ಬುಡ ಎಂದು ಕರೆಯುತ್ತಾರೆ. ಈ ಅರಮನೆ ಪ್ರದೇಶದಲ್ಲಿ ಅಂದು ನಿರ್ಮಾಣವಾಗಿದ್ದ "ಶೃಂಗಾರ ಭಾವಿ" ಎಂದು ಕರೆಯಲ್ಪಡುವ ಸುಂದರ ಕೆತ್ತನೆ ಶಿಲೆಗಳಿಂದ ನಿರ್ಮಾಣವಾದ ಭಾವಿಯೊಂದು ಸಾಕ್ಷಿಯಾಗಿ ಇಂದಿಗೂ ಇದೆ. ಪೆರ್ಮ ದೇವ ಮತ್ತು ಪೆರುಮಾಳು ದೇವರಸರು ತಮ್ಮ ನೆರೆಯ ನಾಡಾದ ಕಣೆಯಲ ನಾಡಿನ (ಕಣೇನೂರು) ಆದಿನಾಥ ಬಸದಿಗೆ ಸ್ವಲ್ಪ ಭೂಭಾಗ ವನ್ನು ದಾನ ನೀಡಿರುವುದಾಗಿ ಕಣೇನೂರು (ಸಂ. 146) ಶಾಸನದಿಂದ ತಿಳಿದು ಬರುತ್ತದೆ.

ಹರಿಹರನ ನಂತರ ಬುಕ್ಕರಾಯನು ವಿಜಯನಗರದ ಅರಸನಾಗಲು, ಈತನ ಕಾಲದಲ್ಲಿ ಕರ್ನಾಟಕದಲ್ಲಿ ಜೈನ–ವೈಷ್ಣವರಲ್ಲಿ ಧರ್ಮಯುದ್ಧ ಪ್ರಾರಂಭವಾಯಿತೆಂದೂ ಬುಕ್ಕರಾಯನು ಇವರಲ್ಲಿ ಧರ್ಮ ಬಂಧುತ್ವ ವನ್ನುಂಟುಮಾಡಿದನೆಂದೂ ಶ್ರವಣಬೆಳಗೊಳದ ಶಾಸನವು ತಿಳಿಸುತ್ತದೆ. ಈ ವೇಳೆಯಲ್ಲಿ ಹುಲ್ಲಹಳ್ಳಿಯ ಜೈನ ಮುನಿಗಳು ಸಂನ್ಯಸನ ವ್ರತದಿಂದ ಪರಮೇಷ್ಠಿ ಮನರಾಗಿ ಸ್ವರ್ಗಸ್ಥರಾದರು. ಪೆರ್ಮದೇವ ಮತ್ತು ಪೆರುಮಾಳು ದೇವರಸರ ನಂತರ ಶ್ರೀನೃಪ ಎಂಬುವನು ಹುಲ್ಲಹಳ್ಳಿಯ ಆಡಳಿತವನ್ನು ನಿರ್ವಹಿಸಿದನು.

15ನೇ ಶತಮಾನದ ಪ್ರಾರಂಭದ ವೇಳೆಗೆ ಹುಲ್ಲಹಳ್ಳಿಯಲ್ಲಿ ಜೈನ ಧರ್ಮದ ಸುವರ್ಣಯುಗ ಮುಗಿದು ಮುಂದಿನ ಆಡಳಿತವನ್ನು ತೆರಕಣಾಂಬಿಯ ಶಾಸನದಿಂದ ತಿಳಿಯಬಹುದಾಗಿದೆ. ಇದರ ಕಾಲ ಕ್ರಿ.ಶ. 1638.

16ನೇ ಶತಮಾನದ ಮಧ್ಯಭಾಗದಲ್ಲಿ ಸೋಮರಾಜವಂಶದ ಶ್ರೀ ಗೋವಣನೂ, ನಂತರ ಈತನ ಮಗನಾದ ಬಸವ ಉರುಫ್ ವೀರ ರಾಜ ಒಡೆಯರ್ ಎಂಬುವನು ಹುಲ್ಲಹಳ್ಳಿಯ ದೊರೆಯಾಗಿದ್ದನು. ವೀರ

ರಾಜ ಒಡೆಯನು ತನ್ನ ಅವಧಿಯಲ್ಲಿ ಹುಲ್ಲಹಳ್ಳಿಯ ಮಲ್ಲಿಕಾರ್ಜುನ ಸ್ವಾಮಿ ಮತ್ತು ವರದರಾಜಸ್ವಾಮಿ ದೇವಾಲಯಕ್ಕೆ ಭೂಮಿಯನ್ನೂ ಮತ್ತು ನರಸಿಂಹಸ್ವಾಮಿಗೆ, ಕಣೆಯಲ ನಾಡಿಗೆ ಸೇರಿದ ಪಿಲ್ಲಹಳ್ಳಿ ಎಂಬ ಗ್ರಾಮವನ್ನೂ, ಸ್ವಲ್ಪ ಭೂ ಭಾಗ ಮತ್ತು ತೋಟವನ್ನೂ ಸರ್ವಮಾನ್ಯ ವಾಗಿ ಕೊಟ್ಟಿರುತ್ತಾನೆ. ವೀರರಾಜ ಒಡೆಯನು ಹುಲ್ಲಹಳ್ಳಿಯಿಂದ ಸುತ್ತಲ ಕಣೆಯಲ ನಾಡು, ತರಗನಹಳ್ಳಿ, ಕಾರೆಯನಾಡು ಮೊದಲಾದ ಪ್ರದೇಶಗಳನ್ನು ಆಳುತ್ತಿದ್ದನು. ಈತನ ಕಾಲದಲ್ಲಿ ತ್ರಿಮಸ್ಥ ಬ್ರಾಹ್ಮಣ ರಾದ ಸ್ಮಾರ್ತರು, ಶ್ರೀವೈಷ್ಣವರು ಮತ್ತು ಮಾಧ್ವರು ಅಗ್ರಹಾರ ಗಳನ್ನು ನಿರ್ಮಿಸಿಕೊಂಡಿದ್ದರು. ವೀರಶೈವರು ಶಾಂತಮಲ್ಲಿಕಾರ್ಜುನ ಮಠದಲ್ಲಿ ಶಕ್ತಿ ವಿಶಿಷ್ಟಾದ್ವೈತ ತತ್ವಾಭ್ಯಾಸದಲ್ಲಿ ನಿರತರಾಗಿದ್ದರು. ಶ್ರೀಮಂತ ವೈಶ್ಯರೂ ಸಾಕಷ್ಟಿದ್ದರು. ವೀರರಾಜನು ತನ್ನ ಆಸ್ಥಾನದಲ್ಲಿ ಆಗಾಗ್ಗೆ ಕವಿಗೋಷ್ಠಿಗಳನ್ನೂ ಮತ್ತು ಸರ್ವಧರ್ಮ ಸಭೆಗಳನ್ನು ನಡೆಸು ತ್ತಿದ್ದನು. ಈತನ ಕಾಲದಲ್ಲಿ ಹೊರನಾಡುಗಳಿಂದ ವಿದ್ವಾಂಸರೂ, ಯತಿಗಳೂ ಹುಲ್ಲಹಳ್ಳಿಗೆ ಬಂದು ಇಲ್ಲಿನ ಪರಿಸರಕ್ಕೆ ಮಾರು ಹೋಗಿ ಇಲ್ಲಿಯೇ ನೆಲೆ ನಿಂತುದೂ ಉಂಟು. ಹುಲ್ಲಹಳ್ಳಿಯು ಉತ್ತಮ ರಾಜ ಬೀದಿಗಳನ್ನೂ ಮತ್ತು ಉದ್ಯಾನವನಗಳನ್ನೂ ಹೊಂದಿದ್ದಿತು.

ವೀರರಾಜ ಒಡೆಯನ ನಂತರ ಅಂದರೆ ಕ್ರಿ.ಶ. 1640ರ ಸಮಯದಲ್ಲಿ ಈತನ ಮಗನಾದ ವೀರಮಹೇಂದ್ರನು ಹುಲ್ಲಹಳ್ಳಿಯನ್ನು ಆಳುತ್ತಿದ್ದನು ಎಂಬುದಾಗಿ ಶಾಂತವೀರಾಚಾರ್ಯ ವಿರಚಿತ 'ಶಿವಲಿಂಗ ಚಾರಿತ್ರ' ಎಂಬ ಗ್ರಂಥದಿಂದ ತಿಳಿದು ಬರುತ್ತದೆ. ವೀರಮಹೇಂದ್ರನ ಕಾಲದಲ್ಲಿ ಹುಲ್ಲ ಹಳ್ಳಿಯ ವೀರಶೈವ ವಿರಕ್ತ ಮಠದ ಮಂದಿರದ ನಿರ್ಮಾಣವಾಯಿತು. ಈ ಮಠದ ಪೀಠಾಧಿಕಾರಿಯಾದ ಚನ್ನವೀರಾರ್ಯರು ವೀರಮಹೇಂದ್ರನ ರಾಜಗುರುವಾಗಿದ್ದರು.

ವೀರಮಹೇಂದ್ರನ ನಂತರದ ಹುಲ್ಲಹಳ್ಳಿಯ ಆಡಳಿತವನ್ನು ಚರಿತ್ರಾರ್ಹ ಮೂಲಗಳಿಂದ ತಿಳಿಯಬಹುದಾಗಿದೆ. ಕ್ರಿ.ಶ. 1611 ರಿಂದ 1761 ರವರೆಗೆ ಮೈಸೂರು ಸಂಸ್ಥಾನವನ್ನು ಮೈಸೂರಿನ ಒಡೆಯರು ಆಳುತ್ತಿದ್ದರು. 1761 ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಬಾಲಕ ನಾದ್ದರಿಂದ ದಂಡನಾಯಕನಾದ ಹೈದರಾಲಿಯು ಪ್ರಬಲನಾಗಿ ತಾನೇ ಅರಸೊತ್ತಿಗೆಯನ್ನು ಏರಿದನು. ನಂತರ ಈತನ ಮಗನಾದ ಟಿಪ್ಪುಸುಲ್ತಾ

ನನು 1799ರ ವರೆಗೂ ರಾಜ್ಯಭಾರವನ್ನು ನಡೆಸಿದನು. ಟಿಪ್ಪುವು ತನ್ನ ಕಾಲದಲ್ಲಿದ್ದ ವಿರೋಧಿ ಪಾಳೆಯಗಾರರನ್ನೆಲ್ಲಾ ಗುಡಿಸಿ ಹಾಕಿ ವೈಭವ ದಿಂದ ರಾಜ್ಯವಾಳಿದನು. ಅತ್ಯಂತ ದಕ್ಷನೂ ಚತುರನೂ ಆದ ಪೂರ್ಣಯ್ಯನು ಈತನ ಪ್ರಧಾನಮಂತ್ರಿಯಾಗಿದ್ದನು. ಟಿಪ್ಪುವಿನ ಸಮರ್ಥ ಆಡಳಿತದಿಂದಾಗಿ ಹುಲ್ಲಹಳ್ಳಿಯಲ್ಲಿ ಗುಡಿ ಕೈಗಾರಿಕೆಗಳು ತಲೆ ಎತ್ತಿದುವು. ಕೈಮಗ್ಗಗಳು, ಎಣ್ಣೆಯ ಗಾಣಗಳು, ಭತ್ತದ ಕೊಟ್ಟಣಗಳು, ಎತ್ತಿನ ಗಾಡಿಯ ಕಾರ್ಖಾನೆಗಳು, ಸಾಡುಹೆಂಚು ಮತ್ತು ಕುಂಭಗಳ ತಯಾರಿಕಾ ಘಟಕಗಳು ಮತ್ತು ಕಮ್ಮಾರರ ಕಬ್ಬಿಣದ ವ್ಯವಸಾಯೋಪ ಕರಣಗಳ ಉತ್ಪಾದನಾ ಕೇಂದ್ರಗಳು ಪ್ರಾರಂಭಗೊಂಡವು. ಹುಲ್ಲಹಳ್ಳಿ ಯಲ್ಲಿ ತಯಾರಾದ ಎಳ್ಳೆಣ್ಣೆಯು ನಾಡಿನಲ್ಲೇ 'ಹುಲ್ಲಹಳ್ಳಿ ತುಪ್ಪ'ವೆಂದು ಪ್ರಸಿದ್ಧಿಯನ್ನು ಪಡೆಯಿತು. ಉತ್ಪಾದಿತ ವಸ್ತುಗಳು ರಾಜಧಾನಿಯಾದ ಶ್ರೀರಂಗಪಟ್ಟಣ ಹಾಗೂ ಮೈಸೂರಿನಲ್ಲಿ ಮಾರಾಟವಾಗುತ್ತಿದ್ದುವು.

ಟಿಪ್ಪುಸುಲ್ತಾನನ ಮರಣಾನಂತರ ಬ್ರಿಟಿಷರ ಸಹಾಯದಿಂದ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಡಳಿತವು ಮತ್ತೆ ಪ್ರಾರಂಭ ವಾಯಿತು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನದ ಪ್ರತಿ ಹಳ್ಳಿಯಲ್ಲೂ ಪ್ರಜಾಪ್ರಭುತ್ವದ ವ್ಯವಸ್ಥೆ ಪ್ರಾರಂಭ ಗೊಂಡು 'ಮೊಹತರ್ಪ' ಎಂಬ ಆಡಳಿತ ಪದ್ಧತಿಯು ಜಾರಿಗೆ ಬಂದಿತು. ಮೊಹತರ್ಪದಲ್ಲಿ ನಾಡಗೌಡನು ಮುಖ್ಯಸ್ಥನಾಗಿರುತ್ತಿದ್ದನು. ಇವನಿಗೆ ದೇಶಶೆಟ್ಟಿ, ತಳವಾರ, ನೀರುಗಂಟಿ ಮತ್ತು ಚಕ್ರ ಇವರುಗಳು ಇರು ತ್ತಿದ್ದರು.

ನಾಡಗೌಡನು ಗ್ರಾಮದ ಕುಂದು ಕೊರತೆಗಳ ವಿಚಾರಣೆ ಮತ್ತು ಅದರ ನಿವಾರಣೆಗೆ ಗಮನಕೊಟ್ಟು ಗ್ರಾಮದ ಅಭಿವೃದ್ಧಿಯಲ್ಲಿ ಆಸ್ಥೆ ಯನ್ನು ವಹಿಸುತ್ತಿದ್ದನು. ದೇಶಶೆಟ್ಟಿಯು ತೆರಿಗೆ ಮೊದಲಾದ ಹಣಕಾಸಿನ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದನು. ತಳವಾರನು ಗ್ರಾಮರಕ್ಷಕ ನಾಗಿದ್ದನು. ನೀರುಗಂಟಿಯು ಗ್ರಾಮದ ನೀರಿನ ಸೌಲಭ್ಯವನ್ನು ನೋಡಿ ಕೊಳ್ಳುತ್ತಿದ್ದನು. ಚಕ್ರನು ಇವರೆಲ್ಲರ ಸಹಾಯಕನಾಗಿದ್ದು ಗ್ರಾಮದ ನೈರ್ಮಲ್ಯವನ್ನು ಕಾಪಾಡುತ್ತಿದ್ದನು.

ಹುಲ್ಲಹಳ್ಳಿಯ ನಾಡಗೌಡರಾಗಿ ದೊಡ್ಡಹಟ್ಟಿ ವೀರಪ್ಪ, ಸುಬ್ಬ

ರಾಯಪ್ಪ, ನಂಜಪ್ಪ, ಕಾಳಮಾದಪ್ಪ, ಉರುಫ್ ಕೂಸಣ್ಣ ಇವರುಗಳು ಸೇವೆಸಲ್ಲಿಸಿದ್ದಾರೆ. ದೇಶಶೆಟ್ಟಿಯಾಗಿ ಮಾದಶೆಟ್ಟಿ, ತಳವಾರನಾಗಿ ಮೋರಿ ಬೆಟ್ಟನಾಯ್ಕನ ಮಗ ಸಿದ್ಧನಾಯ್ಕ. ನೀರುಗಂಟಿಯಾಗಿ ಲಕ್ಷ್ಮಣರಾಜು ಮಗ ವೆಂಕಟರಾಜು, ಚಕ್ರನಾಗಿ ತಿಬ್ಬ ಮತ್ತು ತಿಬ್ಬಯ್ಯನ ಮಗ ಹೊನ್ನಯ್ಯ ಇವರುಗಳೂ ಗ್ರಾಮಕ್ಕಾಗಿ ದುಡಿದಿದ್ದಾರೆ. ಸರ್ಕಾರವು ಚಕ್ರರ ಜೀವನಾಂಶಕ್ಕೆ ಜಮೀನನ್ನು ಬಿಟ್ಟುಕೊಟ್ಟಿತ್ತು.

ಕ್ರಿ ಶ. 1890ರ ನಂತರ ಶ್ರೀ ಚಾಮರಾಜೇಂದ್ರ ಒಡೆಯರ್ ಅವರ ಪ್ರಭುತ್ವದಲ್ಲಿ ಗ್ರಾಮಾಡಳಿತದಲ್ಲಿ ಬದಲಾವಣೆಯಾಗಿ ಗ್ರಾಮಯೂನಿಯನ್ ಎಂಬ ಹೆಸರಿನಿಂದ ಆಡಳಿತ ಪ್ರಾರಂಭವಾಯಿತು. ಇದರಲ್ಲಿ ನಾಡಗೌಡ ಮತ್ತು ದೇಶಶೆಟ್ಟಿಗೆ ಬದಲಾಗಿ ಪಟೇಲ ಮತ್ತು ಶ್ಯಾನುಭೋಗರು ಅಧಿಕಾರಿಗಳಾದರು.

ಹುಲ್ಲಹಳ್ಳಿ ಗ್ರಾಮಯೂನಿಯನ್ನಿನ ಪಟೇಲರಾಗಿ ರಂಗಶೆಟ್ಟಿ, ಪುಟ್ಟಶೆಟ್ಟಿ, ಪೆದ್ದ ಅಳಗಿರಿಶೆಟ್ಟಿ, ರಂಗಸ್ವಾಮಿಶೆಟ್ಟಿ, ಬಂಗಾರಶೆಟ್ಟಿ ಹಾಗೂ ಹೆಚ್. ಟಿ. ಪುಟ್ಟಯ್ಯ ಇವರುಗಳೂ ; ಶ್ಯಾನುಭೋಗರಾಗಿ ಕಾಶಿ ನಂಜುಂಡಯ್ಯ, ನಂಜುಂಡಯ್ಯ, ನಂಜಪ್ಪಯ್ಯ, ಶ್ರೀಕಂಠಯ್ಯ ಮತ್ತು ಹೆಚ್. ಎನ್. ಕೃಷ್ಣಪ್ಪ-ಇವರುಗಳು ಸೇವೆಸಲ್ಲಿಸಿರುವರು. ತಳವಾರ, ನೀರುಗಂಟಿ ಮತ್ತು ಚಕ್ರರಾಗಿ ಹಿಂದಿನವರೇ ಮುಂದುವರಿದರು.

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಅಧಿಕಾರದ ಅವಧಿಯಲ್ಲಿ (ಕ್ರಿ.ಶ. 1894-1940) ಎಲ್ಲ ಹಳ್ಳಿಗಳಲ್ಲೂ ಸರ್ಕಾರಿ ಪ್ರಾಥಮಿಕ ಶಾಲೆಗಳನ್ನು ತೆರೆದಂತೆ ಹುಲ್ಲಹಳ್ಳಿಯಲ್ಲೂ ಲೋಯರ್ ಪ್ರೈಮರಿ ಶಾಲೆಯನ್ನು ತೆರೆಯಲಾಯಿತು. ಯಾವ ಸ್ಥಳದಲ್ಲಿ ಕವಿಗೋಷ್ಠಿಯೂ ಮತ್ತು ಸರ್ವಧರ್ಮ ಸಭೆಗಳೂ ಹಿಂದಿನ ಹುಲ್ಲಹಳ್ಳಿಯ ಪಾಳೆಯಗಾರರ ಆಶ್ರಯದಲ್ಲಿ ನಡೆಯುತ್ತಿದ್ದಿತೋ ಅಂತಹ ಅರಮನೆಯಿದ್ದ ಸ್ಥಳದಲ್ಲಿ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿದುದು ಒಂದು ಸುಯೋಗವೆನ್ನಬಹುದು.

ಕ್ರಿ.ಶ. 1927 ರಲ್ಲಿ ಗ್ರಾಮ ಯೂನಿಯನ್ನನ್ನು ಗ್ರಾಮ ಪಂಚಾಯತ್ ಎಂಬ ಹೆಸರಿನಲ್ಲಿ ಬದಲಾಯಿಸಲಾಯಿತು. ಇದರಂತೆ ಗ್ರಾಮ ಪಂಚಾಯತ್‌ನಲ್ಲಿ ಒಬ್ಬ ಅಧ್ಯಕ್ಷ ಅಥವಾ ಛೇರ್ಮನ್ ಹಾಗೂ ಏಳರಿಂದ ಹದಿಮೂರು ಮಂದಿ ಸದಸ್ಯರು ಇರುತ್ತಿದ್ದರು.

ಹುಲ್ಲಹಳ್ಳಿಯ ಗ್ರಾಮ ಪಂಚಾಯತ್‌ನ ಮೊದಲ ಅಧ್ಯಕ್ಷರಾಗಿ

ವೆಂಕಟಸುಬ್ಬಾಪಂಡಿತರೂ (1927 ರಿಂದ 1935), ಎರಡನೇ ಅಧ್ಯಕ್ಷರಾಗಿ ಶ್ರೀಕಂಠಜೋಯಿಸರೂ (1935-1967) ಸೇವೆಯನ್ನು ಸಲ್ಲಿಸಿದರು.

1947 ರಲ್ಲಿ ಬ್ರಿಟಿಷರ ಆಡಳಿತದಿಂದ ಮುಕ್ತಗೊಂಡ ಭಾರತದಲ್ಲಿ ಚುನಾವಣಾ ಪದ್ಧತಿಯನ್ನೊಳಗೊಂಡ ಪ್ರಜಾಪ್ರಭುತ್ವ ವ್ಯವಸ್ಥೆ ಜಾರಿಗೆ ಬಂದಿತು. ಇದರಂತೆ ಮೈಸೂರು ಸಿಂಹಾಸನಾಧೀಶ್ವರ ಶ್ರೀ ಜಯ ಚಾಮರಾಜ ಒಡೆಯರ್ (1940 ರಿಂದ 1950) ಅವರ ಕಾಲದಲ್ಲಿ ಆಡಳಿತವು ಮಹಾರಾಜರಿಂದ ಚುನಾಯಿತ ಸರ್ಕಾರಗಳಿಗೆ ಹಸ್ತಾಂತರಿಸ ಲಾಯಿತು. ಗ್ರಾಮಾಡಳಿತವು ಗ್ರಾಮ ಪಂಚಾಯತ್ ಎಂಬ ಹೆಸರಿನಲ್ಲೇ ಮುಂದುವರಿಯಿತು. ಈ ವೇಳೆಯಲ್ಲೂ ಹುಲ್ಲಹಳ್ಳಿಯ ಗ್ರಾಮಾಧ್ಯಕ್ಷ ರಾಗಿ ಶ್ರೀಕಂಠಜೋಯಿಸರೇ ಚುನಾಯಿತರಾಗಿ 1967ರ ವರೆಗೂ ಸೇವೆ ಯನ್ನು ಸಲ್ಲಿಸಿದರು. ಇವರ ದೀರ್ಘ ಸೇವೆಯ ಅವಧಿಯಲ್ಲಿ ಅಪ್ಪರ್ ಪ್ರೈಮರಿ ಶಾಲೆ, ಪ್ರೌಢಶಾಲೆ, ಸಾರ್ವಜನಿಕ ಆಸ್ಪತ್ರೆ, ಪಶುವೈದ್ಯ ಶಾಲೆ, ಪೋಸ್ಟ್ ಆಫೀಸ್, ವಿದ್ಯುಚ್ಛಕ್ತಿ ಸೌಲಭ್ಯ, ವ್ಯವಸಾಯ ಸಹಕಾರ ಸಂಘ ಸ್ಥಾಪನೆ ಮೊದಲಾದ ಅನುಕೂಲಗಳು ಗ್ರಾಮಕ್ಕೆ ದೊರೆತವು. ಕಪಿಲಾನದಿಯ ಪ್ರವಾಹ ಪೀಡಿತ ಕುಟುಂಬಗಳಿಗೆ ವಸತಿ ಸೌಕರ್ಯ ಕಲ್ಪಿಸಲು 25 ಕುಟುಂಬಗಳಿಗೆ ಉಚಿತ ನಿವೇಶನಗಳನ್ನೂ, 50 ಹರಿಜನ ಕುಟುಂಬಗಳಿಗೂ ಉಚಿತವಾಗಿ ಮತ್ತು ಇತರ ಬಡಕುಟುಂಬಗಳಿಗೆ 150 ರೂ ದರದಲ್ಲಿ 50 ನಿವೇಶನಗಳನ್ನೂ ಹಂಚಲಾಯಿತು. ಗ್ರಾಮದಲ್ಲಿ ನೀರಿನ ಸೌಕರ್ಯವನ್ನು ಹೆಚ್ಚಿಸಲು ವಾಟರ್ ಟ್ಯಾಂಕನ್ನು ನಿರ್ಮಿಸ ಲಾಯಿತು.

ಇಷ್ಟೆಲ್ಲಾ ಅನುಕೂಲವನ್ನು ಹುಲ್ಲಹಳ್ಳಿಗೆ ಒದಗಿಸಿದ ಶ್ರೀಕಂಠ ಜೋಯಿಸರು ದೈವಭಕ್ತರೂ, ಉದಾರಿಗಳೂ, ಸರ್ವಜನಾದರಣೀಯರೂ ಆಗಿದ್ದರು. ಹಸಿದು ಬಂದವರಿಗೆ ಜಾತಿ ವೈಷಮ್ಯವಿಲ್ಲದೆ ತಮ್ಮ ಮನೆಯಲ್ಲಿ ಅನ್ನದಾನ ಮಾಡುತ್ತಿದ್ದರು. ಶ್ರೀಕಂಠಜೋಯಿಸರು, ಸುಬ್ಬರಾಯ ಜೋಯಿಸ್ ಮತ್ತು ಚೆನ್ನಮ್ಮ ದಂಪತಿಗಳ ಮಕ್ಕಳು. ಸುಬ್ಬರಾಯ ಜೋಯಿಸರು ಮೈಸೂರಿನ ಅರಮನೆಯಲ್ಲಿ ಪೇಷ್ಕಾರ್ ವೃತ್ತಿಯಲ್ಲಿದ್ದರು. ಇವರು ನಿವೃತ್ತರಾದ ಮೇಲೆ ಹುಲ್ಲಹಳ್ಳಿಯಲ್ಲಿ ಬಂದು ನೆಲೆಸಿದರು. (ಸು. 1900 ರಲ್ಲಿ) ಶ್ರೀಕಂಠಜೋಯಿಸರ ಬಾಲ್ಯದ ಶಿಕ್ಷಣ ನಂಜನ ಗೂಡಿನಲ್ಲಿ ನಡೆಯಿತು. ತಂದೆಯವರು ನಡೆಸುತ್ತಿದ್ದ ಮಾವತ್ತೂರು

ಹಳ್ಳಿಗಳ ಪೌರೋಹಿತವನ್ನು ಶ್ರೀಕಂಠ ಜೋಯಿಸರು ಮುಂದುವರಿಸಿದರು. ಹುಲ್ಲಹಳ್ಳಿಯ ಊರೊಟ್ಟಿನ ಗೌರಿಹಬ್ಬವನ್ನು ನಡೆಸಿಕೊಂಡು ಬರುತ್ತಿದ್ದರು. 1967 ರಲ್ಲಿ ತಮ್ಮ ಛೇರ್ಮನ್/ಗ್ರಾಮಾಧ್ಯಕ್ಷ ವೃತ್ತಿಯಿಂದ ನಿವೃತ್ತರಾಗಿ ವಿಶ್ರಾಂತಿಯನ್ನು ಹೊಂದಿದರು.

ದಿನಾಂಕ 1–7–1968 ರಲ್ಲಿ ಹುಲ್ಲಹಳ್ಳಿಯ ಗ್ರಾಮಾಧ್ಯಕ್ಷರಾಗಿ ಶ್ರೀ ಹೆಚ್. ಎಸ್. ಶಿವನಾಗಪ್ಪನವರು ಚುನಾಯಿತರಾದರು. ಇವರ ಕಾಲಾವಧಿ 1968 ರಿಂದ 1983. ಇವರ ಆಡಳಿತದ ಅವಧಿಯಲ್ಲಿ ಹುಲ್ಲಹಳ್ಳಿಯು ಅನೇಕ ಉತ್ತಮ ನಾಗರಿಕ ಸೌಲಭ್ಯವನ್ನು ಪಡೆದುಕೊಂಡಿತು.

ಹೆಚ್. ಎಸ್. ಶಿವನಾಗಪ್ಪನವರು ಅಧಿಕಾರಕ್ಕೆ ಬಂದ ಕೂಡಲೇ ಕೈಗೊಂಡ ಪ್ರಥಮ ಕಾರ್ಯವೆಂದರೆ ಹುಲ್ಲಹಳ್ಳಿಯ ಪ್ರಾಚೀನ ದೇವಾಲಯಗಳ ಜೀರ್ಣೋದ್ಧಾರ. ಕರ್ನಾಟಕ ಸರ್ಕಾರವು ನೀಡಿದ ಧನಸಹಾಯ ಮತ್ತು ಸಹೃದಯ ದಾನಿಗಳಿಂದ ಸಂಗ್ರಹಿಸಲಾದ ಸುಮಾರು ಎರಡು ಲಕ್ಷ ರೂ. ಗಳಿಂದ ಶಿಥಿಲಗೊಂಡ ಗ್ರಾಮದ ಎಲ್ಲ ದೇವಾಲಯಗಳೂ ಜೀರ್ಣೋದ್ಧಾರವನ್ನು ಹೊಂದಿದುವು. ಕಪಿಲಾನದಿ ಮತ್ತು ಹುಲ್ಲಹಳ್ಳಿ ಕಾಲುವೆಗಳಲ್ಲಿ ಗ್ರಾಮದ ಜನರಿಗೆ ಸ್ನಾನ ಮತ್ತು ಬಟ್ಟೆಗಳನ್ನು ಶುಚಿಗೊಳಿಸಲು ಅನುಕೂಲವಾಗುವಂತೆ ಕಲ್ಲಿನ ಸೋಪಾನಗಳ ನಿರ್ಮಾಣ, ಪ್ರಾಥಮಿಕ ಶಾಲಾ ಮಕ್ಕಳ ಸಂಖ್ಯೆಯ ಏರಿಕೆಯನ್ನು ಗಮನಿಸಿ ಹೊಸದಾಗಿ ಆರು ಕೊಠಡಿಗಳ ನಿರ್ಮಾಣ, ಜೆ. ಎಸ್. ಎಸ್. ಪ್ರೌಢಶಾಲೆಯನ್ನು ಜ್ಯೂನಿಯರ್ ಕಾಲೇಜಾಗಿ ಪರಿವರ್ತನೆ, ಉರ್ದು ಹಿರಿಯ ಪ್ರಾಥಮಿಕ ಶಾಲೆ ಮತ್ತು ಸರ್ಕಾರಿ ಪೂರ್ವ ಪ್ರಾಥಮಿಕ ಶಾಲೆ, ಒಂದು ಮತ್ತು ಎರಡನೇ ತರಗತಿವರೆಗೆ ಜೆ. ಎಸ್. ಎಸ್. ಕಾನ್ವೆಂಟ್, ಶಸ್ತ್ರ ಚಿಕಿತ್ಸಾ ವೈದ್ಯರುಳ್ಳ ಅಪ್‌ಗ್ರೇಡ್ ಪಶುವೈದ್ಯ ಶಾಲೆ ಮತ್ತು ಹೆರಿಗೆ ಆಸ್ಪತ್ರೆಗಳನ್ನು ತೆರೆಯಲಾಯಿತು. ವಿದ್ಯುಚ್ಛಕ್ತಿ ಸೆಕ್ಷನ್ ಆಫೀಸ್, ಟೆಲಿಫೋನ್ ಎಕ್ಸ್‌ಛೇಂಜ್ ಮತ್ತು ಹಾಲಿನ ಡೈರಿ ಪ್ರಾರಂಭಗೊಂಡವು. ಗ್ರಾಮದ ಪ್ರಮುಖ ರಸ್ತೆಗಳು, ಚರಂಡಿಗಳು ದುರಸ್ತಿಗೊಂಡವು ಬಸ್ ಸೌಲಭ್ಯ ಅಧಿಕಗೊಂಡು ಬೆಂಗಳೂರು ಹುಲ್ಲಹಳ್ಳಿಗೆ ನೇರ ಬಸ್ ಸೌಲಭ್ಯವೊದಗಿತು. ಪಂಚಾಯತ್ ಭವನ, ಹರಿಜನರ ಸಮುದಾಯ ಭವನ, ಆರಕ್ಷಕಠಾಣೆ ಮತ್ತು ವಸತಿ ಗೃಹ ನಿರ್ಮಾಣವಾದುವು. ಬಡವರು ಮತ್ತು ದಲಿತರಿಗೆ ಸುಮಾರು 700 ಉಚಿತ ನಿವೇಶನಗಳನ್ನು ನೀಡಲಾಯಿತು.

ಕಾರ್ಪೊರೇಷನ್ ಬ್ಯಾಂಕ್, ಎಂ. ಡಿ. ಸಿ. ಸಿ. ಬ್ಯಾಂಕ್, ಮತ್ತು ನಂ–3 ಕಬಿನಿ ಬಲದಂಡೆ ನಾಲಾ ಕಛೇರಿಗಳನ್ನು ತೆರೆಯಲಾಯಿತು. ಮಹಿಳೆಯರ ಉನ್ನತಿಗಾಗಿ ಮಹಿಳಾ ಸಮಾಜ ಮತ್ತು ಯುವತಿ ಮಂಡಲಿಯನ್ನು ಸ್ಥಾಪಿಸಲಾಯಿತು. ವಯಸ್ಕರ ಶಿಕ್ಷಣ ಸಮಿತಿಯ ಸರ್ಕಲ್ ಲೈಬ್ರರಿ ಮತ್ತು ಜಿಲ್ಲಾ ಲೈಬ್ರರಿ ವಿಭಾಗವನ್ನೂ ತೆರೆಯಲಾಯಿತು.

ಇದೇ ವೇಳೆಯಲ್ಲಿ ಗ್ರಾಮಾಭಿವೃದ್ಧಿಯಲ್ಲಿ ಸಹಕರಿಸಲು ಯುವಕ ಸಂಘ, ನಾಯಕರ ಅಭಿವೃದ್ಧಿ ಸಂಘ, ವೀರಶೈವ ಮತ್ತು ಸಜ್ಜನ ವೀರ ಶೈವ ಸಂಘ ಮತ್ತು ಕುಸ್ತಿ ಸಂಘ, ಅಂಬೇಡ್ಕರ್ ಯುವಕ ಸಂಘ ಹಾಗೂ ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮದ ಜನತೆಗೆ ವಿವಿಧ ರೀತಿಯ ಸೌಕರ್ಯಗಳನ್ನು ಒದಗಿಸುವ ಉದ್ದೇಶದಿಂದ ಲಯನ್ಸ್ ಕ್ಲಬ್‌ಗಳನ್ನು ಸ್ಥಾಪಿಸಲಾಯಿತು.

ಇಷ್ಟೆಲ್ಲಾ ಅನುಕೂಲಗಳನ್ನು ಹೊಂದಿದ ಹುಲ್ಲಹಳ್ಳಿಯು ಕರ್ನಾಟಕ ರಾಜ್ಯದಲ್ಲೇ ಪ್ರಥಮವಾಗಿ ಡೆಪ್ಯುಟಿ ತಹಶೀಲ್ದಾರ್ ಅವರ ನಾಡ್ ಆಫೀಸನ್ನೂ ಹೊಂದಿದೆ.

ಸರ್ಕಾರಿ ಪ್ರಾಥಮಿಕ ಶಾಲೆಯ ಹೆಣ್ಣು ಮಕ್ಕಳ ಉತ್ತಮ ದಾಖಲಾತಿ ಮತ್ತು ಹಾಜರಾತಿಯನ್ನೂ, ಶಾಲಾಭಿವೃದ್ಧಿ ಸಮಿತಿಯ ಕಾರ್ಯ ದಕ್ಷತೆಯನ್ನೂ ಗಮನಿಸಿ (ಗ್ರಾಮಾಧ್ಯಕ್ಷರೇ ಈ ಸಮಿತಿಯ ಅಧ್ಯಕ್ಷರೂ ಸಹಾ) ಸರ್ಕಾರವು 50 ಸಾವಿರ ರೂ.ಗಳ ನೆರವು ನೀಡಿದೆ.

1981–82 ನೇ ಸಾಲಿನಲ್ಲಿ ಹುಲ್ಲಹಳ್ಳಿ ಪಂಚಾಯಿತಿಯು ತನ್ನ ವಿವಿಧ ಉತ್ತಮ ಸೇವೆಗಾಗಿ ಜಿಲ್ಲಾಮಟ್ಟದಲ್ಲಿ ಪ್ರಥಮ ಸ್ಥಾನವನ್ನೂ, ವಿಭಾಗ ಮಟ್ಟದಲ್ಲಿ ದ್ವಿತೀಯ ಸ್ಥಾನವನ್ನೂ ಮತ್ತು ರಾಜ್ಯ ಮಟ್ಟದಲ್ಲಿ ತೃತೀಯ ಸ್ಥಾನವನ್ನೂ ಪಡೆದು, ಕರ್ನಾಟಕ ಸರ್ಕಾರದಿಂದ ಪ್ರಶಸ್ತಿ ಪತ್ರವನ್ನೂ ಮತ್ತು ಇನ್ನೂರಐವತ್ತು (ರೂ. 250) ರೂಪಾಯಿಗಳ ಸಾಂಕೇತಿಕ ಬಹುಮಾನವನ್ನೂ ಪಡೆದಿದೆ.

ಹುಲ್ಲಹಳ್ಳಿಯ ಸರ್ವತೋಮುಖ ಅಭಿವೃದ್ಧಿಗೆ ಪ್ರಮುಖ ಕಾರಣರಾದ ಶ್ರೀ ಹೆಚ್. ಶಿವನಾಗಪ್ಪನವರು ದಿನಾಂಕ 22–11–1936 ರಲ್ಲಿ ಜಮೀನ್ದಾರರಾದ ಹೆಚ್. ಎನ್. ಶಿವರುದ್ರಪ್ಪ ಮತ್ತು ಲಕ್ಷ್ಮೀದೇವಮ್ಮನವರಿಗೆ ಹಿರಿಯ ಮಗನಾಗಿ ಜನಿಸಿದರು. ಇವರ ಪ್ರಾಥಮಿಕ ಶಿಕ್ಷಣ, ಹುಲ್ಲಹಳ್ಳಿಯಲ್ಲಿ. ಕಾಲೇಜು ಶಿಕ್ಷಣ (ಬಿ.ಕಾಂ. ಪದವಿ) ಮೈಸೂರಿನ

ಬನುಮಯ್ಯ ಕಾಲೇಜಿನಲ್ಲಿ. 1957 ರಿಂದ 1961ರ ವರೆಗೆ ಭದ್ರಾವತಿ ಪೇಪರ್ ಮಿಲ್ಸ್‌ನಲ್ಲಿ ಅಕೌಂಟೆಂಟ್ ಅಸಿಸ್ಟೆಂಟ್ ಆಗಿ ದುಡಿದರು. ನಂತರ ಈ ಹುದ್ದೆಗೆ ರಾಜೀನಾಮೆ, ಹುಲ್ಲಹಳ್ಳಿಗೆ ಆಗಮನ. 1963 ರಿಂದ 1967 ರವರೆಗೆ ಭಾರತದ ಜೀವವಿಮಾ ಸಂಸ್ಥೆಗೆ ಏಜೆಂಟರಾಗಿ ಮೂರು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿಕೊಟ್ಟು ಚಾಮರಾಜನಗರ ವಿಭಾಗ ಮಟ್ಟ ದಲ್ಲಿ ಚಿನ್ನದ ಪದಕವನ್ನು ಪಡೆದರು. 1968 ರಲ್ಲಿ ಹುಲ್ಲಹಳ್ಳಿಯ ಪಂಚಾಯಿತ್ತಿ ಛೇರ್ಮನ್ ಆಗಿ ಆಯ್ಕೆಗೊಂಡರು. 1973 ರಿಂದ 1982ರ ವರೆಗೆ ನಂಜನಗೂಡು ಶ್ರೀಕಂಠೇಶ್ವರ ದೇವಾಲಯದ ಧರ್ಮದರ್ಶಿಯಾಗಿ ದ್ದರು. 1978–79 ರಲ್ಲಿ ಭೂಸುಧಾರಣಾ ಸಮಿತಿಯ ಸದಸ್ಯರಾಗಿ ಸರ್ಕಾರ ದಿಂದ ನೇಮಕಗೊಂಡಿದ್ದರು. ಶ್ರೀ ಹೆಚ್. ಎಸ್. ಶಿವನಾಗಪ್ಪನವರು ಗ್ರಾಮಾಭಿವೃದ್ಧಿ ಕಾರ್ಯಗಳ ಜೊತೆಗೆ ಗ್ರಾಮ ಪಂಚಾಯಿತ್ತಿ ಮಟ್ಟದಲ್ಲಿ ರಾಷ್ಟ್ರೀಯ ಹಬ್ಬವಾದ ಸ್ವಾತಂತ್ರ್ಯೋತ್ಸವವನ್ನು ಆಚರಿಸುತ್ತಿದ್ದರು. ಈ ಸಂದರ್ಭದಲ್ಲಿ ಶಾಲಾ ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿ ಬಟ್ಟೆ, ಪುಸ್ತಕಗಳನ್ನೂ, ಬಡಜನತೆ ಮತ್ತು ದಲಿತರಿಗೆ ಸೀರೆ ಮತ್ತು ಪಂಚೆ ಗಳನ್ನೂ ಪ್ರತಿವರ್ಷವೂ ಕೊಡುಗೈ ದಾನಿಗಳಿಂದ ಸಂಗ್ರಹಿಸಿದ ದಾನದ ಹಣದಿಂದ ನೀಡುತ್ತಿದ್ದರು. ಇವರ ಎಲ್ಲ ರೀತಿಯ ಗ್ರಾಮಾಭಿವೃದ್ಧಿ ಕಾರ್ಯಗಳಲ್ಲೂ ಗ್ರಾಮದ ದಾನಿಗಳು ಉದಾರವಾಗಿ ಸಹಾಯ ಹಸ್ತ ವನ್ನು ನೀಡುತ್ತಿದ್ದರು.

ಇಂದಿನ ಕರ್ನಾಟಕದ ಶ್ರೀ ರಾಮಕೃಷ್ಣ ಹೆಗ್ಗಡೆಯವರ ಸರ್ಕಾರವು ರಾಜ್ಯದಲ್ಲಿ ಅಧಿಕಾರ ವಿಕೇಂದ್ರೀಕರಣದ ದೃಷ್ಟಿಯಿಂದ 'ಮಂಡಲ್ ಪಂಚಾಯಿತ್ತಿ' ಹಾಗೂ 'ಜಿಲ್ಲಾ ಪರಿಷತ್'ಗಳ ವ್ಯವಸ್ಥೆಯನ್ನು ಜಾರಿಗೆ ತರಲು ಕ್ರಿ.ಶ. 198[illegible]ರ ಆಗಸ್ಟ್ ತಿಂಗಳಿನಲ್ಲಿ ರಾಜ್ಯದ ಎಲ್ಲ 'ಗ್ರಾಮ ಪಂಚಾಯಿತ್ತಿ'ಗಳನ್ನೂ ವಿಸರ್ಜಿಸಲಾಯಿತು. ಇಲ್ಲಿಗೆ ತಮ್ಮ ಗ್ರಾಮದ ಉನ್ನತಿಯನ್ನೇ ಕುರಿತು ಚಿಂತಿಸುತ್ತಿದ್ದ ಹುಲ್ಲಹಳ್ಳಿಯ ಸುಪುತ್ರ ಶ್ರೀ ಹೆಚ್. ಎಸ್. ಶಿವನಾಗಪ್ಪನವರ ಗ್ರಾಮಾಧಿಕಾರ ಕೊನೆಗೊಂಡಿತು.

ಕರ್ನಾಟಕ ಸರ್ಕಾರದ ಹೊಸ ನೀತಿಯ ಪ್ರಕಾರ ಹುಲ್ಲಹಳ್ಳಿ ಹೋಬಳಿಯನ್ನು ಹುಲ್ಲಹಳ್ಳಿ ಮತ್ತು ಹುರ ಎಂಬ ಎರಡು 'ಜಿಲ್ಲಾ ಪರಿಷತ್ ಕೇಂದ್ರ'ಗಳನ್ನಾಗಿ ವಿಭಾಗಿಸಲಾಯಿತು. ಇದರಲ್ಲಿ ಹುಲ್ಲಹಳ್ಳಿ ಯನ್ನು 'ಸಾಮಾನ್ಯ ಮಹಿಳಾ ಸದಸ್ಯೆಯ ಮೀಸಲು ಕ್ಷೇತ್ರ'ವೆಂದು

ಘೋಷಿಸಲಾಯಿತು. ಈ 'ಹುಲ್ಲಹಳ್ಳಿ ಜಿಲ್ಲಾ ಪರಿಷತ್ ಕ್ಷೇತ್ರ'ದ ಪರಿಧಿಯಲ್ಲಿ ಇಪ್ಪತ್ತಾರು ಗ್ರಾಮಗಳನ್ನು ಸೇರಿಸಲಾಯಿತು. ಅವುಗಳು ಯಾವುವೆಂದರೆ ;—

1. ಬೆಳಲೆ 2. ಶಿರಮಳ್ಳಿ 3. ಕಾರ್ಯ 4. ಮಾದಾಪುರ 5. ದುಗ್ಗಹಳ್ಳಿ 6. ಯಾಳೇಹಳ್ಳಿ 7. ಶೆಟ್ಟಹಳ್ಳಿ 8. ಮಂಗಳೂರು 9. ಕಡಬೂರು 10. ರಾಜೂರು 11. ಆಕಲ 12. ನೆಲ್ಲಿತಾಳಪುರ 13. ಚಂದ್ರವಾಡಿ 14. ಬಸಾಪುರ 15. ಕಾಟೂರು 16. ಇಬ್ಜಾಲ 17. ಹರದನಹಳ್ಳಿ 18. ಉಚ್ಚಗಣಿ 19. ಮಾದನಹಳ್ಳಿ 20. ಜೋಗಿಪಾಳ್ಯದ ಹುಂಡಿ 21. ಕಣೇನೂರು 22. ಕಪ್ಪಸೋಗೆ 23. ತರಗನಹಳ್ಳಿ 24. ಮೊತ್ತ 25. ಕುರಿಹುಂಡಿ 26. ಹುಲ್ಲಹಳ್ಳಿ.

ಹುಲ್ಲಹಳ್ಳಿ ಜಿಲ್ಲಾ ಪರಿಷತ್ ಕ್ಷೇತ್ರವನ್ನು 'ಹುಲ್ಲಹಳ್ಳಿ' ಮತ್ತು 'ನೆಲ್ಲಿತಾಳಪುರ' ಎಂಬುದಾಗಿ ಎರಡು 'ಮಂಡಲ್ ಪಂಚಾಯತ್''ಗಳನ್ನಾಗಿ ವಿಭಾಗಿಸಲಾಯಿತು. 'ಹುಲ್ಲಹಳ್ಳಿ ಮಂಡಲ್ ಪಂಚಾಯತ್'' ವ್ಯಾಪ್ತಿಯಲ್ಲಿ ಈ ಕೆಳಕಂಡ ಗ್ರಾಮಗಳನ್ನು ಸೇರಿಸಲಾಯಿತು. (ಪುಟ 111ರ ಪಟ್ಟಿ ನೋಡಿ)

ಮೇಲಿನ ನಿಯಮಕ್ಕೆ ಅನುಗುಣವಾಗಿ 1987ರ ಜನವರಿ ತಿಂಗಳಿನಲ್ಲಿ ಸರ್ಕಾರವು 'ಜಿಲ್ಲಾ ಪರಿಷತ್'' ಕ್ಷೇತ್ರಗಳಿಗೆ ಚುನಾವಣೆಯನ್ನು ನಡೆಸಿತು. ಈ ಚುನಾವಣೆಯಲ್ಲಿ 'ಹುಲ್ಲಹಳ್ಳಿ ಮಹಿಳಾ ಮೀಸಲು ಸ್ಥಾನ'ದಿಂದ ಪ್ರಥಮ ಮಹಿಳಾ ಅಭ್ಯರ್ಥಿಯಾಗಿ ಡಾ. ಶೈಲಾಬಾಲರಾಜ್ ಅವರು ಆಯ್ಕೆಗೊಂಡರು.

ಡಾ. ಶೈಲಾಬಾಲರಾಜ್ ಅವರು, ಬೆಂಗಳೂರಿನ ವರ್ತಕರಾದ ಶ್ರೀ ಮಲ್ಲಣ್ಣ ಮತ್ತು ಶ್ರೀಮತಿ ರುದ್ರಮ್ಮನವರ ಮಗಳು. ಇವರ ವಿದ್ಯಾಭ್ಯಾಸ ಸಂಪೂರ್ಣವಾಗಿ ಬೆಂಗಳೂರಿನಲ್ಲೇ ನಡೆಯಿತು ಇವರು B.A. Ms. Medicine + Allopathy (D. B. M.) ಎಂಬ ವಿದ್ಯಾರ್ಹತೆಯನ್ನು ಪಡೆದು ತಮ್ಮ ಪತಿಯಾದ ಡಾ. ಬಾಲರಾಜ್ ಅವರೊಡನೆ ಹುಲ್ಲಹಳ್ಳಿಯಲ್ಲಿ ಖಾಸಗಿ ವೈದ್ಯಕೀಯ ಸೇವೆಯಲ್ಲಿ ನಿರತರಾಗಿದ್ದಾರೆ. ಇವರು ರಾಜಕೀಯ ಕ್ಷೇತ್ರದಲ್ಲಿ ಕಾಲಿಡುತ್ತಿರುವುದು ಇದೇ ಮೊದಲಾದರೂ ಗ್ರಾಮದ ಸ್ವಯಂಪೂರ್ಣತೆಯಲ್ಲಿ, ಅದರಲ್ಲೂ ಮಹಿಳೆಯರ ಉನ್ನತಿಯಲ್ಲಿ

## ಗ್ರಾಮಗಳು ಹಾಗೂ ಸದಸ್ಯರ ಸಂಖ್ಯೆಯ ವಿವರ

| ಗ್ರಾಮ ಸಂಖ್ಯೆ | ಗ್ರಾಮಗಳ ಹೆಸರು | ಪುರುಷ ಸದಸ್ಯರು | | ಮಹಿಳಾ ಸದಸ್ಯರು | | ನಾಮಕರಣ ಸದಸ್ಯರು | ಒಟ್ಟು |
|---|---|---|---|---|---|---|---|
| | | ಹರಿಜನ ಮೀಸಲು | ಸಾಮಾನ್ಯ | ಹರಿಜನ ಮೀಸಲು | ಸಾಮಾನ್ಯ | | |
| 1 | ಹುಲ್ಲಹಳ್ಳಿ ಬ್ಲಾಕ್ 1 | | 2 | | | ಮಂಡಲ್ ವ್ಯಾಪ್ತಿಗೆ | 2 |
| | ಬ್ಲಾಕ್ 2 | 1 | 1 | | | ಸೇರಿದ ಯಾವ ಹಳ್ಳಿ | 2 |
| | ಬ್ಲಾಕ್ 3 | 1 | 1 | 1 | | ಯಿಂದಲಾದರೂ | 3 |
| | ಬ್ಲಾಕ್ 4 | | 2 | | 1 | ಸರಿಯೆ ಇಬ್ಬರು | 3 |
| | ಬ್ಲಾಕ್ 5 | | 1 | | 1 | ಹಿಂದುಳಿದ ವರ್ಗದ | 2 |
| 2 | ಬೆಳಲೆ | | 1 | 1 | | ಸದಸ್ಯರನ್ನು | 2 |
| 3 | ಕಾರ್ಯ | 1 | 1 | | | ನಾಮಕರಣ | 2 |
| 4 | ದುಗ್ಗಹಳ್ಳಿ | | 1 | | 1 | ಮಾಡಬಹುದು. | 2 |
| 5 | ಕುರಿಹುಂಡಿ | 2 | 2 | | | | 4 |
| 6 | ತರಗನ ಹಳ್ಳಿ | | 2 | | 1 | | 3 |
| 7 | ಕಣೇನೂರು + ಜೋಗಿ ಪಾಳ್ಯದ ಹುಂಡಿ | 2 | 2 | | 1 | | 5+2 |
| | ಒಟ್ಟು ಸದಸ್ಯರ ಸಂಖ್ಯೆ→ | 7 | 16 | 2 | 5 | 2 | 32 |

ಕಾಳಜಿಯನ್ನು ಹೊಂದಿದ್ದಾರೆ. ಇವರಿಗೆ ಚಿತ್ರಕಲೆ, ಸಾಹಿತ್ಯ ಮತ್ತು ಸಂಗೀತದಲ್ಲಿ ಆಸಕ್ತಿ ಮತ್ತು ಪರಿಶ್ರಮವಿದೆ.

1987ರ ಮಾರ್ಚಿ–ಏಪ್ರಿಲ್‌ನಲ್ಲಿ ನಡೆದ 'ಹುಲ್ಲಹಳ್ಳಿ ಮಂಡಲ್ ಪಂಚಾಯತ್'' ಚುನಾವಣೆಯಲ್ಲಿ ಒಟ್ಟು 32 ಸದಸ್ಯರು ಆಯ್ಕೆಗೊಂಡು, ಅವರಲ್ಲಿ 'ಪ್ರಧಾನ'ರಾಗಿ ಶ್ರೀ ಕೃಷ್ಣನಾಯ್ಕ ಮತ್ತು 'ಉಪ ಪ್ರಧಾನ' ರಾಗಿ ಶ್ರೀ ಹೆಚ್. ಡಿ. ಪಾಪಣ್ಣ ಆಯ್ಕೆಗೊಂಡಿರುತ್ತಾರೆ. ಇವರೀರ್ವರೂ ಹುಲ್ಲಹಳ್ಳಿಯವರೇ ಆಗಿರುತ್ತಾರೆ ಯುವಕರೂ, ಉತ್ಸಾಹಿಗಳೂ ಆಗಿರುವ ಇವರು ಹುಲ್ಲಹಳ್ಳಿ ಮತ್ತು ಇದರ ಮಂಡಲದಲ್ಲಿ ಸೇರಿರುವ ಗ್ರಾಮಗಳ ಅಭಿವೃದ್ಧಿಯ ಹೊಣೆಯನ್ನು ಹೊತ್ತಿದ್ದಾರೆ. ಇದುವರೆಗೆ ಹುಲ್ಲಹಳ್ಳಿಯ ಏಳಿಗೆಯಲ್ಲಿ ದುಡಿದ ಹಿರಿಯರ ಸಲಹೆ ಸಹಕಾರಗಳನ್ನು ಪಡೆದು, ಗ್ರಾಮದ ಜನತೆಯ ಮನೋಭಿಲಾಶೆಯನ್ನು ಅರಿತು, ಜಾತಿ ಮತ್ತು ಪಕ್ಷ ಭೇದ ಗಳನ್ನು ಮರೆತು ಹಾಗೂ ಕರ್ನಾಟಕ ಸರ್ಕಾರದಿಂದ ಸಕಲ ನೆರವನ್ನೂ ಪಡೆದು ಪ್ರಾಮಾಣಿಕವಾಗಿ ದುಡಿದಲ್ಲಿ ಹುಲ್ಲಹಳ್ಳಿಯು (ಮಂಡಲ ಗ್ರಾಮ ಗಳೂ ಸೇರಿ) ಅತ್ಯುತ್ತಮ ನಾಗರೀಕತೆಯನ್ನು ಹೊಂದಿ, ಹಿಂದಿನ ಸಂಸ್ಕೃತಿ ಯನ್ನು ರೂಢಿಸಿಕೊಳ್ಳುವುದರಲ್ಲಿ ಯಾವ ಸಂಶಯವೂ ಇಲ್ಲ.

ಹುಲ್ಲಹಳ್ಳಿಯ ಅಭಿವೃದ್ಧಿಗೆ ಸಾರ್ವಜನಿಕರ ಅಭಿಪ್ರಾಯದಂತೆ ಕೆಲವು ಸಲಹೆಗಳು :–

1. ಶುದ್ಧೀಕರಿಸಿದ ಕುಡಿಯುವ ನೀರಿನ ಸರಬರಾಜಾಗಬೇಕು. ಅದಕ್ಕಾಗಿ ನೀರಿನ ಟ್ಯಾಂಕ್‌ನ್ನು J.S. S ಕಾಲೇಜಿನ ಬಳಿ ಎತ್ತರದ ಸ್ಥಳ ದಲ್ಲಿ ನಿರ್ಮಾಣವಾಗಬೇಕು.

2. ಬಸ್‌ಸ್ಟಾಂಡಿಗೆ ಪ್ರತ್ಯೇಕ ಕಟ್ಟಡವಾಗಬೇಕು. ಈಗಿನ ಬಸ್ ಸ್ಟಾಂಡ್ ಬಳಿ ಆಗುತ್ತಿರುವ ಟೀ ಸ್ಟಾಲ್ ಗುಡಿಸಲುಗಳನ್ನು ನಿವಾರಿಸಿ ಈ ಜಾಗದ ಸೌಂದರ್ಯವನ್ನು ಕಾಪಾಡಬೇಕು.

3. ಡೆಪ್ಯುಟಿ ತಹಶೀಲ್ದಾರ್ ಕಛೇರಿಯ ಹಿಂಭಾಗದ ಗುಡಿಸಲು ಗಳಿಂದ ಆಗುವ ಕೊಳಚೆ ಪ್ರದೇಶವನ್ನು ಹೋಗಲಾಡಿಸಬೇಕು. ಆ ಸ್ಥಳ ವನ್ನು ಒಂದು ಸುಂದರ ಉದ್ಯಾನವನ್ನಾಗಿ ಮಾಡಬೇಕು.

4. ಸರ್ಕಾರದ ವತಿಯಿಂದ ಸಾರ್ವಜನಿಕ ಮಾರುಕಟ್ಟೆ ಬೇಕು.

5. ಜನರಿಗೆ ಅಡಿಗೆ ಸೌದೆ ಅಭಾವವಿರುವುದರಿಂದ ಸರ್ಕಾರವು ಅರಣ್ಯ ಇಲಾಖೆಯ ಸೌದೆ ಡಿಪೋವನ್ನು ತೆರೆಯಬೇಕು.

6. ಶಾಲಾ ಆಟದ ಮೈದಾನವನ್ನು ಪ್ರತ್ಯೇಕವಾಗಿ ಒದಗಿಸಬೇಕು.

7. ಹರಿ–ಹರ ಬೃಹದ್ದೇವಾಲಯುವಿರುವುದರಿಂದ ಸಾರ್ವಜನಿಕ ವಾಗಿ ದೇವರ ಉತ್ಸವ-ಜಾತ್ರೆ ನಡೆಯುಬೇಕು.

8. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಿರುವುದರಿಂದ ಸರ್ಕಾರಿ ತಾಂತ್ರಿಕ ಶಿಕ್ಷಣ ಶಾಲೆ ಹಾಗೂ ಗೃಹಕೈಗಾರಿಕಾ ತರಬೇತಿ ಶಾಲೆಯು ಅಗತ್ಯವಿದೆ.

9. ಪ್ರತ್ಯೇಕವಾದ ಕಲಾ ಶಾಲೆ ಬೇಕು.

10. ರಸ್ತೆಗಳಲ್ಲಿ ಒಳಚರಂಡಿ ವ್ಯವಸ್ಥೆಯಾಗಬೇಕು.

## 7. ಹುಲ್ಲಹಳ್ಳಿಯಲ್ಲಿ ಆರೋಗ್ಯ ಸೌಲಭ್ಯ

ಕ್ರಿ.ಶ. 1300 ರಲ್ಲಿ ಸರ್ವಶಾಸ್ತ್ರ ಪ್ರಮಾಣಿಕನಾದ ಶ್ರೀ ಚಂದ್ರ ಕೀರ್ತಿ ವ್ರತಿಯು ತೃಣಪುರಿ (ಹುಲ್ಲಹಳ್ಳಿ)ಯಲ್ಲಿ ಹೆಸರಾಂತ ವೈದ್ಯ ಚಿಕಿತ್ಸಕನಾಗಿ ರಾಜ ಮತ್ತು ಸಮಾಜ ಪೂಜಿತನಾಗಿದ್ದನು. ಕ್ರಿ.ಶ. 17–18ನೇ ಶತಮಾನದವರೆಗೂ ಜೈನ, ವೈಷ್ಣವ, ವೀರಶೈವಯೋಗಿಗಳು ಮತ್ತು ತಪಸ್ವಿಗಳು ತಮ್ಮ ಆತ್ಮಶಕ್ತಿಯ ಬಲದಿಂದಲೇ ಹುಲ್ಲಹಳ್ಳಿ ಮತ್ತು ಸುತ್ತಲ ಜನತೆಗೆ ಉಂಟಾಗುತ್ತಿದ್ದ ರೋಗರುಜಿನಗಳನ್ನು ಗುಣಪಡಿಸು ತ್ತಿದ್ದರು. 19 ನೇ ಶತಮಾನದ ಪ್ರಾರಂಭದಲ್ಲಿ ಕಾರೇಸ್ವಾಮಿಗಳು ತಮ್ಮ ಅಲೌಕಿಕ ಶಕ್ತಿಯಿಂದಲೇ ಜನರ ಹಲವು ರೋಗಗಳನ್ನು ಗುಣಪಡಿಸಿ ದ್ದುಂಟು. ಸುಮಾರು ಕ್ರಿ.ಶ. 1810 ರಲ್ಲಿ ಹುಲ್ಲಹಳ್ಳಿಗೆ ಆಯುರ್ವೇದ ಶಾಸ್ತ್ರದಲ್ಲಿ ನಿಶ್ಚಿತ ಜ್ಞಾನವನ್ನು ಪಡೆದಿದ್ದ ಸೋಮನಾಥ ಪಂಡಿತರ ಆಗಮನವಾಯಿತು. ಇವರ ಮೂಲ ಸ್ಥಳ ಕಂಚಿ (ತಮಿಳುನಾಡು). ಕಂಚಿ ಯಲ್ಲಿ ಆಯುರ್ವೇದ ಶಿಕ್ಷಣ ಪದ್ಧತಿಯನ್ನು ಅಭ್ಯಾಸಮಾಡಿದ್ದ ಇವರು ಕೊಳ್ಳೇಗಾಲ (ಮೈಸೂರು ಜಿಲ್ಲೆ)ಕ್ಕೆ ಬಂದು ಸ್ವಲ್ಪ ಕಾಲ ನೆಲೆಸಿದ್ದರು. ಈ ವೇಳೆಯಲ್ಲಿ ನಂಜನಗೂಡಿಗೆ ಆಗಮಿಸಿದ್ದ ಶೃಂಗೇರಿ ಜಗದ್ಗುರುಗಳಾದ ಶ್ರೀ ಶ್ರೀ ಶ್ರೀ ಚಂದ್ರಶೇಖರ ಭಾರತಿಯವರ ದರ್ಶನವನ್ನು ಪಡೆಯಲು ಸೋಮನಾಥ ಪಂಡಿತರೂ ಆಗಮಿಸಿದ್ದರು. ಚಂದ್ರಶೇಖರ ಭಾರತಿಯ ವರಿಗೆ ಅಸಾಧ್ಯವಾದ ಉದರಬೇನೆ ಕಾಣಿಸಿಕೊಳ್ಳಲು ಸೋಮನಾಥ ಪಂಡಿತರು ಆಯುರ್ವೇದ ಔಷಧಿಯನ್ನು ಕೊಟ್ಟು ಗುಣಪಡಿಸಿದರು. ಸಂತೋಷಭರಿತರಾದ ಶ್ರೀಯವರು ಸೋಮನಾಥ ಪಂಡಿತರಿಗೆ ರಕ್ತ ವರ್ಣದ ಮುಗುಟ ಮತ್ತು ಬಿಳಿಯ ಶಲ್ಯವನ್ನು ಕೊಟ್ಟು ಗೌರವಿಸಿದರು. ಆಗ ಹುಲ್ಲಹಳ್ಳಿಯಲ್ಲಿ ಮಲ್ಲಿಕಾರ್ಜುನ ದೇವಾಲಯದಲ್ಲಿ ಪ್ರತಿವರ್ಷ ರಥೋತ್ಸವ ನಡೆಯುತ್ತಿತ್ತು. 'ಈ ಮಲ್ಲಿಕಾರ್ಜುನ ದೇವಾಲಯದ ಅರ್ಚಕ ವೃತ್ತಿಯನ್ನು ವಹಿಸಿಕೊಂಡು, ಆಯುರ್ವೇದ ವೈದ್ಯಕೀಯದ ಸೌಲಭ್ಯವು ಈ ಪ್ರದೇಶದ ಜನರಿಗೆ ನಿಮ್ಮಿಂದ ದೊರಕಲಿ' ಎಂದು ಶ್ರೀಯವರು ಸೋಮನಾಥ ಪಂಡಿತರನ್ನು ಆಶೀರ್ವದಿಸಿದರು. ಅಂದಿನಿಂದ ಈ ಪಂಡಿತರು ಹುಲ್ಲಹಳ್ಳಿಯಲ್ಲಿ ನೆಲೆಸಿ ದೇವಾಲಯದ ಅರ್ಚಕ ವೃತ್ತಿಯ

ಜೊತೆಗೆ ಆಯುರ್ವೇದ ಶಾಲೆಯನ್ನು ತೆರೆದರು. ಮೂರ್ಛೆ, ಅಪಸ್ಮಾರ, ಕ್ಷಯ, ಮಲೇರಿಯ, ಕಾಮಾಲೆ, ಮೊದಲಾದ ರೋಗಗಳಿಗೆ ಉತ್ತಮ ಚಿಕಿತ್ಸೆಯನ್ನೂ, ಮಕ್ಕಳು ಬಾಣಂತಿ, ಗರ್ಭಿಣಿಯರಿಗೆ ಪೌಷ್ಠಿಕಾಂಶವುಳ್ಳ ಔಷಧಿಗಳನ್ನು ನೀಡುತ್ತಿದ್ದರು. ಸೋಮನಾಥ ಪಂಡಿತರ ನಂತರ ಅವರ ಮಕ್ಕಳಾದ ವಿಶ್ವೇಶ್ವರ ಪಂಡಿತರು ಆಯುರ್ವೇದ ವೈದ್ಯದಲ್ಲಿ ಅದ್ವಿತೀಯ ರೆನಿಸಿದರು. ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮಗಳ ರೋಗಿಗಳು ತಂಡೋಪತಂಡವಾಗಿ ಬಂದು ಇವರಿಂದ ಚಿಕಿತ್ಸೆಯನ್ನು ಪಡೆಯುತ್ತಿದ್ದರು. ವಿಶ್ವೇಶ್ವರ ಪಂಡಿತರ ವೈದ್ಯಕೀಯ ಸೇವೆಯನ್ನು ಗಮನಿಸಿದ ಮೈಸೂರಿನ ಮಹಾರಾಜರಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರು ಇವರನ್ನು ಗೌರವಿಸಿ, ಪ್ರಾಚೀನ ವೈದ್ಯಶಾಸ್ತ್ರದ ಗ್ರಂಥವನ್ನು ಉಡುಗೊರೆಯಾಗಿ ನೀಡಿದರು. ವಿಶ್ವೇಶ್ವರ ಪಂಡಿತರ ನಂತರ ಇವರ ಮಕ್ಕಳಾದ ವೆಂಕಟ ಸುಬ್ಬಾ ಪಂಡಿತರು ತಮ್ಮ ತಂದೆಯಿಂದಲೇ ಶಿಕ್ಷಣವನ್ನು ಪಡೆದು ಅತ್ಯುತ್ತಮ ಆಯುರ್ವೇದ ಪಂಡಿತರಾದರು. ಇವರೂ ಸಹಾ ಎಲ್ಲಾ ಔಷಧಿಗಳನ್ನೂ ಮನೆಯಲ್ಲೇ ತಯಾರಿಸಿ, ರೋಗಿಗಳನ್ನು ಪರೀಕ್ಷಿಸಿ, ಸೂಕ್ತ ಚಿಕಿತ್ಸೆಯನ್ನು ನೀಡುತ್ತಿದ್ದರು. ವೆಂಕಟಸುಬ್ಬಾ ಪಂಡಿತರು ಹಣಕ್ಕೆ ಹೆಚ್ಚು ಆಸೆ ಪಡದೆ ಅತ್ಯಂತ ಶ್ರದ್ಧೆಯಿಂದ ರೋಗಿಗಳನ್ನು ನೋಡುತ್ತಿದ್ದರು ಎಂಬುದಾಗಿ ಇಂದಿಗೂ ಅನೇಕ ಹಿರಿಯರು ಹೇಳುತ್ತಾರೆ. 1940 ರಲ್ಲಿ ಸರ್ಕಾರಿ ವೈದ್ಯಶಾಲೆ ಹುಲ್ಲಹಳ್ಳಿಗೆ ಬರುವವರೆಗೂ ವೆಂಕಟಸುಬ್ಬಾ ಪಂಡಿತರೇ ಹುಲ್ಲಹಳ್ಳಿಯ ವೈದ್ಯರಾಗಿದ್ದರು. ಅನಂತರ ಜನತೆಯ ಒಲವು ಇಂಗ್ಲಿಷ್ ಔಷಧಿಯ ಕಡೆಗೆ ಹರಿದುದರಿಂದಲೂ, ಆಯುರ್ವೇದ ಪದ್ಧತಿಯು ವೆಂಕಟಸುಬ್ಬಾ ಪಂಡಿತರು ಮತ್ತು ಅವರ ಮಕ್ಕಳಾದ ಕುಮಾರಸ್ವಾಮಿ ಪಂಡಿತರ ಮನೆಯ ಮಟ್ಟದಲ್ಲೇ ಉಳಿದುದರಿಂದಲೂ ಮುಂದಿನ ಬೆಳವಣಿಗೆಗೆ ಅವಕಾಶವಾಗಲಿಲ್ಲ. ಈ ಸಮಯದಲ್ಲೇ ಶ್ರೀ ಚನ್ನ ಬಸವದೇವರು ಎಂಬುವರು ಆಯುರ್ವೇದದಲ್ಲೂ, ಜ್ಯೋತಿಷ್ಯದಲ್ಲೂ ನುರಿತವರಾಗಿದ್ದರು. ಇಂದೂ ಸಹ ಹುಲ್ಲಹಳ್ಳಿಯ ವಿರಕ್ತ ಮಠಾಧಿಪತಿಗಳಾದ ಶ್ರೀ ಶ್ರೀ ಶ್ರೀ ಸದಾಶಿವಸ್ವಾಮಿಗಳವರನ್ನು ಜ್ಯೋತಿಷ್ಯ ಹಾಗೂ ಆಯುರ್ವೇದ ಚಿಕಿತ್ಸೆಯಲ್ಲಿ ಸರಿಗಟ್ಟುವವರಿಲ್ಲ ಎನ್ನಬಹುದು.

1940 ರಲ್ಲಿ ಪ್ರಾರಂಭಗೊಂಡ ಸರ್ಕಾರಿ ವೈದ್ಯಕೀಯ ಸೌಲಭ್ಯವು ಹೆಚ್ಚಿನ ರೀತಿಯಲ್ಲಿ ಮುಂದುವರಿದು, ಈ ಹಿಂದೆ ಆಗಾಗ್ಗೆ ತಲೆದೋರು

ತ್ತಿದ್ದ ಪ್ಲೇಗ್, ಕಾಲರಾ, ಮಲೇರಿಯಾ, ಸಿಡುಬು ಮೊದಲಾದ ಭಯಂಕರ ರೋಗಗಳು ನಿರ್ಮೂಲವಾಗಿವೆ.

'ಲೋಕಲ್ ಫಂಡ್ ಆಸ್ಪತ್ರೆ' ಎಂದು ಪ್ರಾರಂಭಗೊಂಡ ಸರ್ಕಾರಿ ವೈದ್ಯಶಾಲೆಯು ಇಂದು 'ಪ್ರಾಥಮಿಕ ಆರೋಗ್ಯ ಘಟಕ' ಎಂಬ ಹೆಸರಿನಲ್ಲಿ ಒಬ್ಬರು ವೈದ್ಯಾಧಿಕಾರಿ ಮತ್ತು ಆರುಮಂದಿ ಸಿಬ್ಬಂದಿಯನ್ನು ಹೊಂದಿ ಹಲವು ರೀತಿಯ ಔಷಧೋಪಚಾರವನ್ನು ನೀಡಿ ಜನತೆಯ ಆರೋಗ್ಯವನ್ನು ಸುಧಾರಿಸಿದೆ. ಈ ಆರೋಗ್ಯ ಘಟಕದಿಂದ ಮಕ್ಕಳಿಗೆ, ನಾಯಿಕೆಮ್ಮು ಧನುರ್ವಾಯು ಮತ್ತು ಗಂಟಲುಬೇನೆ ನಿರೋಧದ ಚುಚ್ಚುಮದ್ದನ್ನೂ, ಪೋಲೀಯೋ ಡ್ರಾಪ್ಸ್ ಮತ್ತು ಕ್ಷಯರೋಗ ನಿರೋಧಕ ಚುಚ್ಚುಮದ್ದುಗಳನ್ನೂ ನೀಡಲಾಗುವುದು. ಗರ್ಭಿಣಿಯರು ಈ ಆರೋಗ್ಯ ಘಟಕದಿಂದ ಧನುರ್ವಾಯು ನಿರೋಧಕ ಚುಚ್ಚುಮದ್ದು ಮತ್ತು ಕಬ್ಬಿಣಾಂಶದ ಗುಳಿಗೆಗಳನ್ನು ಪಡೆಯುತ್ತಾರೆ. ಜನನ ನಿಯಂತ್ರಣಕ್ಕಾಗಿ ಮಹಿಳೆಯರಿಗೆ ಟ್ಯುಬೆಕ್ಟಮಿ ಶಸ್ತ್ರ ಚಿಕಿತ್ಸೆಯನ್ನು ಮಾಡಲಾಗುತ್ತದೆ. ಅಲ್ಲದೆ ತಾತ್ಕಾಲಿಕ ಜನನ ನಿಯಂತ್ರಣಕ್ಕಾಗಿ ಮಹಿಳೆಯರಿಗೆ ಓರಲ್ ಪಿಲ್ಸ್, ಐ.ಯು.ಡಿ, ಕಾಪರ್-ಟಿ ಸೌಲಭ್ಯವಿದೆ ಇದರಿಂದಾಗಿ ಹುಲ್ಲಹಳ್ಳಿಯಲ್ಲಿ ಹಲವು ಮಂದಿ ಮಹಿಳೆಯರು ಶಾಶ್ವತ ಕುಟುಂಬ ಯೋಜನೆಗೆ ಒಳಪಟ್ಟಿದ್ದಾರೆ.

ಗ್ರಾಮ ನೈರ್ಮಲ್ಯವನ್ನು ಗಮನಿಸಿ, ಮನೆಗಳಿಗೆ ಡಿ.ಡಿ.ಟಿ.ಯನ್ನು ವರ್ಷಕ್ಕೆ ಎರಡು ಬಾರಿ ಸಿಂಪಡಿಸಲಾಗುವುದು. ಭಾವಿಗಳಿಗೆ ಬ್ಲೀಚಿಂಗ್ ಪೌಡರನ್ನು ಹಾಕಲಾಗುವುದು.

ಈ ಆರೋಗ್ಯ ಘಟಕವು ಹುಲ್ಲಹಳ್ಳಿಯಲ್ಲಿ (22) ಇಪ್ಪತ್ತೆರಡು ಮಂದಿ ಕುಷ್ಠರೋಗಿಗಳನ್ನೂ, (14) ಹದಿನಾಲ್ಕು ಮಂದಿ ಕ್ಷಯರೋಗಿಗಳನ್ನೂ ಗುರುತಿಸಿ ನಿರಂತರವಾಗಿ ಚಿಕಿತ್ಸೆಯನ್ನು ನೀಡುತ್ತಿದೆ.

ಖಾಸಗಿಯಾಗಿ ಡಾ. ಕೃಷ್ಣಪ್ಪ ಅವರ ಚೇತನ ಚಿಕಿತ್ಸಾಲಯ, ಡಾ. ಎಸ್. ದ್ವಾರಕಾನಾಥ್ ಅವರ ಜಯಲಕ್ಷ್ಮಿ ಔಷಧಾಲಯ, ಡಾ. ಬಾಲರಾಜ್ ಅವರ ಜನತಾ ಕ್ಲಿನಿಕ್ ಮತ್ತು ಡಾ. ವಿ. ಜಿ. ಚಿದಾನಂದಮೂರ್ತಿಯವರ ಚಿದಾನಂದ ಔಷಧಾಲಯವೂ ಚಿಕಿತ್ಸಾ ಕಾರ್ಯವನ್ನು ನಿರ್ವಹಿಸುತ್ತಿವೆ.

1985 ರಿಂದ ಹುಲ್ಲಹಳ್ಳಿಯಲ್ಲಿ ಹೆರಿಗೆ ಆಸ್ಪತ್ರೆ ಪ್ರಾರಂಭಗೊಂಡು ಒಬ್ಬರು ಮಹಿಳಾ ವೈದ್ಯರು ಹಾಗೂ ಎಂಟು ಮಂದಿ ಇತರೆ ಸಿಬ್ಬಂದಿ

ಯುವರು ಇರುತ್ತಾರೆ. ಹುಲ್ಲಹಳ್ಳಿ ಮತ್ತು ಸುತ್ತಲ ಪ್ರದೇಶದ ಗರ್ಭಿಣಿ ಮಹಿಳೆಯರಿಗೆ ಉತ್ತಮ ವೈದ್ಯಕೀಯ ಸಲಹೆ ಮತ್ತು ಹೆರಿಗೆ ಸೌಲಭ್ಯವು ಒದಗುವಂತಾಗಿದೆ.

1964 ರಲ್ಲಿ ಪ್ರಾರಂಭಗೊಂಡ ಪಶುವೈದ್ಯ ಶಾಲೆಯು ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮಗಳಿಗೆ ವರದಾನವಾಗಿದೆ. ರೈತರೇ ಪ್ರಮುಖವಾಗಿ ರುವ ಈ ಪ್ರದೇಶಗಳಲ್ಲಿ ಸಾಕಷ್ಟು ಉತ್ತಮ ತಳಿಯ ಜಾನುವಾರುಗಳನ್ನು ಪಶುವೈದ್ಯ ಶಾಲೆಯ ಮೂಲಕ ಜನರಿಗೆ ಒದಗಿಸಲಾಗಿದೆ. ಜಾನುವಾರು ಗಳಿಗೆ ಉಂಟಾಗುವ ದೊಡ್ಡರೋಗ, ಗೋಮಾರಿ ರೋಗದ ಮೇಕೆ ವಿಷಾಣು, ಚಪ್ಪೇರೋಗ, ಮೆಟ್ರಿಗಟ್ಟುರೋಗ, ನರಡಿರೋಗ, ಕೋಳಿ ಸಿಡುಬು ರೋಗಗಳ ವಿರುದ್ಧ ಚುಚ್ಚುಮದ್ದುಗಳನ್ನು ಮುಂಜಾಗ್ರತೆಯಾಗಿ ಕೊಡಲಾಗುವುದು. ಕುರಿ, ಮೇಕೆಗಳಿಗೆ ಸಿಡುಬು ನಿರೋಧದ ಮತ್ತು ಕೋಳಿಗಳಿಗೆ ಕೊಕ್ಕರೆ ರೋಗ ನಿರೋಧಕ ಚುಚ್ಚುಮದ್ದು ನೀಡುವುದರ ಮೂಲಕ ರೋಗಗಳನ್ನು ತಡೆಗಟ್ಟಲಾಗಿದೆ.

ಹುಲ್ಲುಗಾವಲು ಅಭಿವೃದ್ಧಿಗೆ ಗೊಬ್ಬರ ಮತ್ತು ಹುಲ್ಲಿನ ಬೇರುಗಳನ್ನು ರೈತರಿಗೆ ಒದಗಿಸಲಾಗುತ್ತಿದೆ. ವಿಶೇಷ ಘಟಕ ಯೋಜನೆಯಲ್ಲಿ ಹರಿಜನರಿಗೆ ಶೇ. 70 ರಿಯಾಯ್ತಿ ದರದಲ್ಲಿ ಎರಡು ಹಸು, ಒಂದು ಕೊಟ್ಟಿಗೆಗೆ ಬೇಕಾ ಗುವ ಮರ ಮುಟ್ಟುಗಳು ಮತ್ತು ಆರು ತಿಂಗಳ ಕಾಲ ಮೇವುಗಳನ್ನು ಒದಗಿಸಲಾಗುತ್ತಿದೆ. ಮಿಶ್ರ ತಳಿ ಕರುಗಳ ಸಾಕಾಣಿಕೆಗಾಗಿಯೂ ಶೇ. 70 ರಿಯಾಯ್ತಿ ದರದಲ್ಲಿ ಮೇವನ್ನು ಒದಗಿಸಲಾಗುತ್ತಿದೆ. ಪಶುವೈದ್ಯ ಶಾಲೆಯು ತಾನು ತೆಗೆದುಕೊಂಡ ದತ್ತು ಗ್ರಾಮಗಳಿಗೆ ಎಲ್ಲ ರೀತಿಯ ಔಷಧೋಪ ಚಾರಗಳನ್ನು ಆಯಾ ಗ್ರಾಮಗಳಲ್ಲೇ ನೀಡಲಾಗುವುದು.

ಅಭಾವ ಪರಿಹಾರ ಕಾರ್ಯಕ್ರಮದ ಅಂಗವಾಗಿ ಜಾನುವಾರುಗಳಿಗೆ ಹಿಂಡಿಯನ್ನು ಒದಗಿಸಲಾಗುವುದು. ಈ ಪಶುವೈದ್ಯ ಶಾಲೆಯಲ್ಲಿ ಕೃತಕ ಗರ್ಭಧಾರಣೆಯ ಸೌಲಭ್ಯವಿದೆ.

ಹುಲ್ಲಹಳ್ಳಿಯ ಪಶುವೈದ್ಯ ಶಾಲೆಯ ಅಧೀನದಲ್ಲಿ ಹುರ ಮತ್ತು ಚಂದ್ರವಾಡಿ ಗ್ರಾಮೀಣ ಪಶುವೈದ್ಯ ಶಾಲೆಗಳು ಕಾರ್ಯ ನಿರ್ವಹಿಸುತ್ತಿವೆ.

ಸಹಾಯಕ ಪಶುವೈದ್ಯರು ಮತ್ತು ನಾಲ್ಕು ಮಂದಿ ಸಹಾಯಕ ಸಿಬ್ಬಂದಿಗಳನ್ನು ಹೊಂದಿರುವ ಹುಲ್ಲಹಳ್ಳಿ ಪಶುವೈದ್ಯ ಶಾಲೆಯು ಜಾನು ವಾರುಗಳ ಅಭಿವೃದ್ಧಿಯಲ್ಲಿ ಸಾಕಷ್ಟು ಶ್ರಮಿಸುತ್ತಿದೆ.

# 8. ಹುಲ್ಲಹಳ್ಳಿಯಲ್ಲಿ ಶಿಕ್ಷಣ ಸೌಲಭ್ಯ

ಮಾನವ ಮತ್ತು ಸಮಾಜದ ಸರ್ವತೋಮುಖ ಪ್ರಗತಿಗೆ ಶಿಕ್ಷಣ ಅತಿ ಮುಖ್ಯ. ಯಾವ ಪ್ರದೇಶದ ಜನರು ಉತ್ತಮ ಜೀವನವನ್ನು ಸಾಗಿಸುತ್ತಿರುವರೋ ಅಂತಹ ಕಡೆ ಶಿಕ್ಷಣ ಸೌಲಭ್ಯ ಉತ್ತಮವಾಗಿದೆ ಎಂದೇ ಅರ್ಥ. ಇಂತಹ ಒಂದು ಪ್ರದೇಶಕ್ಕೆ ಉದಾಹರಣೆ, ಹುಲ್ಲಹಳ್ಳಿ.

ಇಂದಿನ ಹುಲ್ಲಹಳ್ಳಿಯ ಶೈಕ್ಷಣಿಕ ಪ್ರಗತಿಗೆ ಪ್ರಮುಖ ಕಾರಣವೆಂದರೆ, ಸುತ್ತೂರು ಜಗದ್ಗುರು ಶ್ರೀ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರು. ಸುತ್ತೂರು ಒಂದು ಧಾರ್ಮಿಕ ಮತ್ತು ಐತಿಹಾಸಿಕ ಸುಕ್ಷೇತ್ರ. ನಂಜನಗೂಡಿನ ಪಶ್ಚಿಮದಲ್ಲಿ ಒಂಭತ್ತು ಮೈಲಿ ದೂರದಲ್ಲಿ ಹುಲ್ಲಹಳ್ಳಿಯಿದ್ದರೆ, ಇಷ್ಟೇ ದೂರದಲ್ಲಿ ಪೂರ್ವಭಾಗದಲ್ಲಿ ಸುತ್ತೂರು ಇದೆ. ಕ್ರಿ.ಶ. 11ನೇ ಶತಮಾನದಲ್ಲಿ ಶ್ರೀ ಮಜ್ಜಗದ್ಗುರು ರೇಣುಕಾಚಾರ್ಯರ ಆದೇಶದಂತೆ ತನ್ನ ಗುರುಗಳ ದರ್ಶನಾಕಾಂಕ್ಷಿಯಾಗಿ ಹೊರಟ ರಾಜೇಂದ್ರ ಚೋಳ ಚಕ್ರಾಧೀಶ್ವರನನ್ನು ಆತನ ದಿವ್ಯಾಶ್ವವು ಕರೆದು ತಂದು ಶಿವಯೋಗ ಸಮಾಧಿಯಲ್ಲಿದ್ದ ಶ್ರೀ ಶಿವರಾತ್ರೀಶ್ವರರನ್ನು ಮೂರು ಬಾರಿ ಪ್ರದಕ್ಷಿಣೆ ಬಂದು ಗುರುವನ್ನು ತೋರಿಸಿತು. ರಾಜೇಂದ್ರ ಚೋಳನ ಬಿನ್ನಹ ಮತ್ತು ಗುರುವಿನ ಅನುಗ್ರಹದಿಂದ ಆ ಸ್ಥಳದಲ್ಲಿ ವೀರಶೈವ ಧರ್ಮ ಪೀಠವೊಂದು ಸ್ಥಾಪನೆಯಾಯಿತು. ಅಶ್ವದ ಪ್ರದಕ್ಷಿಣೆಯಿಂದಾಗಿ ಪ್ರದಕ್ಷಿಣಪುರ ಅಥವಾ ಸುತ್ತೂರು ಎಂಬ ಹೆಸರಿನಿಂದ ಪುಣ್ಯಕ್ಷೇತ್ರವಾಯಿತು.

ಈ ಇತಿಹಾಸ ಪ್ರಸಿದ್ಧ ಸುತ್ತೂರು ವೀರಸಿಂಹಾಸನ ಧರ್ಮ ಪೀಠಾಧಿಕಾರವನ್ನು ದಿನಾಂಕ 24–2–1924 ರಲ್ಲಿ ವಹಿಸಿಕೊಂಡ ಶ್ರೀ ಶ್ರೀ ಶ್ರೀ ಶಿವರಾತ್ರಿರಾಜೇಂದ್ರಸ್ವಾಮಿಗಳವರು ಸುತ್ತೂರು ಮಠದ ವರಮಾನವನ್ನು ಬಡ ವಿದ್ಯಾರ್ಥಿಗಳಿಗೆ ವಿನಿಯೋಗಿಸತೊಡಗಿದರು. ಇದರಿಂದಾಗಿ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಶಾಲಾ ಕಾಲೇಜುಗಳು, ತಾಂತ್ರಿಕ ಮತ್ತು ವೈದ್ಯಕೀಯ ಕಾಲೇಜುಗಳು ಪ್ರಾರಂಭಗೊಂಡವು. ಶ್ರೀಯವರು ತಮ್ಮ ಶಿಕ್ಷಣ ಸಂಸ್ಥೆಗಳನ್ನು ಗ್ರಾಮಾಂತರದಲ್ಲೂ ತೆರೆಯಲಾರಂಭಿಸಿದರು. 1963 ರಲ್ಲಿ ಪ್ರೌಢಶಾಲೆಯನ್ನು ಹುಲ್ಲಹಳ್ಳಿಯಲ್ಲಿ ಪ್ರಾರಂಭಿಸಿ 1983 ರಲ್ಲಿ ಇದನ್ನು ಜ್ಯೂನಿಯರ್ ಕಾಲೇಜಾಗಿ ಪರಿವರ್ತಿಸಿದರು. ಅಲ್ಲದೇ ಇದೇ

ಗ್ರಾಮದಲ್ಲಿ ಬಾಲ ಜಗತ್, ಪೂರ್ವಪ್ರಾಥಮಿಕ ಮತ್ತು ಪ್ರಾಥಮಿಕ ಹಂತದ ಇಂಗ್ಲಿಷ್ ಕಾನ್ವೆಂಟನ್ನೂ ಸಹ ತೆರೆದಿರುತ್ತಾರೆ. ಈ ಶಿಕ್ಷಣ ಸಂಸ್ಥೆಗಳ ಜೊತೆಗೆ ಗ್ರಾಮಾಂತರ ಪ್ರದೇಶದಿಂದ ಬರುವ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಹಾಸ್ಟೆಲ್‌ಗಳನ್ನು ಸ್ಥಾಪಿಸಿ 'ದಾಸೋಹ' ಕಾರ್ಯವನ್ನೂ ನಡೆಸಲಾಗುತ್ತಿದೆ. (ಸರ್ಕಾರಿ ಸಾರ್ವಜನಿಕ ವಿದ್ಯಾರ್ಥಿನಿಲಯವೂ ಸಹ ಇದೆ.)

ಹುಲ್ಲಹಳ್ಳಿಯನ್ನು ನಗರೀಕರಣ ಮಾಡುವಲ್ಲಿ ಶಿಕ್ಷಣ ಕ್ಷೇತ್ರದ ಮೂಲಕ ಶ್ರಮಿಸುತ್ತಿದ್ದ ಶ್ರೀ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳವರು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಪ್ರಭುತ್ವವನ್ನೂ, ಕಾಶಿಯಲ್ಲಿ ಅಭ್ಯಾಸ ಮಾಡಿ ಸಂಸ್ಕೃತದಲ್ಲಿ ಪಾಂಡಿತ್ಯವನ್ನೂ ಪಡೆದಿದ್ದರು. ಶ್ರೀಯವರ ದಾಸೋಹ ಕಾರ್ಯ ಮತ್ತು ವಿದ್ಯಾ ಪಕ್ಷಪಾತ ಗುಣಗಳನ್ನು ಅರಿತು, ಇವರಿಗೆ 1960ರ ಮೈಸೂರು ದಸರಾ ಮಹೋತ್ಸವದಲ್ಲಿ ಮೈಸೂರಿನ ಶ್ರೀಮನ್ಮಹಾರಾಜರಾದ ಶ್ರೀ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ರಾಜಸನ್ಮಾನ ಮತ್ತು ಖಿಲ್ಲತ್ತುಗಳನ್ನು ಅರ್ಪಿಸಿ ಶ್ರೀಯವರನ್ನು 'ರಾಜಗುರು ತಿಲಕ' ರೆಂದು ಅಂಗೀಕರಿಸಿದರು.

1962 ರಲ್ಲಿ ಚೀನೀಯರು ಭಾರತದ ಮೇಲೆ ಧಾಳಿ ಮಾಡಿದ ಸಂದರ್ಭದಲ್ಲಿ ಯುದ್ಧದ ವೆಚ್ಚವನ್ನು ಭರಿಸಲು ಭಾರತ ಸರ್ಕಾರವು 'ಬಂಗಾರ ಸಂಗ್ರಹ ಚಳುವಳಿ'ಯನ್ನು ನಡೆಸಿತು. ಆಗ ಶ್ರೀಗಳವರು ರಾಷ್ಟ್ರದ ಸ್ಥಿತಿಯನ್ನರಿತು ತಮ್ಮ ಬಂಗಾರದ ಕರಡಿಗೆಯನ್ನು ದೇಶದ ನಿಧಿಗೆ ದಾನವಾಗಿ ನೀಡಿದರು. ಇದರಿಂದ ಇವರು 'ಬಂಗಾರಸ್ವಾಮಿ' ಎಂದೂ ಪ್ರಖ್ಯಾತರಾದರು.

ತಮ್ಮ ದಾಸೋಹ, ಶಿಕ್ಷಣ ಮತ್ತು ಧರ್ಮಾಚರಣೆಯಿಂದಲೂ, ರಾಷ್ಟ್ರ ಪ್ರೇಮದಿಂದಲೂ ಲಕ್ಷಾಂತರ ಭಕ್ತರನ್ನು ಗಳಿಸಿದ್ದ ಶ್ರೀಯವರ 'ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿಕ್ಷಣ ಸಂಸ್ಥೆ'ಯು ಹುಲ್ಲಹಳ್ಳಿಯಲ್ಲಿರುವುದು ಒಂದು ಸುದೈವ.

ಹುಲ್ಲಹಳ್ಳಿಯು ಐತಿಹಾಸಿಕವಾಗಿಯೂ ಒಂದು ಶಿಕ್ಷಣ ಕ್ಷೇತ್ರವಾಗಿತ್ತು ಎಂಬುದು ಹುಲ್ಲಹಳ್ಳಿಯಲ್ಲಿ ದೊರೆತಿರುವ ಶಾಸನಾಧಾರಗಳಿಂದ ತಿಳಿದು ಬರುತ್ತದೆ.

ಕ್ರಿ.ಶ. 1300ರ ಹಿಂದೆ ಹುಲ್ಲಹಳ್ಳಿಯು ಸುಪ್ರಸಿದ್ಧ ಜೈನ ಧರ್ಮದ

ನೆಲೆಯಾಗಿತ್ತು. ಶ್ರುತಮುನಿಯು ರಾಜಗುರುವಾಗಿದ್ದು, ಈತನ ಶಿಷ್ಯರಾದ ಮಾಘನಂದಿ, ಸಿದ್ಧಾಂತಿ ದೇವರು, ಶ್ರುತ ಕೀರ್ತಿ ದೇವರು, ಮುನಿಚಂದ್ರದೇವರು, ಬಾಹುಬಲಿದೇವರು, ಪಾರ್ಶ್ವದೇವರು ಮತ್ತು ಜಿನಚಂದ್ರದೇವರು ಇವರುಗಳಿಂದ ಸಮಾಹಿತಗೊಂಡ ಒಂದು ಶಿಕ್ಷಣ ಸಂಸ್ಥೆಯೇ ಹುಲ್ಲಹಳ್ಳಿಯಲ್ಲಿದ್ದು ಆಧ್ಯಾತ್ಮಿಕ, ರಾಜಕೀಯ, ಕಲೆ, ಸಾಹಿತ್ಯ, ವೈದ್ಯಶಾಸ್ತ್ರ ಮೊದಲಾದ ಶಿಕ್ಷಣವು ಸಕಲರಿಗೂ ದೊರೆಯುತ್ತಿತ್ತು. ಇವೆಲ್ಲರೂ ಬಾಳಿ-ಬದುಕಿ ಸಂನ್ಯಸನ ವ್ರತದಿಂದ ಸಮಾಧಿಸ್ಥರಾದರೆಂದು ತಿಳಿಸುವ ನಿಷಿಧಿಕಲ್ಲೊಂದು ಹುಲ್ಲಹಳ್ಳಿಯಲ್ಲಿದೆ.

ಕ್ರಿ.ಶ. 14, 15, 16ನೇ ಶತಮಾನಗಳಲ್ಲಿ ಶ್ರೀವೈಷ್ಣವರು, ಮಾಧ್ವರು ಮತ್ತು ಸ್ಮಾರ್ತ ಬ್ರಾಹ್ಮಣರ ಅಗ್ರಹಾರಗಳಲ್ಲಿ ವೇದ, ಪುರಾಣ ಗ್ರಂಥಗಳ ಅಭ್ಯಾಸವೂ, ಶ್ರೀ ಶಾಂತಮಲ್ಲಿಕಾರ್ಜುನ ವಿರಕ್ತ ಮಠದಲ್ಲಿ ವೀರಶೈವ ಧರ್ಮದ ಸಾಹಿತ್ಯ-ತತ್ವಗಳ ಶಿಕ್ಷಣವೂ ನಡೆಯುತ್ತಿದ್ದುವು. 16ನೇ ಶತಮಾನದ ಮಧ್ಯಭಾಗದಲ್ಲಿ ಮಧ್ವಮತಾನುಯಾಯಿಗಳೂ, ತಪಸ್ವಿಗಳೂ, ವಿಜಯ ನಗರದ ಚಕ್ರವರ್ತಿ ಶ್ರೀಕೃಷ್ಣದೇವರಾಯನ ಗುರುಗಳೂ ಆಗಿದ್ದ ಶ್ರೀ ವ್ಯಾಸರಾಯರು ಹುಲ್ಲಹಳ್ಳಿಗೆ ಆಗಮಿಸಿ ಇಲ್ಲಿನ ಧಾರ್ಮಿಕ ಮತ್ತು ಶೈಕ್ಷಣಿಕ ವ್ಯವಸ್ಥೆಯನ್ನು ಕಂಡು ಮೆಚ್ಚಿಕೆಯನ್ನು ವ್ಯಕ್ತಪಡಿಸಿದ್ದರು. ವೀರಶೈವ ಧರ್ಮದ ಚೆನ್ನವೀರಾರ್ಯ ಮತ್ತು ಗುರುಸಿದ್ಧರು ಹುಲ್ಲಹಳ್ಳಿಗೆ ಬಂದು ನೆಲೆಸಲು, ಇಲ್ಲಿನ ಧಾರ್ಮಿಕ ಮತ್ತು ಶಿಕ್ಷಣದ ಉತ್ತುಂಗ ಪ್ರಗತಿಯೇ ಮುಖ್ಯ ಕಾರಣವಾಗಿತ್ತು.

ಮೈಸೂರು ಒಡೆಯರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ವೇಳೆಗೆ ಹುಲ್ಲಹಳ್ಳಿಯ ಸ್ಥಿತಿಯು ಸಂಪೂರ್ಣವಾಗಿ ಬದಲಾಗಿ ಕನ್ನಡ ಪ್ರಾಥಮಿಕ ಶಾಲೆಯು ಪ್ರಾರಂಭವಾಯಿತು. ಇಂಗ್ಲಿಷರ ಪ್ರಭಾವದಿಂದ ಅಪ್‌ಗ್ರೇಡೆಡ್ ಸ್ಕೂಲ್ ಆಗಿ ಇಂಗ್ಲಿಷ್ ಭಾಷೆಯ ಬೋಧನೆ ಪ್ರಾರಂಭವಾಗಿ, ಉರ್ದು ಶಾಲೆಯೂ ಪ್ರಾರಂಭವಾಯಿತು. ಹಲವು ವರ್ಷಗಳ ಕಾಲ ಹುಲ್ಲಹಳ್ಳಿಯಲ್ಲಿ ಶಿಕ್ಷಣವು ಮಾಧ್ಯಮಿಕ (New Type Middle School) ಹಂತದಲ್ಲೇ ಉಳಿದು ಮುಂದಿನ ವಿದ್ಯಾಭ್ಯಾಸಕ್ಕೆ ಇಲ್ಲಿನ ವಿದ್ಯಾರ್ಥಿಗಳು ನಂಜನಗೂಡು ಅಥವಾ ಮೈಸೂರಿಗೆ ಹೋಗುವ ಪರಿಸ್ಥಿತಿಯುಂಟಾಗಿತ್ತು. ಇದರಿಂದಾಗಿ ಅನೇಕ ಬಡವರ ಮಕ್ಕಳು ತಮ್ಮ ವಿದ್ಯಾಭ್ಯಾಸವನ್ನು ಅಷ್ಟಕ್ಕೇ ನಿಲ್ಲಿಸುತ್ತಿದ್ದರು. ಈ ಸ್ಥಿತಿ

ಯನ್ನು ಗಮನಿಸಿದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಯವರು ಹುಲ್ಲಹಳ್ಳಿಯಲ್ಲಿ ತಮ್ಮ ಶಿಕ್ಷಣ ಸಂಸ್ಥೆಯನ್ನು ತೆರೆದು ಹುಲ್ಲಹಳ್ಳಿಯ ಶೈಕ್ಷಣಿಕ ಪ್ರಗತಿಗೆ ಕಾರಣರಾದರು.

ಶ್ರೀ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಯವರು ತಮ್ಮ ಅಂತ್ಯ ಕಾಲದಲ್ಲಿ ವಿದೇಶ ಪ್ರವಾಸವನ್ನು ಮಾಡಿ ವೀರಶೈವ ಧರ್ಮವು ಒಂದು ವಿಶ್ವಧರ್ಮವೆಂದು ಸಾರಿದರು. ಕರ್ನಾಟಕದಲ್ಲಿ ವೀರಶೈವ ಸಮಾಜ ಹಾಗೂ ಶೈಕ್ಷಣಿಕ ಉನ್ನತಿಗೆ ಜಗತ್ತಿನ ಕಣ್ಣಾದ ಸೂರ್ಯನಂತೆ ಬಿಡುವು ಇಲ್ಲದೇ ದುಡಿದರು. ಜಗದ್ಗುರು ಎಂಬುದನ್ನು ಸಾರ್ಥಕ ಪಡಿಸಿಕೊಂಡರು. ಇತ್ತೀಚೆಗೆ ಕೆಲವು ದಿನಗಳ ಹಿಂದೆ ವೀರಶೈವ ಸಮಾಜದ ಸೂರ್ಯ ಅಸ್ತಂಗತ ವಾಯಿತು.

ಇಂದು ವೀರಶೈವ ಸಮಾಜವನ್ನು ಬೆಳಕಿನತ್ತ ನಡೆಸುವ ಮತ್ತು ಜಗದ್ಗುರು ಶ್ರೀ ಶಿವರಾತ್ರೀಶ್ವರ ವಿದ್ಯಾಸಂಸ್ಥೆಯ ಆಡಳಿತದ ಮಹಾಭಾರ ವನ್ನು ಹೊರುವ ಜವಾಬ್ದಾರಿಯು, ಸುತ್ತೂರು ಜಗದ್ಗುರುಗಳಾಗಿರುವ ಶ್ರೀ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಾಜಿಯವರಿಗೆ ಸೇರಿರುತ್ತದೆ.

ಹುಲ್ಲಹಳ್ಳಿಯ ಶೈಕ್ಷಣಿಕ ಪ್ರಗತಿಯನ್ನು ಗಮನಿಸಿ, ಮೈಸೂರು ಜಿಲ್ಲಾ ಕೇಂದ್ರ ಗ್ರಂಥಾಲಯದ ಗ್ರಂಥ ವಿತರಣಾ ಕೇಂದ್ರವನ್ನು ಹುಲ್ಲ ಹಳ್ಳಿಯಲ್ಲಿ ತೆರೆಯಲಾಗಿದೆ.

# 9. ಹುಲ್ಲಹಳ್ಳಿಯ ಕೈಗಾರಿಕೆಗಳು

ಇಂದು ಹುಲ್ಲಹಳ್ಳಿಯು ಇಪ್ಪತ್ತನೆಯ ಶತಮಾನದ ಅಂಚಿನಲ್ಲಿದೆ. ಇಂದಿನ ವಿಜ್ಞಾನ ಯುಗದ ದುಷ್ಪರಿಣಾಮದಿಂದಲೋ ಅಥವಾ ನಮ್ಮ ರಾಜಕೀಯ ಧುರೀಣರ ಆಡಳಿತದ ವೈಫಲ್ಯದಿಂದಲೋ ಹುಲ್ಲಹಳ್ಳಿಯು ತನ್ನ ಸ್ವಾವಲಂಬನೆಯನ್ನು ಅಂದರೆ 'ಸಂಪೂರ್ಣ ಗ್ರಾಮತ್ವ'ವನ್ನು ಕಳೆದು ಕೊಂಡಿದೆ ಎನ್ನಬಹುದು.

ಇಪ್ಪತ್ತನೆಯ ಶತಮಾನದ ಪ್ರಾರಂಭ ಹಾಗೂ ಮಧ್ಯ ಕಾಲದಲ್ಲಿ ಹುಲ್ಲಹಳ್ಳಿಯು ಕೈಗಾರಿಕೆಯಲ್ಲಿ ಸಂಪೂರ್ಣ ಸ್ವಾಮ್ಯವನ್ನು ಸಾಧಿಸಿತ್ತು. ಕಳಲೆಮರಪ್ಪ, ಕಣೇನೂರು ನಾಗಮ್ಮ, ಮೂಲೆಹಟ್ಟಿ ಶೆಟ್ಟರು (ಎಲ್ಲರೂ ಹುಲ್ಲಹಳ್ಳಿ ನಿವಾಸಿಗಳೇ) ಮೊದಲಾದ ಹದಿನೈದು ಮಂದಿಗಳು ಕೈಗಾಣ ವನ್ನು ನಡೆಸುತ್ತಿದ್ದರು. ಹರಳೆಣ್ಣೆ, ಕಡಲೆಕಾಯಿಎಣ್ಣೆ, ಎಳ್ಳೆಣ್ಣೆ (ಹುಲ್ಲ ಹಳ್ಳಿ ತುಪ್ಪ) ಮೊದಲಾದುವನ್ನು ತಯಾರಿಸಿ ಹುಲ್ಲಹಳ್ಳಿ ಹೋಬಳಿಗೆ ಸೇರಿದ ಗ್ರಾಮಗಳಲ್ಲೆಲ್ಲಾ ಮಾರಾಟ ಮಾಡುತ್ತಿದ್ದರು.

ವರದಶೆಟ್ಟಿ, ನರಸಿಂಹಶೆಟ್ಟಿ, ದಾಸಪ್ಪ, ಪೂಜಾರಿ ಹನುಮಂತಶೆಟ್ಟಿ, ಸಂಜೀವಶೆಟ್ಟಿ-ಮೊದಲಾದ ಇಪ್ಪತ್ತೈದು ಮಂದಿಗಳು ಕೈಮಗ್ಗದಿಂದ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಹತ್ತಿ ನೂಲು, ಪಂಚೆ, ಸೀರೆ ಮೊದ ಲಾದ ಬಟ್ಟೆಗಳ ವ್ಯಾಪಾರ ಕೇಂದ್ರವಾಗಿತ್ತು ಹುಲ್ಲಹಳ್ಳಿ.

ಸೋಲಶೆಟ್ಟಿ, ರಂಗಶೆಟ್ಟಿ, ವೆಂಕಟಶೆಟ್ಟಿ ಮೊದಲಾದ ಏಳೆಂಟು ಒಕ್ಕಲು ಕುಂಭಕಾರರಿದ್ದರು. ಇವರು ನಾಡಹೆಂಚು, ಮಡಕೆ, ಬಾನಿ, ಹೊಳೆಂಚು, ಸಣ್ಣಹೆಂಚುಗಳನ್ನು ತಯಾರಿಸಿ, ಅಂದು ಹುಲ್ಲಹಳ್ಳಿಯಲ್ಲಿ ನಡೆಯುತ್ತಿದ್ದ ಸಂತೆಯಲ್ಲಿ ಮಾರಾಟ ಮಾಡುತ್ತಿದ್ದರು. ಬಹುವಾಗಿ ಹುಲ್ಲಹಳ್ಳಿಯ ಮನೆಗಳು ಹುಲ್ಲಹಳ್ಳಿಯಲ್ಲಿ ತಯಾರಾದ ನಾಡಹೆಂಚು ಗಳನ್ನೇ ಹೊದಿಸಿಕೊಳ್ಳುತ್ತಿದ್ದುವು.

ಇಂದು ಕೈಗಾಣ ಹಾಗೂ ಕೈಮಗ್ಗಗಳ ಬೃಹತ್ ಪ್ರಮಾಣದ ಉದ್ಯೋಗಗಳು ಹೇಳ ಹೆಸರಿಲ್ಲದಂತಾಗಿವೆ. ಈ ಉದ್ಯೋಗಿಗಳ ವಂಶಸ್ಥರು ಇಂದಿಗೂ ಹುಲ್ಲಹಳ್ಳಿಯಲ್ಲಿದ್ದರೂ ಕಾಲದ ವೈಪರೀತ್ಯದಿಂದ ಬೇರೆ ಬೇರೆ ಉದ್ಯೋಗಗಳನ್ನು ಆಶ್ರಯಿಸಿದ್ದಾರೆ. ಕೈಮಗ್ಗದವರು ಬಹುಮಂದಿ

ಬೆಂಗಳೂರು ಪಟ್ಟಣವನ್ನು ಸೇರಿದ್ದಾರೆ. ಉಳಿದವರಲ್ಲಿ ಗಂಡಸರು ಸೈಕಲ್ ರಿಪೇರಿ ಅಂಗಡಿಗಳನ್ನೂ, ಹೆಂಗಸರು ಊಟದ ಎಲೆ ಹಚ್ಚುವ ವೃತ್ತಿಯನ್ನೂ ಹಿಡಿದಿದ್ದಾರೆ. ಶ್ರೀಮತಿ ವೆಂಕಟಮ್ಮ ಭೈರಶೆಟ್ಟಿ, ಗೌರಮ್ಮ ಮಹದೇವಶೆಟ್ಟಿ, ದೊಡ್ಡಮ್ಮ ಉಗ್ರಶೆಟ್ಟಿ, ಜಯಮ್ಮದಾಸಪ್ಪ, ಚಿಕ್ಕಮ್ಮ ಕೃಷ್ಣಶೆಟ್ಟಿ ಹಾಗೂ ಲಕ್ಷ್ಮಮ್ಮ ನರಸಿಂಹಶೆಟ್ಟಿ ಮೊದಲಾದವರು ಎಲೆ ಹಚ್ಚುವುದರಲ್ಲಿ ಪ್ರಮುಖರು. ಸಾಮಾನ್ಯವಾಗಿ ಒಂದು ದಿನಕ್ಕೆ ಒಬ್ಬ ಸ್ತ್ರೀಯು ಇನ್ನೂರು ಊಟದ ಎಲೆಯನ್ನು ಹಚ್ಚುತ್ತಾರೆ. ಮದುವೆ ಮೊದಲಾದ ಸಮಾರಂಭಗಳಿಗೆ ಮುಂಚಿತವಾಗಿ ತಿಳಿಸಿದರೆ ಸಾವಿರಾರು ಎಲೆಗಳನ್ನು ಇವರು ಒದಗಿಸುತ್ತಾರೆ. ಹುರ, ಹಾಡ್ಯ, ಹಂಚೀಪುರ ಮೊದಲಾದ ಕಾಡಿನ ಪ್ರದೇಶದಲ್ಲಿ ಬೆಳೆಯುವ ಮುತ್ತುಗದ ಎಲೆಯನ್ನು ತರಿಸಿಕೊಂಡು ಊಟದ ಎಲೆ ಹಚ್ಚಿ ಹುಲ್ಲಹಳ್ಳಿ ಹೋಬಳಿ ಹಾಗೂ ಮೈಸೂರು ನಗರಗಳಿಗೆ ಎಲೆಗಳನ್ನು ಒದಗಿಸುತ್ತಾರೆ.

ಇನ್ನು ಕೆಲವಾರು ತಿಂಗಳಲ್ಲಿ ಸುಮಾರು ನಾಲ್ಕು ಲಕ್ಷ ರೂ.ಗಳ ಬಂಡವಾಳದಲ್ಲಿ 'ರಾಜಾ ಪ್ರಾಡಕ್ಟ್ಸ' ಎಂಬ ಆಹಾರ ಮತ್ತು ಆಹಾರೇತರ ಎಣ್ಣೆಗಿರಣಿಯೊಂದು ಹುಲ್ಲಹಳ್ಳಿಯಲ್ಲಿ ತಲೆಯೆತ್ತಲಿದೆ ಇದರ ಮಾಲೀಕರು ಹುಲ್ಲಹಳ್ಳಿಯ ಶ್ರೀ ಹೆಚ್. ಎಸ್. ಸುರೇಶ್ ಅವರು. ಈ ಗಿರಣಿಯಲ್ಲಿ ಆಹಾರ ಧಾನ್ಯಗಳಾದ ಕಡಲೇಕಾಯಿ, ಸೂರ್ಯಕಾಂತಿ, ಎಳ್ಳು, ಕಸಬೆ, ಕೊಬ್ಬರಿ ಮತ್ತು ಆಹಾರೇತರ ಧಾನ್ಯಗಳಾದ ಹರಳು, ಸಾಸಿವೆ, ಹೊಂಗೆ, ಬೇವು–ಮೊದಲಾದುವುಗಳ ಎಣ್ಣೆಗಳನ್ನು ತಯಾರಿಸಲಾಗುವುದು.

ಹುಲ್ಲಹಳ್ಳಿಯಲ್ಲಿ ಹೆಚ್. ಬಿ. ಮರಿಯಪ್ಪನವರ ಮಾಲೀಕತ್ವದಲ್ಲಿ ಒಂದು ಘಂಟೆಗೆ ಒಂದು ಟನ್ ಭತ್ತವನ್ನು ಅಕ್ಕಿ ಮಾಡಬಲ್ಲ ಸಾಮರ್ಥ್ಯವುಳ್ಳ ಬಸವೇಶ್ವರ ಅಕ್ಕಿಗಿರಣಿಯೂ, ದಿನಕ್ಕೆ ಹತ್ತು ಕ್ವಿಂಟಾಲ್ ಅವಲಕ್ಕಿ ತಯಾರು ಮಾಡುವ ಅನ್ನಪೂರ್ಣ ಅವಲಕ್ಕಿಗಿರಣಿಯೂ ಕೆಲಸ ಮಾಡುತ್ತಿವೆ.

ಹೆಚ್. ಎಸ್. ಮಲ್ಲೇಶಯ್ಯನವರ ಗಣೇಶ ಅಕ್ಕಿಗಿರಣಿಯು ಸುಗ್ಗಿಯ ಕಾಲದಲ್ಲಿ ತಿಂಗಳಿಗೆ 3000 ಮೂಟೆ ಭತ್ತವನ್ನೂ, ಇತರ ಕಾಲದಲ್ಲಿ ತಿಂಗಳಿಗೆ 500 ಮೂಟೆ ಭತ್ತವನ್ನು ಅಕ್ಕಿ ಮಾಡಲಾಗುವುದು. ದಿನಕ್ಕೆ 100 ಮೂಟೆ ಭತ್ತವನ್ನು ಬೇಯಿಸಿ ಕುಸಲು ಅಕ್ಕಿ ತಯಾರಿಸುವ ಸಾಮರ್ಥ್ಯವುಳ್ಳ ಬಾಯ್ಲರ್ ಸಹಾ ಗಣೇಶ ಅಕ್ಕಿ ಗಿರಣಿಯಲ್ಲಿ ಇದೆ.

ಬಿ. ಹೆಚ್. ನರಸಿಂಹ ಶೆಟ್ಟರ ವೆಂಕಟೇಶ್ವರ ರೈಸ್‌ಮಿಲ್ ಮತ್ತು ಸ್ಟೀವರ್ ರೈಸ್‌ಮಿಲ್, ಶಾಂತರಾಜ್ ಅವರ ಮಲ್ಲೇಶ್ವರ ಮಾರ್ಡನ್ ರೈಸ್ ಮಿಲ್, ಮತ್ತು ಶಿವರುದ್ರಪ್ಪನವರ ಶಂಕರ್ ರೈಸ್ ಮಿಲ್‌ಗಳು ಹುಲ್ಲ ಹಳ್ಳಿಯ ಬೃಹತ್ ಪ್ರಮಾಣದ ಅಕ್ಕಿಗಿರಣಿಗಳಾಗಿವೆ. ಇವುಗಳಲ್ಲದೆ ಸಣ್ಣ ಪುಟ್ಟ ಹಲ್ಲರ್ ಮತ್ತು ಫ್ಲೋರ್ ಮಿಲ್‌ಗಳೂ ಇವೆ. ಇವುಗಳಲ್ಲಿ ಹೆಚ್. ಎಸ್. ಪರಶಿವಪ್ಪನವರ ಸಿದ್ಧಲಿಂಗೇಶ್ವರ ಹಲ್ಲರ್ ಅಂಡ್ ಫ್ಲೋರ್ ಮಿಲ್, ಹೆಚ್. ಪಿ. ಅಹ್ಮದ್ ಹುಸೇನ್ ಅವರ ಹಲ್ಲರ್ ಮತ್ತು ಫ್ಲೋರ್‌ಮಿಲ್, ಮಹಾದೇವಪ್ಪನವರ ಹಲ್ಲರ್ ಮತ್ತು ಫ್ಲೋರ್‌ಮಿಲ್, ಮತ್ತು ಹೆಚ್. ಎಂ. ನೂರ್ ಅಹ್ಮದ್ ಅವರ ಹಲ್ಲರ್ ಮತ್ತು ಫ್ಲೋರ್ ಮಿಲ್ ಮುಖ್ಯವಾದುವು.

ಹುಲ್ಲಹಳ್ಳಿ ರೈಸ್‌ಮಿಲ್‌ಗಳಲ್ಲಿ ಪ್ರತಿನಿತ್ಯ ದೊರೆಯುವ ಸುಮಾರು 5000 ಮೂಟೆ ಭತ್ತದ ಹೊಟ್ಟು, ನಂಜನಗೂಡಿನ ಬಿ. ವಿ. ಪಂಡಿತರ ಸದ್ವೈದ್ಯ ಶಾಲೆಗೆ ಹಲ್ಲುಪುಡಿ ತಯಾರಿಕೆಗಾಗಿ ರವಾನಿಸಲ್ಪಡುತ್ತದೆ.

ಸ್ವಾತಂತ್ರ್ಯಪೂರ್ವದಲ್ಲಿ ಹುಲ್ಲಹಳ್ಳಿಯಲ್ಲಿ ಪ್ರತಿಯೊಬ್ಬ ರೈತನ ಮನೆ ಯಲ್ಲೂ ಒಂದೊಂದು ಕೊಟ್ಟಣವಿತ್ತು. ಇದರಲ್ಲಿ ಭತ್ತವನ್ನು ಕುಟ್ಟಿ ಹೊಟ್ಟನ್ನು ತೆಗೆದು ಅಕ್ಕಿ ಮಾಡುತ್ತಿದ್ದರು. ಈಗ ಇದರ ಸ್ಥಾನವನ್ನು ರೈಸ್‌ಮಿಲ್ ಆಕ್ರಮಿಸಿದೆ.

ಹುಲ್ಲಹಳ್ಳಿಯಲ್ಲಿ ಸಾಕಷ್ಟು ಹೋಟೆಲ್‌ಗಳಿರುವುದರಿಂದ ರುಬ್ಬುವ ಯಂತ್ರಗಳೂ ಕೆಲಸಮಾಡುತ್ತಿವೆ. ಹೆಚ್. ಆರ್. ವೀರಭದ್ರಪ್ಪನವರು, ಎನ್. ರಮೇಶ್ ಅವರು, ಹೆಚ್. ಎನ್. ಸ್ವಾಮಿ ಅವರು, ಮತ್ತು ಎಸ್. ಬಿ. ಮಹಾದೇವಪ್ಪ–ಇವರುಗಳ ಒಂದೊಂದು ರುಬ್ಬುವ ಯಂತ್ರ ಗಳಲ್ಲಿ ಅಕ್ಕಿ, ಉದ್ದಿನಬೇಳೆ ಮತ್ತು ಕಡಲೆಬೇಳೆಗಳನ್ನು ರುಬ್ಬಿಕೊಡ ಲಾಗುವುದು.

ಹುಲ್ಲಹಳ್ಳಿಯಲ್ಲಿ ಸುಮಾರು ನಲವತ್ತು ಚಿಲ್ಲರೆ ಅಂಗಡಿಗಳಿರುವುದ ರಿಂದ ಆರು ಪುರಿಭಟ್ಟಿಗಳು ಕೆಲಸ ಮಾಡುತ್ತಿವೆ. ಅವುಗಳೆಂದರೆ, ಕಣೇ ನೂರು ಶಿವರುದ್ರಪ್ಪನವರದು, ಇಬ್ರಾಹಿಂ ಮಗ ಇಂದಾಸಾಬ್ ಅವರದು, ಬಂಗಾರಮ್ಮ (ನಂಜಮ್ಮ)ನವರದು, ಇಬ್ರಾಹಿಂ ಮಗ ಅಸ್ಲಾಂ ಅವರದು, ಕೆಂಪಶೆಟ್ಟಿ ಮಗ ಜವರ ಶೆಟ್ಟಿಯವರದು ಮತ್ತು ಪುಟ್ಟಮಾದಪ್ಪನ ಮಗ ಶ್ರೀಕಂಠಪ್ಪನವರ ಪುರಿಭಟ್ಟಿಗಳು. ಈ ಎಲ್ಲ ಪುರಿಭಟ್ಟಿಗಳಿಂದ ಸುಮಾರು

ಅರವತ್ತು ಮೂಟೆ ಪುರಿ ಒಂದು ದಿನಕ್ಕೆ ತಯಾರಾಗುತ್ತದೆ. 12 ಸೇರು ಅಕ್ಕಿಗೆ ಒಂದು ಮೂಟೆ ಪುರಿಯಾಗುತ್ತದೆ. ಸಾಮಾನ್ಯವಾಗಿ ಈ ಪುರಿ ಭಟ್ಟಿಯವರು ಭತ್ತ ಉಳ್ಳವರಿಂದ ಸಾಲವಾಗಿ ತಂದು, ಅದನ್ನು ನೀರಿನಲ್ಲಿ ನೆನೆಸಿ, ಒಣಗಿಸಿ, ನಂತರ ಹುರಿದು ಪುರಿ ಮಾಡಿ, ಅದನ್ನು ಹುಲ್ಲಹಳ್ಳಿಯ ಅಂಗಡಿಗಳಿಗೆ ಮಾರಿ, ಬಂದ ಹಣದಿಂದ ಸಾಲವನ್ನು ತೀರಿಸಿ, ಉಳಿದ ಹಣದಲ್ಲಿ ಜೀವನವನ್ನು ಸಾಗಿಸುತ್ತಾರೆ. ಒಂದು ಮೂಟೆ ಪುರಿಯ ಇಂದಿನ ಬೆಲೆ 55 ರೂ. ಒಟ್ಟಿನಲ್ಲಿ ಪುರಿಗೆ ಒಳ್ಳೆಯ ಬೇಡಿಕೆ ಇದೆ

ಗೃಹ ಕೈಗಾರಿಕೆಯಾದ ಮಂದಲಿಗೆ ನೇಯುವುದನ್ನು ಮೂರು ಮನೆಯವರು ಮಾತ್ರ ಮಾಡುತ್ತಿದ್ದಾರೆ. ಶಿವರಾಮನಾಯ್ಕ ಮತ್ತು ಅಂಕಪ್ಪನ ಮಗ ಮಹಾದೇವ ಮತ್ತು ದೊಣ್ಣೆಮಾರನಾಯ್ಕನ ಮನೆಯವರು. ಇವರಲ್ಲಿ ಮುಖ್ಯವಾಗಿ ಶಿವರಾಮನಾಯ್ಕನು ನಂಜನಗೂಡು ಸಹಕಾರ ಸಂಘದಿಂದ ಒಂದು ವಾರಕ್ಕೆ ಎರಡು ಪಿಂಡಿ ಹುಲ್ಲನ್ನು ತಂದು (ಇದರ ಬೆಲೆ 100 ರೂ.) ಹನ್ನೆರಡು ಮಂದಲಿಗೆಯನ್ನು ನೇಯ್ದು, ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮಗಳಲ್ಲಿ ಮಾರಾಟ ಮಾಡುತ್ತಾನೆ. ಈತನ ಬಳಿ ಎರಡು ಮಗ್ಗಗಳಿವೆ. ಈತನು ಸುಮಾರು ಇಪ್ಪತ್ತು ವರ್ಷಗಳಿಂದ ಈ ಉದ್ಯೋಗವನ್ನು ಮಾಡುತ್ತಿದ್ದಾನೆ.

ಹುಲ್ಲಹಳ್ಳಿಯಲ್ಲಿ ಎಲ್ಲರಿಗೂ ಉಪಯೋಗಕಾರಿಯಾದ ವಸ್ತುವನ್ನು ಒದಗಿಸುವ ಉದ್ಯೋಗವೆಂದರೆ ಸುಣ್ಣ ತಯಾರಿಕೆ, ಸುಮಾರು ಹದಿನೈದು ಕುಟುಂಬಗಳು ಸುಣ್ಣ ತಯಾರಿಸುತ್ತಿವೆ ಹತ್ವಾಳು, ಶಿರಮಳ್ಳಿ, ಕಣೇನೂರು ಮತ್ತು ಕೆಂಬಾಲ್ ಗ್ರಾಮಗಳಿಂದ ಸುಣ್ಣದ ಕಲ್ಲುಗಳನ್ನು ತಂದು ಹುಲ್ಲಹಳ್ಳಿಯ ತಮ್ಮ ತಮ್ಮ ಗೂಡುಗಳಲ್ಲಿ ಈ ಸುಣ್ಣಗಾರರು ಸುಣ್ಣವನ್ನು ಸುಡುತ್ತಾರೆ. ಒಂದು ಪಲ್ಲ ಕಲ್ಲಿನ ಬೆಲೆ 70 ರೂ. ಎರಡು ಪಲ್ಲ ಇದ್ದಿಲಿನ ಬೆಲೆ 0 ರೂ. ಇವುಗಳಿಂದ ತಯಾರಾದ ಒಂದು ಪಲ್ಲ ಸುಣ್ಣಕ್ಕೆ 120 ರೂನಂತೆ ಬೆಲೆಯಾಗುತ್ತದೆ. ಸುಣ್ಣ ಸುಡುವವರಲ್ಲಿ ಪ್ರಮುಖರು ಪಾಪಮ್ಮ ಭದ್ರಯ್ಯ, ಮರಿಸ್ವಾಮಯ್ಯ, ಆರ್ಮುಗಂ, ನಟರಾಜ ಮತ್ತು ರತ್ನಮ್ಮ.

ಮನೆಗಳಿಗೆ ಬೇಕಾದ ಕಿಟಕಿ, ಬಾಗಿಲು ಹಾಗೂ ಪೀಠೋಪಕರಣಗಳನ್ನು ತಯಾರಿಸಬಲ್ಲ ವಿಶ್ವಕರ್ಮರು ಕೆಲವೇ ಮಂದಿ ಇದ್ದಾರೆ. ಬಸಪ್ಪಾಚಾರಿ, ಕೆಂಪನಂಜಾಚಾರಿ, ಕರಿಯಪ್ಪಾಚಾರಿ, ಲಿಂಗಾಚಾರಿ, ಮರಿಯಾಚಾರಿ, ಸಣ್ಣಸ್ವಾಮಾಚಾರಿ ಮತ್ತು ನಾಗಣ್ಣಾಚಾರಿ ಪ್ರಮುಖರು.

ಇವರುಗಳಿಗೆ ಗೃಹ ನಿರ್ಮಾಣ ಕಾಲದಲ್ಲಿ ಬಿಡುವಿಲ್ಲದ ಕೆಲಸವಿರುತ್ತದೆ. ಸ್ವತಃ ಬಂಡವಾಳವನ್ನು ಇವರಾರೂ ಹೊಂದಿರುವುದಿಲ್ಲ.

ಹುಲ್ಲಹಳ್ಳಿಯಲ್ಲಿ ನಾಲ್ಕು ಎತ್ತಿನ ಗಾಡಿಯ ಕಾರ್ಖಾನೆಗಳಿವೆ. ಮಲ್ಲಿಕಾರ್ಜುನಶೆಟ್ಟಿಯವರ ಗಾಡಿ ಕಾರ್ಖಾನೆಯು ಸಮರ್ಥವಾಗಿ ಕೆಲಸ ಮಾಡುತ್ತಿದೆ. ಒಂದು ಎತ್ತಿನ ಗಾಡಿಯನ್ನು ತಯಾರಿಸಲು 1100 ರೂ. ಕೂಲಿಯಾಗುತ್ತದೆ. ತಯಾರಾದ ಹೊಸ ಗಾಡಿಯ ಬೆಲೆ 5,500 ರೂ ಆಗುತ್ತದೆ. ಗಾಡಿಯ ಪಾರ, ಮೂಕಿ ಮತ್ತು ಇರ್ಚಗಟ್ಟನ್ನು ಗೊಬ್ಬಳಿ ಮರದಿಂದಲೂ ಮತ್ತು ಚಕ್ರವನ್ನು ಸಾಗವಾನಿ (ತೇಗ) ಮರದಿಂದಲೂ ತಯಾರಿಸುತ್ತಾರೆ. ಮಲ್ಲಿಕಾರ್ಜುನಶೆಟ್ಟಿಯವರು ಒಂದು ವರ್ಷಕ್ಕೆ ಗರಿಷ್ಠ ಹತ್ತು ಜೊತೆ, ಕನಿಷ್ಠ ಮೂರು ಜೊತೆ ಗಾಡಿಗಳನ್ನು ತಯಾರಿಸುತ್ತಾರೆ. ಇವರಲ್ಲದೆ ಶಿವನಂಜು ಅವರ ಗಾಡಿಕಾರ್ಖಾನೆ ಇಷ್ಟೇ ಪ್ರಮಾಣದಲ್ಲಿ ನಡೆಯುತ್ತಿದೆ. ಸಿದ್ಧಶೆಟ್ಟಿ ಮತ್ತು ಚೆನ್ನಶೆಟ್ಟಿಯವರ ಗಾಡಿ ಕಾರ್ಖಾನೆಗಳೂ ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಕೆಲಸಮಾಡುತ್ತಿವೆ. ಈ ಕಾರ್ಖಾನೆಗಳಲ್ಲಿ ಕಬ್ಬಿಣ ಮತ್ತು ಮರಗೆಲಸಗಳೂ ನಡೆಯುತ್ತವೆ. ದಿವಂಗತ ಮಲ್ಲಶೆಟ್ಟಿ ಹೆಸರಾಂತ ಗಾಡಿ ತಯಾರಕರಾಗಿದ್ದರು.

ಸ್ಕೋಲಶೆಟ್ಟಿ, ರಂಗಶೆಟ್ಟಿ, ವೆಂಕಟಶೆಟ್ಟಿ ಮೊದಲಾದ ಐದಾರು ಒಕ್ಕಲು ಪ್ರಸಿದ್ಧ ಕುಂಭಕಾರರಾಗಿದ್ದರು. ಇವರು ದಿನಕ್ಕೆ 300 ಉಂಡೆ ಹೆಂಚು ಮತ್ತು 100 ಮಡಕೆಗಳನ್ನು ತಯಾರಿಸುವ ಸಾಮರ್ಥ್ಯ ಪಡೆದಿದ್ದರು. ಇಂದಿನ ದಿನಗಳಲ್ಲಿ ಕುಂಭಕಾರರ ಹದಿನಾರು ಒಕ್ಕಲುಗಳಿದ್ದರೂ ಕೇವಲ ಮೂವರು ಉದ್ಯೋಗನಿರತರಾಗಿದ್ದಾರೆ. ಅವರುಗಳೆಂದರೆ ವೆಂಕಟಮ್ಮ ಕೊತಕೊತ ರಂಗಶೆಟ್ಟಿ, ರಂಗಶೆಟ್ಟಿಯ ಮಗ ರಂಗಶೆಟ್ಟಿ ಮತ್ತು ಪೀಯಯ್ಯನ ಮಗ ರಂಗಶೆಟ್ಟಿ. ಇವರುಗಳು ಇಂದು ಹೆಚ್ಚೆಂದರೆ ದಿನಕ್ಕೆ 100 ಉಂಡೆ ಹೆಂಚು ಮತ್ತು 25 ಮಡಕೆಗಳನ್ನು ತಯಾರಿಸಿ ಕಣೇನೂರು, ಶಿರಮಳ್ಳಿ, ಕಾರ್‍ಯ ಗ್ರಾಮಗಳಲ್ಲಿ ಮಾರಾಟ ಮಾಡುತ್ತಾರೆ. ಇವರ ಕುಂಭಗಳಿಗೆ ಕಪಿಲಾನದಿಯ ದಡದ ಮಣ್ಣು ಮೂಲ ವಸ್ತು.

ಚಿನ್ನಗೆಲಸದಲ್ಲಿ ಮಂಟಾಚಾರಿ, ಬೆಟ್ಟಾಚಾರಿ ಮತ್ತು ಸಿದ್ಧಾಚಾರಿ ಎಂಬುವರು ಪ್ರಸಿದ್ಧರಾಗಿದ್ದರು. ಇಂದು ರಾಜಣ್ಣಾಚಾರಿ, ನಾಗರಾಜಾಚಾರಿ ಮತ್ತು ರಾಚಾಚಾರಿ ಇವರುಗಳು ಚಿನ್ನ, ಬೆಳ್ಳಿಯ ಕೆಲಸವನ್ನು ಮಾಡುತ್ತಿದ್ದಾರೆ.

ಸುಮಾರು ಹದಿನಾಲ್ಕು ಒಕ್ಕಲು ಮಡಿವಾಳ ಶೆಟ್ಟರಿದ್ದಾರೆ. ಇವರಲ್ಲಿ ಸುಬ್ಬಶೆಟ್ಟಿ ಮೊದಲಾದ ಆರು ಮಂದಿ ಇಸ್ತ್ರಿ ಅಂಗಡಿ ತೆರೆದಿರುತ್ತಾರೆ.

ಅಬ್ದುಲ್‌ಸುಬಾನ್‌ಸಾಬ್ (ಅಂಗಹೀನವಾಗಿದೆ) ಮತ್ತು ಅಮೀರ್ ಸಾಬ್ ಇವರುಗಳು ಬೀಗ, ಬ್ಯಾಟರಿ, ಛತ್ರಿ–ಮೊದಲಾದ ವಸ್ತುಗಳನ್ನು ರಿಪೇರಿ ಮಾಡುತ್ತಾರೆ.

ರುದ್ರಸ್ವಾಮಿಯವರ ಪ್ರಭಾ ವಾಚ್ ವರ್ಕ್ಸ್, ಆಫ್ತಾಬ್‌ಅಹ್ಮದ್ ಅವರ ಸಿಟಿಜನ್ ವಾಚ್ ವರ್ಕ್ಸ್ ಮತ್ತು ಎಸ್. ಜಿ. ಪಯಾಜ್‌ಅಹ್ಮದ್ ಅವರ ವಾಚ್ ರಿಪೇರಿ ಅಂಗಡಿಗಳು ಕೆಲಸ ನಿರ್ವಹಿಸುತ್ತಿವೆ.

ಹೆಚ್. ಎ. ನಾಸಿಮುದ್ದೀನ್ ಅವರ ಸ್ಟಾರ್ ರೇಡಿಯೋ ಹೌಸ್ ನಲ್ಲಿ ರೇಡಿಯೋ–ಟೇಪ್‌ರೆಕಾರ್ಡ್‌ಗಳನ್ನು ರಿಪೇರಿ ಮಾಡಲಾಗುತ್ತದೆ. ಹೆಚ್. ಎಂ. ಮಝರ್ ಅವರ ಆರಿಫ್ ರೇಡಿಯೋ ಎಲೆಕ್ಟ್ರಾನಿಕ್ಸ್‌ನಲ್ಲಿ ಹಲವಾರು ವಿದ್ಯುಚ್ಛಕ್ತಿ ಉಪಕರಣಗಳನ್ನು ರಿಪೇರಿ ಮಾಡಲಾಗುವುದು. ಅವುಗಳಲ್ಲಿ ಸಿನೆಮಾ ಪ್ರೊಜೆಕ್ಟರ್, ರೇಡಿಯೋ ಮುಖ್ಯವಾದುವು. ಮನೆ ಗಳಿಗೆ ವೈರಿಂಗ್ ಸಹಾ ಇವರಿಂದ ಮಾಡಲಾಗುವುದು.

ಹೆಚ್. ಬಿ. ಮರಿಯಪ್ಪನವರ ಜ್ಯೋತಿ ಇಂಡಸ್ಟ್ರೀಸ್‌ನಲ್ಲಿ ಸಣ್ಣ ವ್ಯವಸಾಯ ಕಬ್ಬಿಣ ಸಲಕರಣೆಗಳ ತಯಾರಿಕೆ, ವೆಲ್ಡಿಂಗ್, ಗ್ರಿಲ್ಸ್ ಮತ್ತು ಮನೆಯ ಕಬ್ಬಿಣದ ಬಾಗಿಲು ಮತ್ತು ಕಿಟಕಿಗಳನ್ನು ತಯಾರಿಸ ಲಾಗುವುದು.

ಹುಲ್ಲಹಳ್ಳಿಯ ಅತ್ಯಂತ ಪ್ರಮುಖ ಗೃಹ ಕೈಗಾರಿಕಾ ಕೇಂದ್ರ ವೆಂದರೆ 'ಚಿದಾನಂದ ಹೋಂ ಇಂಡಸ್ಟ್ರೀಸ್' (ರಿ). ಇದರ ಆಶ್ರಯದಲ್ಲಿ ಬೃಹತ್ ಪ್ರಮಾಣದ ಗಂಧದಕಡ್ಡಿ ತಯಾರಾಗುವುದು. ಸುಮಾರು 40 ರಿಂದ 50 ಮುಸ್ಲಿಂ ಮನೆಗಳಲ್ಲಿ ಮಸಿ–ಜಿಗಟುಗಳಿಂದ ಗಂಧದ ಕಡ್ಡಿ ಗಳನ್ನು ಉಜ್ಜಿಕೊಡುತ್ತಾರೆ. ಪ್ಯಾಕಿಂಗ್ ಕೆಲಸಕ್ಕಾಗಿ 5 ಮಂದಿ ಕೂಲಿ ಕಾರರು ದುಡಿಯುತ್ತಾರೆ. ಗಂಧದ ಕಡ್ಡಿಗೆ ಬೇಕಾದ ಮಸಿ, ಜಿಗಟು, ಬಿದಿರು ಕಡ್ಡಿ, ಸೆಂಟ್ ಮೊದಲಾದುವನ್ನು ಮೈಸೂರಿನಿಂದ ತರಲಾಗು ತ್ತದೆ. ತಿಂಗಳಿಗೆ ಸಾಮಾನ್ಯವಾಗಿ 15000 ರೂ.ಗಳ ವಹಿವಾಟು ನಡೆಯು ತ್ತದೆ. ನಂಜನಗೂಡಿನ 'ಸ್ಟೇಟ್ ಬ್ಯಾಂಕ್ ಆಫ್ ಮೈಸೂರು' ಹಣದ ನೆರವು ನೀಡಿದೆ. ಈ ಇಂಡಸ್ಟ್ರೀಸ್‌ನ ಮಾಲೀಕರಾದ ವಿ. ಜಿ. ಚಿದಾನಂದ ಮೂರ್ತಿಯವರು ಜಿಲ್ಲಾ ಕೈಗಾರಿಕಾ ಕೇಂದ್ರ ನಂಜನಗೂಡು ಮತ್ತು

ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಮೈಸೂರು ಇವರು ನಡೆಸಿದ ಕೈಗಾರಿಕಾ ವಸ್ತುಪ್ರದರ್ಶನದಲ್ಲಿ ಭಾಗವಹಿಸಿ ಪ್ರಶಸ್ತಿಯನ್ನು ಪಡೆದಿರುತ್ತಾರೆ. ಇವರು ತಯಾರಿಸಿದ ಗಂಧದಕಡ್ಡಿಯು ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮಗಳಲ್ಲಿ ಮಾರಾಟವಾಗುತ್ತದೆ.

ವಸಂತಕುಮಾರ್ ಅವರ ಪಲ್ಲವಿ ಪರ್ಫ್ಯೂಮರಿ ವರ್ಕ್ಸ್ (ರಿ) ನಲ್ಲಿ ತಿಂಗಳಿಗೆ 25,000 ರೂಗಳ ವಹಿವಾಟಿನಲ್ಲಿ ಗಂಧದಕಡ್ಡಿ ವ್ಯಾಪಾರ ನಡೆಯುತ್ತಿದೆ. ತುಮಕೂರು, ಹುಬ್ಬಳ್ಳಿ, ದಾವಣಗೆರೆ, ಹೊಸಪೇಟೆಗಳಲ್ಲಿ ಇವರ ಗಂಧದಕಡ್ಡಿ ವ್ಯಾಪಾರವಾಗುತ್ತಿದೆ.

ಉಸ್ಮಾನ್‌ಸಾಬ್ ಅವರ ಧನಲಕ್ಷ್ಮಿ ಬೀಡಿ ವರ್ಕ್ಸ್ (ರಿ), ಮತ್ತೊಂದು ಗೃಹ ಕೈಗಾರಿಕಾ ಕೇಂದ್ರವಾಗಿದೆ. ಇದರಲ್ಲಿ ಒಂದು ದಿನಕ್ಕೆ 15000 ಬೀಡಿಗಳನ್ನು ತಯಾರಿಸಲಾಗುವುದು. ಇದರ ಸರಕುಗಳನ್ನು ಮೈಸೂರಿನಿಂದ ತಂದು ಹೆಚ್. ಡಿ ಕೋಟೆ, ಹರದನಹಳ್ಳಿ, ಮತ್ತು ಮಟಕೆರೆಗಳಲ್ಲಿ ಬೀಡಿ ತಯಾರಿಸಲಾಗುವುದು. ಮಕಬುಲ್‌ಅಹ್ಮದ್ ಮೊದಲಾದ ನಾಲ್ಕಾರು ಜನ ಬೀಡಿ ಏಜೆಂಟರೂ ಹುಲ್ಲಹಳ್ಳಿಯಲ್ಲಿದ್ದಾರೆ.

ಬೇಕರಿ ಸಾಮಾನ್ಯವಾಗಿ ದೊಡ್ಡ ಪ್ರಮಾಣದಲ್ಲಿ ನಡೆಯುವ ಕೈಗಾರಿಕೆಯಾಗಿದೆ. ಕೆ. ಎಸ್. ಗೋಪಾಲನ್ ಅವರ ಲಕ್ಷ್ಮೀ ಬೇಕರಿಯಲ್ಲಿ ಒಂದು ದಿನಕ್ಕೆ 15 ಕೆ.ಜಿ. ಬ್ರೆಡ್, 300 ಬನ್, ತಿಂಗಳಿಗೆ 10 ಕೆ.ಜಿ. ಬಿಸ್ಕತ್, ವಾರಕ್ಕೆ 5 ಡಜನ್ ಕೇಕ್ ತಯಾರಾಗಿ ಮಾರಾಟವಾಗುತ್ತದೆ. ಬಾಲಕೃಷ್ಣ ಅವರ ಅಪ್ಸರಾ ಬೇಕರಿಯಲ್ಲಿ ದಿನಕ್ಕೆ 1500 ಬನ್, 3 ಕೆ ಜಿ. ಬ್ರೆಡ್, 2 ಕೆ. ಜಿ. ಬಿಸ್ಕತ್, ವಾರಕ್ಕೆ 2 ಕೆ. ಜಿ. ಕೇಕ್ ತಯಾರಾಗಿ ಮಾರಾಟವಾಗುತ್ತದೆ. ಅಯೂಬ್ ಖಾನ್ ಬೇಕರಿಯಲ್ಲಿ 300 ರಿಂದ 1500 ಬನ್, 2 ಕೆ.ಜಿ. ಬಿಸ್ಕತ್ ತಯಾರಾಗಿ ಕೇವಲ ಸುತ್ತಲ ಹಳ್ಳಿಗಳಲ್ಲಿ ಮಾತ್ರ ಮಾರಾಟವಾಗುತ್ತದೆ.

ಮಹಮದ್ ಷಫಿ, ಕಲೀಂ ಮತ್ತು ಆರಿಫ್ ಮೊದಲಾದ ಹದಿನಾಲ್ಕು ಮಂದಿ ಎತ್ತುಗಳಿಗೆ ಲಾಳ ಹೊಡೆಯುವ ಕೆಲಸವನ್ನು ಮಾಡುತ್ತಾರೆ.

ಮಂಚಯ್ಯನ ಮಗ ಮಂಚಯ್ಯ ಬಹುದಿನಗಳಿಂದ ಮೋಚಿ ಕೆಲಸವನ್ನೂ ಮಾಡುತ್ತಿದ್ದಾನೆ. ಚರ್ಮ ಮತ್ತು ಅಟ್ಟವನ್ನು ಮೈಸೂರಿನಿಂದ ತಂದು ಸುಂದರವಾಗಿ ಚಪ್ಪಲಿಗಳನ್ನು ಹೊಲಿಯುತ್ತಾನೆ. ಚಿಲ್ಲ

ಮುತ್ತು, ಸುಬ್ರಮಣಿ, ಮಾಗಾಳಿ ಮತ್ತು ಬಸ್ವಾಮಿ ಇವರುಗಳು ಚಪ್ಪಲಿ ರಿಪೇರಿ ಮಾಡಿಕೊಂಡು ಬರುತ್ತಿದ್ದಾರೆ.

ಜಲೀಲ್‌ಸಾಬ್, ಮಿರಾಹ್ಮದ್ದೀನ್‌ಸಾಬ್ ಮತ್ತು ನೂರಹ್ಮದ್ ಮೊದಲಾದವರು ದನ, ಕುರಿ, ಎಮ್ಮೆಗಳ ಚರ್ಮವನ್ನು ಕೊಂಡು ನಂಜನಗೂಡು, ಮೈಸೂರುಗಳಲ್ಲಿ ಮಾರಾಟ ಮಾಡುತ್ತಾರೆ.

ನಫೀಸ್ ಫೋಟೋ ಸ್ಟುಡಿಯೋ ಮತ್ತು ಎಸ್. ಕೆ. ಸ್ವಾಮಿ ಶೆಟ್ಟಿ ಅವರ 'ಶಿವ ಕಲರ್ ಸ್ಟುಡಿಯೋ' ಕೆಲಸ ನಿರ್ವಹಿಸುತ್ತಿವೆ.

ಶಿವಾನಂದ ಸ್ವಾಮಿಯವರ ಕಾಮಧೇನು ಕಾಫಿವರ್ಕ್ಸ್‌ನಲ್ಲಿ ದಿನಕ್ಕೆ 3 ರಿಂದ 5 ಕೆ.ಜಿ. ಕಾಫಿಪುಡಿ ಮಾರಾಟವಾಗುತ್ತದೆ.

ಹುಲ್ಲಹಳ್ಳಿಯಲ್ಲಿ ಸುಮಾರು ಹದಿನಾಲ್ಕು ಸೈಕಲ್ ರಿಪೇರಿ ಅಂಗಡಿಗಳಿವೆ. ಕಲೀಲ್ (ಬಿ.ಸಿ.ಹೆಚ್.) ಸೈಕಲ್ ಅಂಗಡಿಯಲ್ಲಿ ಸೈಕಲ್ ಭಾಗಗಳ ವೆಲ್ಡಿಂಗ್ ಮೊದಲಾದ ಕೆಲಸ ನಡೆಯುತ್ತದೆ. ಕಲೀಲ್ ಅಹ್ಮದ್ ಸೈಕಲ್ ರಿಪೇರಿ ಅಂಗಡಿಯಲ್ಲಿ ಮೋಟರು, ಮೋಟಾರು ಬೈಸಿಕಲ್‌ಗಳ ರಿಪೇರಿಯೂ ನಡೆಯುತ್ತದೆ.

ಹೂ ಕಟ್ಟುವುದು, ಮಾರುವುದೂ ಕೂಡಾ ಸಾಮಾನ್ಯವಾಗಿ ದೊಡ್ಡ ಪ್ರಮಾಣದಲ್ಲೇ ನಡೆಯುತ್ತದೆ. ಜವನಮ್ಮ, ಅಕ್ಕಮ್ಮ, ಕುಳ್ಳಮ್ಮ, ಪುಟ್ಟಮ್ಮ, ಚಿಕ್ಕಮ್ಮ, ಗೌರಿ, ಸಣ್ಣಮ್ಮ, ಸಿದ್ದನಾಯ್ಕ ಮತ್ತು ಮಹಾದೇವಣ್ಣ ಹೂ ಕಟ್ಟುವವರಲ್ಲಿ ಪ್ರಮುಖರು. ಇವರೆಲ್ಲರ ಒಟ್ಟು ಉದ್ಯೋಗದಿಂದ ಹುಲ್ಲಹಳ್ಳಿಯಲ್ಲಿ 200 ಮಾರಿನಿಂದ 500 ಮಾರು ಹೂ ಮಾರಾಟವಾಗುತ್ತದೆ. ದೇವರಿಗೆ, ಸಭೆ–ಸಮಾರಂಭಗಳಿಗೆ ಹೂಹಾರವನ್ನು ಇವರು ಕಟ್ಟುತ್ತಾರೆ. ಮಲ್ಲಿಗೆ, ಕಾಕಡ, ಸೇವಂತಿಗೆ, ಕನಕಾಂಬರ, ನೆಲದಾವರೆ ಮೊದಲಾದ ಹೂಗಳನ್ನು ಮೈಸೂರು ಸಿಟಿ ಮಾರ್ಕೆಟ್‌ನಿಂದ ತಂದು ಹುಲ್ಲಹಳ್ಳಿಯಲ್ಲಿ ಮಾರಾಟ ಮಾಡುತ್ತಾರೆ.

ಮೇಲ್ಕಂಡಂತೆ ಹುಲ್ಲಹಳ್ಳಿಯಲ್ಲಿ ಇಪ್ಪತ್ತಾರು ವಿವಿಧ ಕೈಗಾರಿಕೆಗಳನ್ನು ಗುರುತಿಸಲಾಗಿದೆ.



ಹುಲ್ಲಹಳ್ಳಿಯ ಶಿಲಾಶಾಸನ ಸಂ. 137 (ಜೈನರ ನಿಸಿಧಿಗೆ ಶಾಸನ)



ಲೋಹದ್ವ್ಯಗಜ ಲಾಂಛನವುಳ್ಳ ಕ್ರಿ.ಶ. 7ನೇ ಶತಮಾನದ
ಗಂಗರಾಜ ಮುಷ್ಕರನ ತಾಮ್ರಶಾಸನ

## 10. ಹುಲ್ಲಹಳ್ಳಿಯ ಶಾಸನಗಳು

ಶಾಸನ ಎಂದರೆ ರಾಜಾಜ್ಞೆ. 'ಶಾಸ್' ಎಂಬ ಧಾತುವಿಗೆ ಆಜ್ಞೆ ಮಾಡು, ಶಿಕ್ಷಿಸು, ನಿಯಂತ್ರಿಸು ಮುಂತಾದ ಅರ್ಥಗಳಿವೆ. ಹಿಂದಿನ ಕಾಲದಲ್ಲಿ ರಾಜರು ತಮ್ಮ ಆಜ್ಞೆಗಳನ್ನು ಪ್ರಜೆಗಳಿಗೆ ಡಂಗುರ ಹೊಡೆಯಿಸಿ, ನಾಲ್ಕು ದಾರಿಗಳು ಕೂಡುವ ಸ್ಥಳದಲ್ಲಿ ಬರೆಯಿಸಿ ಪ್ರಕಟಿಸುತ್ತಿದ್ದರು. ಅವುಗಳನ್ನು ಮೀರಿದವರಿಗೆ ಶಿಕ್ಷೆ ವಿಧಿಸಲಾಗುತ್ತಿತ್ತು. ಮುಂದೆ ರಾಜಾಜ್ಞೆಗೆ ಪರ್ಯಾಯವಾದ ಇತರ ಬರಹಗಳಿಗೂ ಶಾಸನಗಳೆಂದೇ ಹೆಸರಾಯಿತು. ಶಾಸನದ ಅರ್ಥವು ಇನ್ನೂ ವಿಸ್ತಾರವಾಗಿ ರಾಜರ ಪ್ರಶಸ್ತಿ, ವೀರರ ಸಾವು, ಸಂನ್ಯಾಸಿಗಳ ಮರಣ ಮುಂತಾದುವನ್ನು ತಿಳಿಸುವ ಬರಹಗಳೂ ಶಾಸನಗಳಾದುವು.

ಶಾಸನಗಳಲ್ಲಿ ಶಿಲಾಶಾಸನ, ಲೋಹಶಾಸನಗಳು ಪ್ರಮುಖವಾದುವು. ಶಾಸನಗಳ ಉದ್ದೇಶಕ್ಕನುಗುಣವಾಗಿ ದಾನಶಾಸನ, ವೀರಶಾಸನ, ವಿಜಯಶಾಸನ, ನಿಷಧಿಗೆಶಾಸನ, ಮಹಾಸತಿ ಶಾಸನ, ಪ್ರಶಸ್ತಿ ಶಾಸನಗಳೇ ಮೊದಲಾದ ಹಲವಾರು ಶಾಸನಗಳನ್ನಾಗಿ ವಿಂಗಡಿಸಲಾಗಿದೆ.

ಶಾಸನಗಳು ಚಾರಿತ್ರ್ಯಿಕ ಬರವಣಿಗೆಗೆ ಮೂಲ ಆಧಾರ. ನಾಡಿನ ಸಂಸ್ಕೃತಿಯನ್ನು ಅರಿಯಲು ಶಾಸನಗಳಿಗೇ ಮೊರೆ ಹೋಗಬೇಕು. ಶಾಸನವು ನಂಬಲರ್ಹ ಮಾಹಿತಿಯನ್ನು ಒದಗಿಸುತ್ತದೆ. ನಮಗೆ ದೊರೆತಿರುವ ಕನ್ನಡನಾಡಿನ ಅತ್ಯಂತ ಪ್ರಾಚೀನ ಕನ್ನಡ ಶಿಲಾಶಾಸನವೆಂದರೆ ಕ್ರಿ.ಶ. 450ರ ಅವಧಿಯ 'ಪಲ್ಮಡಿ' (ಜಗತ್ ಪ್ರಸಿದ್ಧ ಕಲೆಯ ಬೀಡಾದ ಬೇಲೂರಿನ ಬಳಿಯ ಒಂದು ಗ್ರಾಮ) ಶಾಸನವೆಂಬುದು ನಮಗೆಲ್ಲರಿಗೂ ತಿಳಿದ ವಿಷಯವಾಗಿದೆ.

ವಿದೇಶೀಯರಾದ ಫ್ಲೀಟ್ ಮತ್ತು ಬಿ.ಎಸ್. ರೈಸ್ ಅವರು ಕನ್ನಡ ನಾಡಿನ ಶಾಸನಗಳನ್ನು 1876ರಲ್ಲಿ ಡಾ. ಬಾರ್ಗೆಸ್ ಅವರ 'ಇಂಡಿಯನ್ ಆಂಟಿಕ್ವೆರಿ (Indian Antiquary)ಪತ್ರಿಕೆಯಲ್ಲಿನ ಪ್ರಥಮ ಸಂಪುಟದಲ್ಲಿ ಪ್ರಥಮಬಾರಿಗೆ ಪ್ರಕಟಿಸಿದರು. ಇವರ ನಂತರ ಬಾರ್ನೆಟ್ ಎಂಬುವರು ಕನ್ನಡ ನಾಡಿನ ಶಾಸನಗಳನ್ನು ಸಂಪಾದಿಸಿದರು. ಅನಂತರ ನಮ್ಮವರೇ ಆದ ಕೆ. ಬಿ. ಪಾಠಕ್, ಆರ್. ನರಸಿಂಹಾಚಾರ್ಯ, ಆರ್. ರಾಮರಾವ್,

ಎಂ. ಹೆಚ್. ಕೃಷ್ಣ, ಆರ್. ಶಾಮಾಶಾಸ್ತ್ರಿ, ಹೆಚ್. ಕೃಷ್ಣಶಾಸ್ತ್ರಿ, ಆರ್. ಎಸ್. ಪಂಚಮುಖಿ, ಎನ್. ಲಕ್ಷ್ಮೀನಾರಾಯಣರಾವ್, ಪಾಂಡುರಂಗರಾವ್ ದೇಸಾಯಿ, ಕೆ. ಜಿ ಕುಂದಣಗಾರ್, ಎನ್. ಸಿ. ನಂದಿಮಠ್, ಎ. ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ, ಮೋವುಂಡಿ ಮಲ್ಲಾರಿ, ಜಿ. ಎಸ್. ಗಾಯಿ, ಡಾ. ಕೆ. ವಿ. ರಮೇಶ್, ಬಿ. ಆರ್. ಗೋಪಾಲ್, ಸೀತಾರಾಮವ್ ಜಾಗೀರ್ದಾರ್, ಶ್ರೀನಿವಾಸ ರಿತ್ತಿ, ಎಸ್. ಶೆಟ್ಟರ್, ಮಾಧವ ಎನ್. ಕಟ್ಟಿ, ಎಂ. ಎಂ. ಕಲ್ಬುರ್ಗಿ, ಡಾ. ರಘುನಾಥ ಭಟ್, ಡಾ. ಎಂ. ಚಿದಾನಂದಮೂರ್ತಿ ಮುಂತಾದವರ ಸಾರ್ಥಕ ಪರಿಶ್ರಮದಿಂದ ಶಾಸನಗಳ ಮೂಲಕ ಕನ್ನಡನಾಡಿನ ಬಗ್ಗೆ ನಿತ್ಯ ಸತ್ಯವಾದ ಹೊಸಬೆಳಕು ಬೀರುವಂತಾಗಿದೆ. ಅಂತೆಯೇ ಹುಲ್ಲಹಳ್ಳಿಯಲ್ಲಿ ದೊರೆತಿರುವ ಶಾಸನಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ. ವೀರಗಲ್ಲುಗಳು ಮತ್ತು ಮಹಾಸತಿ ಕಲ್ಲುಗಳಿಗೂ ಹುಲ್ಲಹಳ್ಳಿ ಹೊರತಾಗಿಲ್ಲ.

**1. ಹುಲ್ಲಹಳ್ಳಿಯ ಶಾಸನ, ಸಂಖ್ಯೆ 137 (ಎ.ಕ. III ನಂಜನಗೂಡು 65) ವರದರಾಜಸ್ವಾಮಿ ದೇವಸ್ಥಾನದ ಮಹಾದ್ವಾರಕ್ಕೆ ಉತ್ತರದಲ್ಲಿರುವ ಕಲ್ಲು.**

ಈ ಶಿಲಾಶಾಸನವು ಮಾಚಿರಾಜ ಮತ್ತು ಮಾಲಾಂಬಿಕೆಯರ ಮಕ್ಕಳಾದ ಪೆರ್ಮಿದೇವರಸ ಮತ್ತು ಪೆರುಮಾಳು ದೇವರಸರು ಹುಲ್ಲಹಳ್ಳಿಯನ್ನು ಆಳುತ್ತಿದ್ದರು ಎಂದು ತಿಳಿಸುತ್ತದೆ. ಇವರು ಮಾಣಿಕ್ಯ ದೇವರನ್ನು ಪ್ರತಿಷ್ಠಾಪಿಸಿ ತ್ರಿಜಗನ್ಮಂಗಲ ಎಂಬ ದೇವಾಲಯವನ್ನು ನಿರ್ಮಿಸಿದರೆಂದೂ, ಹಳೆಯ ದೇವಾಲಯವಾದ ಪರಮೇಶ್ವರ ಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡಿದರೆಂದೂ ಇದರಿಂದ ತಿಳಿದು ಬರುತ್ತದೆ. ಈ ದೇವಾಲಯಗಳಿಗೆ ಭೂಮಿಯನ್ನು ಬಿಟ್ಟುಕೊಟ್ಟು (ಕ್ರಿ.ಶ. 1351 ರಲ್ಲಿ) ಪೆರುಮಾಳು ದೇವರಸನು ಕ್ರಿ.ಶ. 1356ರಲ್ಲಿ ನಿಧನವಾದನು ಎಂದೂ ಹೇಳಲಾಗಿದೆ. ಕ್ರಿ.ಶ. 1367ರಲ್ಲಿ ಶ್ರುತಮುನಿಯ ಮಗನಾದ ಚಂದ್ರಕೀರ್ತಿವ್ರತಿಯು ಸಂನ್ಯಸನ ವ್ರತದಿಂದ ಕಲ್ಲೇಹ ಪಟ್ಟಣದಲ್ಲಿ ದೇಹವನ್ನು ತ್ಯಜಿಸಿದನು. ಕ್ರಿ.ಶ. 1371ರಲ್ಲಿ ಪೆರುಮಾಳು ದೇವರಸರಾಣಿ ಅಲ್ಲಾಂಬ ಕೊನೆಯುಸಿರೆಳೆದಳು, ಜೈನಗುರು ಶ್ರುತಮುನಿಯೂ ಕಾಲ

ವಾದರು ಎಂದು ಈ ಶಾಸನವು ತಿಳಿಸುತ್ತದೆ. ಇದೊಂದು ನಿಷಿಧಿಗೆ ಶಾಸನವಾಗಿದೆ.

**2. ಹುಲ್ಲಹಳ್ಳಿ ಶಾಸನ, ಸಂಖ್ಯೆ 138 (ಎ.ಕ. III ನಂಜನಗೂಡು 65) ವರದರಾಜಸ್ವಾಮಿ ದೇವಾಲಯದ ಹೊರ ಪ್ರಾಕಾರಕ್ಕೆ ಈಶಾನ್ಯದಲ್ಲಿ ನೆಟ್ಟಕಲ್ಲು.**

ಈ ಶಿಲಾಶಾಸನವು ಕ್ರಿ.ಶ. 1332ರ ಕಾಲಕ್ಕೆ ಸೇರಿದ್ದು. ಹೊಯ್ಸಳ ಚಕ್ರವರ್ತಿಯಾದ ಮೂರನೇ ವೀರಬಲ್ಲಾಳನ ದಂಡನಾಯಕನಾದ ಮಾಧವ ದಣ್ಣಾಯಕನ ಮಗನಾದ ಕೇತಯ ದಣ್ಣಾಯಕನು ತೆರಕಣಾಂಬಿಯಿಂದ ಹದಿನಾಲ್ಕು ನಾಡುಗಳನ್ನು ನೋಡಿಕೊಳ್ಳುತ್ತಿದ್ದನು. ಅದರಲ್ಲಿ ಹಾರುಗುತ್ತಿಗೆಗೆ ಸೇರಿದ ಹುಲ್ಲಹಳ್ಳಿ ನಾಡಿನಲ್ಲಿರುವ ಅಲ್ಲಾಳನಾಥ (ವರದರಾಜ) ಸ್ವಾಮಿಗೆ ಕೇತವ್ವ ಹಳ್ಳಿಯನ್ನು ಕೊಡುಗೆಯಾಗಿ ನೀಡಿದನು ಎಂಬ ಅಂಶವು ಈ ಶಾಸನದಿಂದ ತಿಳಿದುಬರುತ್ತದೆ.

**3 ಹುಲ್ಲಹಳ್ಳಿ ಶಾಸನ, ಸಂಖ್ಯೆ 139 (ಎ.ಕ. III ನಂಜನಗೂಡು 66) ಮಲ್ಲೇಶ್ವರ ದೇವಾಲಯದಲ್ಲಿ ನೆಟ್ಟಿರುವ ಕಲ್ಲು**

ಕ್ರಿ.ಶ. 1619ರಲ್ಲಿ ಬಸವರಾಜ ಒಡೆಯನು ಮಲ್ಲಿಕಸ್ವಾಮಿ ದೇವಾಲಯಕ್ಕೆ ಕೊಡುಗೆಯನ್ನು ನೀಡಿದ್ದಾನೆ ಎಂದು ಈ ಶಿಲಾಶಾಸನವು ತಿಳಿಸುತ್ತದೆ. ವಿವರವು ಸಾಕಷ್ಟಿಲ್ಲ.

**4. ಹುಲ್ಲಹಳ್ಳಿ ಶಾಸನ, ಸಂಖ್ಯೆ 140 (ಎಂ.ಎ.ಆರ್. 1929-48) ವರದರಾಜ ದೇವಾಲಯದ ಒಳಪ್ರಾಕಾರದ ಮೇಲಣ ಹೊದಿಕೆ ಕಲ್ಲು.**

ಕ್ರಿ.ಶ. 1634ರಲ್ಲಿ ಬಸವರಾಜ ಒಡೆಯನು ಶ್ರೀ ಅಲ್ಲಾಳನಾಥ (ವರದರಾಜ) ಸ್ವಾಮಿಗೆ ಸರ್ವಮಾನ್ಯವಾಗಿ ನೀಡಿದೆ ಎನ್ನಲಾಗಿದೆ. ಇಲ್ಲಿಯೂ ವಿವರವಿಲ್ಲ.

**5. ವಿರಕ್ತಮಠ, ಹುಲ್ಲಹಳ್ಳಿ ಇಲ್ಲಿನ ತಾಳೆಗರಿಯೊಂದರ ಬರಹ.**

ಈ ತಾಳೆಗರಿ ಬರಹದಿಂದ ಹುಲ್ಲಹಳ್ಳಿಯು ಹರಿಣಪುರವೆಂಬ ಹೆಸರನ್ನು ಹೊಂದಿತ್ತು ಮತ್ತು ಶಾಂತಮಲ್ಲಿಕಾರ್ಜುನ ಕ್ಷೇತ್ರವೆಂದು ಪ್ರಸಿದ್ಧ

ವಾಗಿತ್ತು ಎಂದು ತಿಳಿದುಬರುತ್ತದೆ. ಈ ಮಠದ ರುದ್ರಶಿವಯೋಗಿಗಳು 'ಜ್ಞಾನ ಕ್ರಿಯಾರೂಪ ಅಷ್ಟಾವರಣ ಪಂಚಾಚಾರ ಸಿದ್ಧಾಂತ ಪ್ರಕರಣ' ಎಂಬ ಗ್ರಂಥವನ್ನು ಬರೆದಿದ್ದರು ಎಂದು ತಾಳೆಗರಿ ತಿಳಿಸುತ್ತದೆ. ಇದರ ಕಾಲ ಕ್ರಿ.ಶ 1723.

ಮೇಲ್ಕಂಡ ಶಿಲಾಶಾಸನಗಳು ಎಪಿಗ್ರಾಫಿಯಾ ಕರ್ನಾಟಿಕಾ (ಸಂಪುಟ ಮೂರು) ಎಂಬ ಗ್ರಂಥದಲ್ಲೂ, ತಾಳೆಗರಿಯ ಬರಹವು ಡಾ.ಜಿ. ಮರುಳು ಸಿದ್ದಯ್ಯನವರ ಸಂಪಾದನಾಗ್ರಂಥ ಸಂಸ್ಕೃತ 'ಪ್ರಭುಲೀಲೆ' ಎಂಬಲ್ಲಿಯೂ ಅಚ್ಚಾಗಿರುವುದು. ಆದಕಾರಣ ಇವುಗಳ ಪೂರ್ಣಪಾಠವನ್ನು ಕೊಡದೆ ಕೇವಲ ಸಾರಾಂಶವನ್ನು ಕೊಡಲಾಗಿದೆ.

### 6. ಹುಲ್ಲಹಳ್ಳಿಯ ತಾಮ್ರಶಾಸನ

ಹುಲ್ಲಹಳ್ಳಿಗೆ ಸೇರಿದ ಕಂಬದಕೊಲ್ಲಿಯ ಸುಬ್ಬಣ್ಣನವರ ಜಮೀನಿನಲ್ಲಿ ದೊರೆತ ತಾಮ್ರಶಾಸನ

1. ತಾಮ್ರಶಾಸನ ದೊರೆತ ಕಾಲ —1981
2. ರಾಜವಂಶ—ತಲಕಾಡು ಗಂಗರು
3. ರಾಜ—ಮುಷ್ಕರ
4. ಶಾಸನಕಾಲ—7ನೆಯ ಶತಮಾನದ ಪ್ರಾರಂಭ
5. ಶಾಸನದ ಲಿಪಿ —ಪೂರ್ವದ ಹಳೆಗನ್ನಡ
6. ಭಾಷೆ—ಸಂಸ್ಕೃತ
7. ಪ್ರಕಟಣೆ—1. ಜಿ. ಎ. ಶಿವಲಿಂಗಯ್ಯ, ಅಧ್ಯಾಪಕ, ಮರಿಮಲ್ಲಪ್ಪ ಜ್ಯೂನಿಯರ್ ಕಾಲೇಜ್, ಮೈಸೂರು, ಇವರಿಂದ ದಿನಾಂಕ 16-12-84ರಲ್ಲಿ ಕನ್ನಡ ಪ್ರಭ ಪತ್ರಿಕೆಯಲ್ಲಿ ಶಾಸನದ ವಿವರವನ್ನು ಪ್ರಕಟಿಸಿದೆ.
   2. ಡಾ. ಕೆ. ವಿ. ರಮೇಶ್, ಮೈಸೂರು. ತಮ್ಮ ಗ್ರಂಥವೊಂದರಲ್ಲಿ ಪ್ರಸ್ತಾಪಿಸಿದ್ದಾರೆ.
8. ಶಾಸನದ ರಕ್ಷಣೆ—1. ಶಾಸನದ ಮೂಲ ತಾಮ್ರಪ್ರತಿಯು ಶ್ರೀಕ್ಷೇತ್ರ ಧರ್ಮಸ್ಥಳದ ವಸ್ತು ಸಂಗ್ರಹಾಲಯದಲ್ಲಿದೆ.
   2. ಇದರ ನಕಲುಪ್ರತಿ (ಟ್ರೇಸ್ಡ್ ಕಾಪಿ)ಯು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ; ಮೈಸೂರಿನಲ್ಲಿದೆ.

## ಹುಲ್ಲಹಳ್ಳಿಯ ತಾಮ್ರಶಾಸನದ ಪಾಠ

ಒಂದನೇ ಹಲಗೆಯ ಹಿಂಭಾಗ

1. ಸ್ವಸ್ತಿ ಜಿತವ್ಭಗವತಾಗತ ಘನ ಗಗನಾಭೇನ
ಪದ್ಮನಾಭೇನ ಶ್ರೀ ಮಜ್ಜಾಹ್ನವೇಯ ಕುಲಾಮಲವ್ಯೋ
2. ಮಾವಭಾಸನ ಭಾಸ್ಕರಸ್ಯ ಸ್ವಖಾಡ್ಗೈಕ ಪ್ರಹಾರ
ಖಣ್ಡಿತ ಮಹಾ ಶಿಲಾಸ್ತಮ್ಭ ಲಬ್ಧ ಬಲ ಪರಾ
3. ಕ್ರಮ ಯಶಸಃ ದಾರುಣಾರಿಗಣ ವಿದಾರಣ ರಣೋ
ಪಲಬ್ಧ ವ್ರಣ ವಿಭೂಷಣ ವಿಭೂಷಿತಸ್ಯ
4. ಕಾಣ್ವಾಯನಸ ಗೋತ್ರಸ್ಯ ಶ್ರೀಮತ್ಕೊಙ್ಗಣಿ ವರ್ಮ್ಮ ಧರ್ಮ್ಮ
ಮಹಾದಿರಾಜಸ್ಯ ಪುತ್ರಸ್ಯ
ಪಿತುರನ್ವಾ
5. ಗತ ಗುಣಯುಕ್ತಸ್ಯ ವಿದ್ಯಾವಿನಯ ವಿಹಿತವೃತ್ತಸ್ಯ
ಸಮ್ಯಕ್ಪ್ರಜಾಪಾಲನ ಮಾತ್ರಧಿಗತ ರಾಜ್ಯ
6. ಪ್ರಯೋಜನಸ್ಯ ನಾನಾಶಾಸ್ತ್ರಾರ್ತ್ಥ ಸದ್ಭಾವಾದಿ
ಗಮಪ್ರಣಿತಮತಿ ವಿಶೇಷಸ್ಯ ವಿದ್ವತ್ಕವಿಕಾಞ್ಚ

ಎರಡನೇ ಹಲಗೆಯ ಮುಂಭಾಗ

7. ನನಿಕ ಘೋಪಲ ಭೂತಸ್ಯ ವಿಶೇತೋಪ್ಯನವ
ಶೇಷಸ್ಯ ನೀತಿಶಾಸ್ತ್ರ ವಕ್ತೃ ಪ್ರಯೋಕ್ತೃ ಕುಶಲಸ್ಯ
8. ಸುವಿಭಕ್ತ ಭಕ್ತಭೃತ್ಯ ಜನಸ್ಯ ದತ್ತಕ ಸೂತ್ರ
ವೃತ್ತ ಪ್ರಣೀತು ಶ್ರೀ ಮಾಧವ ಮಹಾಧಿರಾಜಸ್ಯಪು
9. ತ್ರಸ್ಯ ಪಿತೃಪೇತ ಮಹಗುಣಯುಕ್ತಸ್ಯ ಅನೇಕ
ಚತುರ್ದನ್ತ ಯುದ್ಧಾವಾಪ್ತ ಚತುರುದಧಿ ಸ
10. ಲಿಲ ಸ್ವಾದಿತಯಶಸ ಸಮದದ್ವಿರದ ಗುರಗಾರೋ
ಹಣಾಶಿ ಶಯೋತ್ಪನ್ನ ತೇಜಸಃ ಧನುರ
11. ಭಿಯೋಗ ಸಮ್ಪಾದಿತ ಸಮ್ಪದ್ವಿಶೇಷನ್ಯ ಶ್ರೀಮದ್ಧರಿವರ್ಮ್ಮ
ಮಹಾಧಿರಾಜ್ಯ ಪುತ್ರಸ್ಯ ಗುರು ಗೋ
12. ಬ್ರಾಹ್ಮಣ ಪೂಜಕಸ್ಯ ನಾರಾಯಣ ಚರಣಾನುಧ್ಯಾ
ತಸ್ಯ ಶ್ರೀ ಮದ್ವಿಷ್ಣುಗೋಪ ಮಹಾಧಿರಾಜಸ್ಯ ಪು

ಎರಡನೇ ಹಲಗೆಯ ಹಿಂಭಾಗ :

13. ತ್ರಸ್ಯ ತ್ರ್ಯಂಬಕ ಚರಣಾವ್ಭೋ ರಾಜಃ ಪವಿತ್ರೀ
ಕೃತೋತ್ತಮಾಂಗಸ್ಯ ವ್ಯಾಯಾಮೋದ್ವೃತ್ತ
ಪೀನಥಿ

14. ನ ಭುಜದ್ವಯಸ್ಯ ಸ್ವಭುಲ ಬಲ ಪರಾಕ್ರಮ
ಕ್ಕ್ರಯ ಕ್ಕ್ರೀತ ರಾಜ್ಯಸ್ಯ ಕ್ಷುತ್ ಕ್ಷಾಮೋಷ್ಠ
ಪಿಶಿತಾಶನ

15. ಪ್ರೀತಿಕರ ನಿಶಿತಧಾರಾ ಸೇ[ಃ] ಕಲಿಯುಗ
ಬಲ ಪಂಕಾವಸನ್ನ ಧರ್ಮ್ಮ ವೃಷೋದ್ಧರಣ
ನಿತ್ಯ ಸ

16. ನ್ನದ್ಧಸ್ಯ ಶ್ರೀಮನ್ಮಾಧವ ಮಹಾಧಿರಾಜಸ್ಯ
ಪುತ್ರಸ್ಯ ವಿಚ್ಛಿನ್ನಾಶ್ವ ಮೇಧಾವಭೃಥಾಭಿಷಿ

17. ಕ್ತ ಶ್ರೀಮತ್ಕದಂಬ ಕುಲಗಗನ ಗಭಸ್ತಿ
ಮಾಲಿನಃ ಶ್ರೀಕೃಷ್ಣವರ್ಮ್ಮ ಮಹಾರಾಜಸ್ಯ
ಪ್ರಿಯಭಾಗಿನೇ

18. ಯಸ್ಯ ಜನನೀ ದೇವತಾಂಕ ಪರ್ಯಂಕ
ಏವಾಧಿಗತ ರಾಜ್ಯಾಭಿಷೇಕಸ್ಯ ವಿಜೃಮ್ಭಮಾಣ
ಶಕ್ತಿ ತ್ರ

ಮೂರನೇ ಹಲಗೆಯ ಮುಂಭಾಗ :

19. ಯಸ್ಯ ಪರಸ್ಪರಾ ನವ ಮರ್ದ್ದನೋಪಭುಜ್ಯ
ಮಾನತ್ರಿ ವರ್ಗ್ಗಸಾರಸ್ಯ ಅಸಂಭ್ರಮಾವನ ಮಿತ
ಸಮ

20. ಸ್ತ ಸಾಮನ್ತ ಮಣ್ಡಲಸ್ಯ ನಿರನ್ತರ ಪ್ರೇಮ ಬಹು
ಮಾನಾನುರಕ್ತ ಪ್ರಕೃತಿ ವರ್ಗ್ಗಸ್ಯ ವಿದ್ಯಾ ವಿನಯಾತಿ ಶ

21. ಯ ಪರಿಪೂತಾನ್ತರಾತ್ಮನಃ ಕಾರ್ತ್ತಯುಗೀನ
ರಾಜ ಚರಿತಾವಲಮ್ಬಿನ ಅನೇಕ ಸಮರ ವಿಜ

22. ಯೋ ಪಾರ್ಜಿತ ವಿಪುಲಯಶಃ ಕ್ಷೀರೋದೈ
ಕಾರ್ಣ್ಣವೀಕೃತ ಭುವನತ್ರಯಸ್ಯ ನಿರವಗ್ರಹ
ಪ್ರದಾ

23. ನ ಶೌಯ್ಯ್ಯರ್ಸ್ಯ ಅವಿಷಸ್ಯ ಪರಾಕ್ಕ್ರಮಾಕ್ರಾ
ನ್ತ ಪ್ರತಿರಾಜ ಮಸ್ತಕಾರ್ಪ್ಪಿತಾ ಪ್ರತಿಹತ
ಶಾಸನಸ್ಯ
24. ವಿದ್ವತ್ಸು ಪ್ರಥಮಗಣಸ್ಯ ಶ್ರೀಮತ್ಕೊಂಗಣಿ
ಮಹಾಧಿರಾಜಸ್ಯ ಅವಿನೀತ ನಾಮ್ನಃ ಪುತ್ರೇಣ
ಮೂರನೇ ಹಲಗೆಯ ಹಿಂಭಾಗ :
25. ಪುನ್ನಾಟರಾಜಸ್ಕನ್ದ ವರ್ಮ್ಮ ಪ್ರಿಯ ಪುತ್ರಿಕಾ
ಜನ್ಮನಾ ಸ್ವಗುರು ಗುಣಾನು ಗಾಮಿನಾ ಪಿತ್ರಾ
ಪರಸುತ ಸ
26. ಮಾರ್ಜಿತಯಾಪಿ ಲಕ್ಷ್ಮ್ಯಾ ಸ್ವಯಮಭಿ ಪ್ರ
ತ್ಯಾಲಿಙ್ಗತ ವಿಪುಲ ವಕ್ಷಸ್ಥಲಸ್ಯ ವಿಜೃಮ್ಭ
ಮಾಣ ಶಕ್ತಿ
27. ತ್ರಯೋಪನಮಿತ ಸಮಸ್ತ ಸಾಮನ್ತ ಮಣ್ಡ
ಲಸ್ಯ ಅನ್ದರಿಯ ಅಲತ್ತೂರ ಪೊರುಳಱ
ಅ ಪೆನ್ನ
28. ಗರಾದ್ಯನೇಕ ಸಮರ ಮುಖ ಮಖಾಹೂತ
ಪ್ರಪಾತ ಶೂರ ಪುರುಷ ಪಶೂ ಪಹಾರ ವಿಘಸ
ವಿಹಸ್ತೀ
29. ಕೃತ ಕೃತಾನ್ತಾಗ್ನಿ ಮುಖಸ್ಯ ಶಬ್ದಾವತಾರ ಕಾರ
ಸ್ಯ ದೇವ ಭಾರತೀ ನಿಬದ್ಧ ವಡ್ಡ ಕಥಸ್ಯ ಕಿರಾತಾ
ಜು್ರ
30. ನೀಯೇ ಪಂಞ್ಚದಶ ಸರ್ಗ್ಗ ಟೀಕಾಕಾರಸ್ಯ
ದುರ್ವ್ವಿನೀತ ನಾಮ ಧೇಯಸ್ಯ ಸಮಸ್ತ ಪಾಣ್ಡ್ಯಾಡ
ಪು
ನಾಲ್ಕನೇ ಹಲಗೆಯ ಮುಂಭಾಗ :
31. ನ್ನಾಡಾಧಿಪತಿ ನಾವೈವಸ್ವತೇನೇವ ಮನೋ
ವ್ವರ್ಣ್ಣಾ ಶ್ರಮಾಭಿ ರಕ್ಷಿಣಃ ದಕ್ಷಿಣಾನ್ದಿ ಶಮಭಿ
ಗೋಪ್ತುಂ ಪ
32. ಯ್ಯಾಪ್ತವ್ರತಃ ಪ್ರಾತಿಜನೀನಸ್ಯ ಸುಪ್ರಜಸಃ

ಪುತ್ರೇಣ ಉರಗ ಪುರಾಧಿಪ ಪರಮ ಕ್ಷತ್ರಿಯಂ
ವಾಳ
33. ಕುಲತಿಲಕ 'ಶ್ರೀ ದಗ್ಧ ಚರಣ ಸನ್ನಾತ ಪ್ರಸೂತ
ವಸುಮತೀಂದ್ರ ಸುತಾ ಸಮ್ಭವೇನ ದುರ್ದ್ದಾನ್ತ
ವಿಮರ್ದ್ದ
34. ನಮ್ಯುದಿತ ವಿನಮ್ರ ವಿವಿಧ ವಿಶ್ವಂಭರೇಶ
ಮೌಲಿಮಾಲಾ ಮಕರನ್ದ ಪುಞ್ಜ ಪಿಞ್ಜರೀಕ್ರಿಯಮಾ
35. ಣ ಚರಣಯುಗಳ ನಳಿನೇನ ಮಕರ ಕೇತ
ನಾಯಾಸ್ಯ ಮಾನವಾ ಮಲೀಚನಾ ವಿಲೀಚನ
ಶರ ಶರವ್ಯ
36. ಜಾತೇನ ಶರೀರಿಣಾ ಧರ್ಮ್ಮೇಣ ಶ್ರೀಪೃಥಿವೀ
ಕೊಂಗಣಿ ರಾಜೇನ ಪ್ರತೀತ ಮುಷ್ಕರ ದ್ವಿತೀಯ
ನಾಮ ಧೇಯೇನ
ನಾಲ್ಕನೇ ಹಲಗೆಯ ಹಿಂಭಾಗ :
37. ಸರ್ವ್ವ ವಿದ್ಯಾ ಪಾರಗೇಣ ವಿಶೇಷತಾ ನೀತಿಶಾಸ್ತ್ರ
ನಿಪುಣ ಬುದ್ಧಿನಾ ಕಿಂ ಬಹುನಾ ಸಕಲ ಸಂಪದಾ
38. ಧಾರ ಭೂವೇನ ತೈತ್ತಿರಿಯ ಚರಣಾಯ
ಪ್ರಾವಚನ ಕಲ್ಪಾಯ ಕುಮ್ಭ ಶರ್ಮ್ಮಣೇ ಕಪ್ಪಸಿ
ದಕ್ಷಿಣ ತ
39. ಟೇ ಕಿಱು ಮೊಱತ ಕೊಱು ನಾಮ ಗ್ರಾಮ
ಕಾಶ್ಯಪ ಗೋತ್ರಾಯ ಉದಕ ಪೂರ್ವ್ವ ಯಥಾವಿಧಿ
ಪ್ರಾದಾ
40. ಯಿ ಸಕಲ ಮಹಾಮನುಷ್ಯ ಪ್ರತ್ಯಕ್ಷಂ ಸಸರ್ವ್ವ
ಪರಿಹಾರಂ ವೈಶಾಖ ಮಾಸೇ ಪ್ರಶಸ್ತ ತಿಥಿ
41. ಮುಹೂರ್ತ್ತೇ ನಕ್ಷತ್ರೇ ದಿನೇ ಅಪಿ ಚಾತ್ರ
ಮನು ಗೀತಾ ಶ್ಲೋಕಾ ಸ್ವದತ್ತಾಂ ಪರದತ್ತಾಂ
ವಾಯೋ ಹರೇತ ವಸುನ್ಧರಾಂ
42. ಷಷ್ಠಿ ವರ್ಷ ಸಹಸ್ರಾಣಿ ಘೋರೇ ತಮಸಿ
ವರ್ತ್ತತೇ ಬಹುಭಿರ್ವ್ವಸುಧಾ ದತ್ತಾ ಬಹು

ಭಿಶ್ಚಾಭಿ ಪಾಲಿತ

ಐದನೇ ಹಲಗೆಯ ಮುಂಭಾಗ :

43. ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ
ಫಲಮ್ । ಸ್ವನ್ದಾತುಂ ಸುಮಹಚ್ಛಖ್ಯಂ ದುಃಖಮನ್ಯಾ
44. ರ್ಥ ಪಾಲಿತಂ ದಾನಂ ವಾ ಪಾಲನಂ ವೇತಿ ದಾನಾ
ಚ್ಛ್ರೇಯೋನು ಪಾಲನಮ್॥ ಅದ್ಭಿರ್ದತಂ
ತ್ರಿಭಿರ್ಭುಕ್ತಂ ಸದ್ಭಿಶ್ಚ
45. ಪರಿ ಪಾಲಿತಂ ಏತಾನಿನ್ಯ ವರ್ತ್ತನ್ತೇ ಪೂರ್ವ
ರಾಜ ಕೃತಾ ನಿಚ॥ ಬ್ರಹ್ಮಸ್ವನ್ತು ವಿಷಂ ಘೋರಂ
ನ್ನ ವಿ
46. ಷಂ ಮುಚ್ಯತೇ ವಿಷಮೇ ಕಾಕಿನಂ ಹನ್ತಿ ಬ್ರಹ್ಮ
ಸ್ವಂ ಪುತ್ರ ಪೌತ್ರಿಕಂ ॥ ಕೂನಾಚಾಯ್ರ್ಯಾನ್ವಯೇನ
47. ಕೊಙ್ಗಣಿ ಪೆನ್ದರ್ಟ್ಟರೇಣೇ ದನ್ತಾ ಬ್ರಶಾಸನಂ
ಶಾಸನಂ ಲಿಖಿತ ತಸ್ಮಾದ್ದ್ವಾದಶ ಖಣ್ಡು ಕಾಚಾಪ
ಮಾತ್ರಂ ಕ್ಷೇತ್ರ ಸು
48. ಕ್ಷೇತ್ರಂ ಬ್ರಹ್ಮದೇಯ ಕ್ರಮೇಣ ದತ್ತಂ ॥

## ಹುಲ್ಲಹಳ್ಳಿ ತಾಮ್ರ ಶಾಸನದ ಕನ್ನಡಾನುವಾದ

ಮೋಡವಿಲ್ಲದೆ ಸ್ವಚ್ಛವಾಗಿರುವ ಆಕಾಶದಂತೆ ನಿರ್ಮಲವಾದ ಪದ್ಮನಾಭನು ಜಯವಾಗಲಿ. ಶ್ರೀ ಮಜ್ಜಾಹ್ನವೇಯ ಕುಲವೆಂಬ ಆಕಾಶ ದಲ್ಲಿ ಕಂಗೊಳಿಸುವ ಸೂರ್ಯನಂತಿರುವ ತನ್ನ ಖಡ್ಗದ ನಿರಂತರ ಪ್ರಹಾರ ದಿಂದ ಮಹತ್ತರವಾದ ಶಿಲಾಸ್ತಂಭಗಳನ್ನು ತನ್ನ ಶಕ್ತಿ ಪರಾಕ್ರಮಗಳಿಂದ ತರಿದು ಯಶೋವಂತನಾದ, ಭಯಂಕರನಾದ, ಯುದ್ಧರಂಗದಲ್ಲಿ ಶತ್ರು ಸಮೂಹವನ್ನು ಭೇದಿಸಿದುದರಿಂದ ಉಂಟಾದ ಗಾಯಗಳೇ ಅಲಂಕಾರ ವಾಗಿ ಭೂಷಿತನಾದ, ಕಾಣ್ವಾಯನ ಗೋತ್ರದವನಾದ, ಶ್ರೀಮತ್ ಕೊಂಗಣಿವರ್ಮ ಧರ್ಮಮಹಾಧಿರಾಜನ ಮಗನಾದ ತಂದೆಯಿಂದ ಪರಂಪರಾಗತವಾಗಿ ಬಂದ ಸುಗುಣಗಳಿಂದ ಕೂಡಿರುವ ವಿದ್ಯಾವಿನಯ ಗಳಿಂದ ಕೂಡಿದ ಅನೇಕ ಯೋಜನೆಗಳಿಂದ ಉತ್ತಮ ಪ್ರಜಾಪಾಲನೆಯೇ ಮುಖ್ಯೋದ್ದೇಶವುಳ್ಳ ರಾಜ್ಯವನ್ನು ಪಡೆದಿರುವ ಅನೇಕ ಶಾಸ್ತ್ರಾರ್ಥಗಳ

ಸದ್ಭಾವನೆಗಳಿಂದ ಉಂಟಾದ ಬುದ್ಧಿ ಚಾತುರ್ಯವನ್ನುಳ್ಳ, ವಿದ್ವತ್ಕವಿಗಳೆಂಬ ಚಿನ್ನಕ್ಕೆ ಒರೆಗಲ್ಲಿನಂತಿರುವ ವಿಶೇಷವಾಗಿ ಪ್ರಾಚೀನವಾಗಿ ಇಂದಿಗೂ ಉಪಲಬ್ಧವಾದ ನೀತಿಶಾಸ್ತ್ರಗಳನ್ನು ಹೇಳುವುದರಲ್ಲೂ ಮತ್ತು ಆಚರಣೆಯಲ್ಲೂ ಕುಶಲನಾದ, ನಿಷ್ಠಾವಂತ ಸೇವಕ ಜನರಿಂದ ಸೇವೆಯನ್ನು ಕೈಗೊಳ್ಳುತ್ತಿರುವ, ದತ್ತಕ ಸೂತ್ರಕ್ಕೆ ವೃತ್ತಿಯನ್ನು ಬರೆದಂತಹ ಶ್ರೀ ಮಾಧವ ಮಹಾಧಿರಾಜನ ಮಗನಾದ, ತಂದೆ ತಾತಂದಿರ ಕ್ಷಾತ್ರ ಗುಣಗಳಿಂದ ಕೂಡಿದ, ಮದಿಸಿದ ನಾಲ್ಕು ಆನೆಗಳೊಡನೆ ಯುದ್ಧ ಮಾಡಿ, ಚತುಸ್ಸಮುದ್ರಗಳವರೆಗೂ ಹಬ್ಬಿರುವ ಕೀರ್ತಿಯುಳ್ಳವನಾದ, ಮದಿಸಿದ ಆನೆ ಕುದುರೆಗಳನ್ನೇರಿದುದರಿಂದ ಉಂಟಾದ ಉತ್ಕೃಷ್ಟವಾದ ತೇಜಸ್ಸನ್ನುಳ್ಳವನಾದ, ಧನುರ್ಯುದ್ಧದಿಂದ ವಿಶೇಷವಾಗಿ ಸಂಪತ್ತನ್ನುಗಳಿಸಿದವನಾದ, ಶ್ರೀಮತ್ ಹರಿವರ್ಮ ಮಹಾಧಿರಾಜನ ಪುತ್ರನಾದ, ಗುರು ಗೋಬ್ರಾಹ್ಮಣ ಪೂಜಕನಾದ, ನಾರಾಯಣನ ಪಾದಗಳನ್ನು ಧ್ಯಾನಿಸುವವನಾದ, ಶ್ರೀಮತ್ ವಿಷ್ಣುಗೋಪ ಮಹಾಧಿರಾಜನ ಪುತ್ರನಾದ, ಈಶ್ವರನ ಚರಣ ಕಮಲಗಳ ಧೂಳಿನಿಂದ ಪವಿತ್ರವಾದ ಶಿರಸ್ಸುಳ್ಳವನಾದ, ವ್ಯಾಯಾಮದಿಂದುಂಟಾದ ಉಬ್ಬಿದ ಮತ್ತು ಕಠಿಣವಾದ ಭುಜಗಳನ್ನುಳ್ಳವನಾದ, ತನ್ನ ಭುಜಬಲ ಪರಾಕ್ರಮದಿಂದಲೇ ರಾಜ್ಯವನ್ನು ಗಳಿಸಿಕೊಂಡವನಾದ, ತೀಕ್ಷ್ಣವಾದ ಆಯುಧವನ್ನುಳ್ಳವನಾದ, ಕಲಿಪ್ರಭಾವದಿಂದ ಕೆಸರಿನಲ್ಲಿ ಬಿದ್ದ ಧರ್ಮವೆಂಬ ಎತ್ತನ್ನು ಮೇಲೆತ್ತುವುದರಲ್ಲಿ ಉದ್ಯುಕ್ತನಾದ ಶ್ರೀಮತ್ ಮಾಧವ ಮಹಾಧಿರಾಜನ ಪುತ್ರನಾದ, ಅವಿಚ್ಛಿನ್ನವಾದ ಅಶ್ವಮೇಧಯಾಗದ ಅವಭೃತಗಳಿಂದ ಅಭಿಷಿಕ್ತನಾದ, ಶ್ರೀಮತ್ ಕದಂಬ ಕುಲವೆಂಬ ಗಗನಕ್ಕೆ ಸೂರ್ಯನಂತಿರುವ ಶ್ರೀಕೃಷ್ಣವರ್ಮ ಮಹಾರಾಜನ ಪ್ರೀತಿಪಾತ್ರನಾದ, ಸೋದರಳಿಯನಾದ, ದೇವತಾ ಸದೃಶಳಾದ ತಾಯಿಯ ಅಂಕವೆಂಬ ಪರ್ಯಂಕದಿಂದ ಪಡೆಯಲ್ಪಟ್ಟ ರಾಜ್ಯದಲ್ಲಿ ಅಭಿಷಿಕ್ತನಾದ, ಶಕ್ತಿತ್ರಯಗಳಿಂದ ವಿರಾಜಿಸುವವನಾದ, ಪರಸ್ಪರ ಹಿಂಸಿಸದೆ ಪಡೆದ ತ್ರಿವರ್ಗ ಸಾರವನ್ನುಳ್ಳವನಾದ, ಸ್ವಾಭಾವಿಕವಾಗಿಯೇ ನಮಸ್ಕರಿಸಲ್ಪಟ್ಟ ಸಮಸ್ತ ಸಾಮಂತ ಸಮೂಹವನ್ನುಳ್ಳವನಾದ, ನಿರಂತರವಾಗಿ ಪ್ರೇಮವೆಂಬ ಬಹುಮಾನದಿಂದ ಅನುರಕ್ತವಾದ ಪ್ರಜಾಸಮೂಹವನ್ನುಳ್ಳವನಾದ, ವಿದ್ಯಾ ವಿನಯಗಳಿಂದ ಅತಿಶಯವಾಗಿ ಪವಿತ್ರವಾದ ಮನಸ್ಸುಳ್ಳವನಾದ, ಕೃತಯುಗದ ರಾಜರುಗಳ ಚಾರಿತ್ರಗಳನ್ನು ಅವಲಂಬಿಸಿರುವವನಾದ, ಅನೇಕ

ಯುದ್ಧಗಳಲ್ಲಿ ಉಂಟಾದ ವಿಜಯಗಳಿಂದ ಸಂಪಾದಿಸಲ್ಪಟ್ಟ ಅಧಿಕವಾದ ಕೀರ್ತಿಯಿಂದ ಕೂಡಿದವನಾದ, ಸುಭಿಕ್ಷತೆಯಿಂದ ಪರಾಕ್ರಮಿ ಎನಿಸಿ ಕೊಂಡ, ಅಧಿಕವಾದ ಪರಾಕ್ರಮದಿಂದ ಆಕ್ರಮಿಸಲ್ಪಟ್ಟ ಶತ್ರುರಾಜರ ಮಸ್ತಕಗಳಿಂದ ಅರ್ಪಿಸಲ್ಪಟ್ಟವನಾದ, ಅಪ್ರತಿಹತವಾದ ಆಜ್ಞೆಯುಳ್ಳವ ನಾದ, ವಿದ್ವಾಂಸರಲ್ಲಿ ಮೊದಲಿಗನೆನಿಸಿದ ಶ್ರೀಮತ್ ಕೊಂಗಣಿ ಮಹಾಧಿ ರಾಜನಾದ ಅವಿನೀತನೆಂಬುವನ ಮಗನಾದ ಪುನ್ನಟದೇಶದ ರಾಜ ಸ್ಕಂದ ವರ್ಮನ ಪ್ರೀತಿಯ ಮಗಳ ಮಗನಾದ ತನ್ನ ಗುರುಹಿರಿಯರ ಗುಣಗಳನ್ನು ಅನುಸರಿಸಿರುವವನಾದ, ತನ್ನ ತಂದೆಯ ಇಚ್ಛೆಯ ಮೇರೆಗೆ ವಿವಾಹವನ್ನು ಮಾಡಿಕೊಂಡವನಾದ, ಸ್ವಯಂ ತಾನು ರಾಜ್ಯಲಕ್ಷ್ಮಿಯಿಂದ ಅಲಂಕರಿಸ ಲ್ಪಟ್ಟ, ವಿಪುಲನಾದ ವಕ್ಷಸ್ಥಳವನ್ನುಳ್ಳವನಾದ, ಎದ್ದು ಕಾಣುವ ಶಕ್ತಿ ತ್ರಯಗಳಿಂದ ನಮಸ್ಕರಿಸಲ್ಪಡುವ ಸಕಲ ಸಾಮಂತ ಸಮೂಹವನ್ನುಳ್ಳವ ನಾದ, ಆಂದರಿಯ, ಅಲತ್ತೂರು, ಪೊರುಳೆರೆಯ ಮತ್ತು ಪೆರ್ನಗರಗಳೇ ಮೊದಲಾದ ಅನೇಕ ದೇಶಗಳ ಮೇಲೆ ನಡೆದ ಯುದ್ಧವೆಂಬ ಯಜ್ಞದಲ್ಲಿ ವಧಿಸಲ್ಪಟ್ಟ ಶೂರಪುರುಷರೆಂಬ ಪಶುಗಳನ್ನು ಆಹುತಿ ಕೊಟ್ಟು ಉಳಿದ ಯಜ್ಞಶೇಷದಿಂದ ಕೃತಾಂತಾಗ್ನಿ ಮುಖನಾದ, ಶಬ್ದಾವತಾರ ಕರ್ತೃವಾದ, ಸಂಸ್ಕೃತದಲ್ಲಿ ವಡ್ಡ ಕಥೆಯನ್ನು ರಚಿಸಿದ, ಕಿರಾತಾರ್ಜುನೀಯ ಕಾವ್ಯದ ಹದಿನೈದನೇ ಸರ್ಗಕ್ಕೆ ವ್ಯಾಖ್ಯಾನ ಮಾಡಿರುವ ದುರ್ವಿನೀತನೆಂಬ ಮಹಾ ರಾಜನ ಸಮಸ್ತವಾದ ಪಾನ್ನಾಡ ಮತ್ತು ಪುನ್ನಾಡು ದೇಶಗಳಿಗೆ ಅಧಿಪತಿ ಯಾಗಿರುವ ಕಾರಣದಿಂದಲೇ ತನ್ನ ಮನಃಪೂರ್ವಕವಾಗಿ ವರ್ಣಾಶ್ರಮ ವನ್ನು ರಕ್ಷಿಸುವಂತಹ, ದಕ್ಷಿಣ ದಿಕ್ಕನ್ನು ರಕ್ಷಿಸಲು ಸಮರ್ಥನಾಗಿರುವ ಸುಪ್ರಜಸ್ಸೆಂಬುವನ ಮಗನಾದ, ಉರಗ ಪುರಾಧಿಪತಿಯಾದ, ಪ್ರಸಿದ್ಧನಾದ ಕ್ಷತ್ರಿಯೋತ್ಪನ್ನನಾದ ಚೋಳ ಕುಲಕ್ಕೆ ತಿಲಕಪ್ರಾಯನಾದ ಕರಿಕಾಲ ಚೋಳನ ವಂಶದಲ್ಲಿ ಹುಟ್ಟಿದ ವಸುಮತೀಂದ್ರನ ಮಗಳ ಮಗನಾದ, ಜಯಿಸಲಶಕ್ಯನಾದ ಕ್ಷತಿ ಯರಿಂದ ಮರ್ದನದಿಂದ ಮೆತ್ತಗಾಗಿ ತಲೆಬಾಗಿಸಿ ಕೊಂಡವನಾದ, ರಾಜರುಗಳ ತಲೆಯಲ್ಲಿರುವ ಪುಷ್ಪಮಾಲೆಗಳ ಮಕರಂದ ಸಮೂಹದಿಂದ ಹೊಂಬಣ್ಣವಾದ ಕಮಲಗಳುಳ್ಳವನಾದ, ಮನ್ಮಥನಿಂದ ಕಳುಹಿಸಲ್ಪಟ್ಟ ಸ್ತ್ರೀಯರ ಕಣ್ಣುಗಳೆಂಬ ಬಾಣಗಳಿಗೆ ಗುರಿಯಾದ ಶರೀರ ವನ್ನುಳ್ಳವನಾದ, ಧರ್ಮ ಸ್ವರೂಪನಾದ ಶ್ರೀ ಪೃಥ್ವೀ ಕೊಂಗಣಿರಾಜ ನಾದ ಮುಷ್ಕರನೆಂಬ ಮತ್ತೊಂದು ಹೆಸರಿನಿಂದ ಪ್ರಸಿದ್ಧನಾದ, ಸರ್ವ

ವಿದ್ಯಾಪಾರಂಗತನಾದ, ವಿಶೇಷವಾಗಿ ನೀತಿಶಾಸ್ತ್ರದಲ್ಲಿ ತೀಕ್ಷ್ಣವಾದ ಬುದ್ಧಿಯುಳ್ಳವನಾದ, ಹೆಚ್ಚೇನು ಹೇಳುವುದು, ಸಕಲ ಸಂಪತ್ತುಗಳಿಗೂ ಆಧಾರನಾದವನಿಂದ, ತೈತ್ತರೀಯ ಶಾಖೋತ್ಪನ್ನನಾದ, ಕಲ್ಪ ಸೂತ್ರದ ಅಧ್ಯಾಪನದಲ್ಲಿ ನಿರತನಾದ, ಕಪಿಲಾನದಿಯ ದಕ್ಷಿಣದಡದ 'ಕಿರುವೊರೆ ಕೊಳಿ' ಎಂಬ ಗ್ರಾಮದವನಾದ, ಕಾಶ್ಯಪಗೋತ್ರೋತ್ಪನ್ನನಾದ 'ಕುಂಭ ಶರ್ಮ'ನಿಗೆ ಸಕಲ ವೃದ್ಧ ಪೌರರ ಸಮಕ್ಷಮದಲ್ಲಿ ಸಕಲಪಾಪ ಪರಿಹಾರಾರ್ಥವಾಗಿ ವೈಶಾಖಮಾಸದಲ್ಲಿ ಫಲವತ್ತಾದ ಭೂಮಿಯು ಶಾಸ್ತ್ರಾನುಸಾರ ಧಾರಾ ಪೂರ್ವಕವಾಗಿ ಕೊಡಲ್ಪಟ್ಟಿತು. ಮನು ಸಂಹಿತೆಯಲ್ಲಿ ದಾನಕ್ಕೆ ಪೂರಕವಾದ ಮಾಹಿತಿಃ ತನ್ನಿಂದ ಅಥವಾ ಮತ್ತೊಬ್ಬರಿಂದಾಗಲೀ ಕೊಡಲ್ಪಟ್ಟ ಭೂಮಿಯನ್ನು ಯಾವನು ಅಪಹರಿಸುತ್ತಾನೋ ಅವನು ಅರವತ್ತು ಸಾವಿರ ವರ್ಷಗಳು ಘೋರವಾದ ಪಾಪ ಕೂಪದಲ್ಲಿ ಮುಳುಗಿರುತ್ತಾನೆ.

ಅನೇಕರಿಂದ ಭೂಮಿಯು ದಾನವಾಗಿ ಕೊಡಲ್ಪಟ್ಟಿದೆ. ಅನೇಕರಿಂದ ಈ ಭೂಮಿಯು ಪಾಲಿಸಲ್ಪಟ್ಟಿದೆ. ಯಾರ ಯಾರ ಭೂಮಿಯು ಯಾವಾಗ ಯಾರಲ್ಲಿ ಇರುತ್ತದೋ ಆ ಅವರವರಿಗೇ ಅದರ ಫಲವು. ಆಸ್ತಿಯನ್ನು ಕೊಡುವುದು ಬಹುಸುಲಭ. ಆದರೆ ಮತ್ತೊಬ್ಬರ ಸಂಪತ್ತನ್ನು ರಕ್ಷಿಸುವುದು ಕಷ್ಟ. ದಾನವಾಗಲೀ ಅಥವಾ ರಕ್ಷಣೆಯಾಗಲಿ ಇವೆರಡರಲ್ಲಿ ದಾನಕ್ಕಿಂತ ರಕ್ಷಣೆಯೇ ಶ್ರೇಷ್ಠವಾದುದು.

ಧಾರಾಪೂರ್ವಕವಾಗಿ ಕೊಡಲ್ಪಟ್ಟ ಭೂಮಿಯು ವಂಶಪಾರಂಪರ್ಯವಾಗಿ ಅನುಭವಿಸಲ್ಪಡಬೇಕು. ಸಜ್ಜನರಿಂದ ಈ ಭೂಮಿಯು ರಕ್ಷಿಸಲ್ಪಡಬೇಕು. ಇವುಗಳೂ ಮತ್ತು ಹಿಂದಿನಿಂದಲೂ ರಾಜರುಗಳಿಂದ ಆಚರಿಸಲ್ಪಟ್ಟ ಆಚರಣೆಗಳೂ ನಿಂತುಹೋಗಲಾರವು. ಬ್ರಹ್ಮಸ್ವತ್ತೆನ್ನುವುದು ಭಯಂಕರವಾದ ವಿಷ. ವಿಷವಾದರೋ ಅದು ವಿಷವಲ್ಲ. ಕೇವಲ ಒಬ್ಬನನ್ನು ಮಾತ್ರ ಕೊಲ್ಲುತ್ತದೆ. ಬ್ರಹ್ಮಸ್ವತ್ತಾದರೋ ಸಂತತಿಯನ್ನೇ ನಾಶ ಮಾಡುತ್ತದೆ.

ಕೂನಾಚಾರ್ಯ ವಂಶನಾದ ಕೊಂಗಣಿ ಪೆರ್ನ್ದಟ್ಟಾರನಿಂದ ಈ ತಾಮ್ರಶಾಸನವು ಬರೆಯಲ್ಪಟ್ಟಿತು. ಅದಕ್ಕಾಗಿ ಅವನಿಗೆ ಹನ್ನೆರಡು ಖಂಡುಗ ಧಾನ್ಯ ಬೆಳೆಯುವ ಫಲವತ್ತಾದ ಭೂಮಿಯನ್ನು ದಾನವಾಗಿ ಕೊಡಲ್ಪಟ್ಟಿತು.

## ಶಾಸನದ ಸ್ವರೂಪ

ಹುಲ್ಲಹಳ್ಳಿ ಶಾಸನವು ಓಲೆಗರಿಯ ಹಾಳೆಗಳಂತೆ ಇದ್ದು, ಐದು ತಾಮ್ರದ ಹಲಗೆಗಳಿಂದ ಕೂಡಿದೆ. ಈ ಹಲಗೆಗಳನ್ನು ಒಂದು ಉಂಗುರದಿಂದ ಬಂಧಿಸಲಾಗಿದೆ. ಉಂಗುರದ ಒಂದು ಕಡೆಗೆ ಗಜ ಲಾಂಛನವುಳ್ಳ ಒಂದು ಗುಂಡಾಗಿರುವ ಲೋಹವು ಬೆಸುಗೆ ಹಾಕಲ್ಪಟ್ಟಿದೆ. ಶಾಸನದ ತಾಮ್ರದ ಹಲಗೆಗಳು 19.6 ಸೆಂ.ಮೀ. ಉದ್ದ, 6 ಸೆಂ. ಮೀ. ಅಗಲ ಮತ್ತು 0.2 ಸೆಂ ಮೀ. ಗಾತ್ರದಿಂದ ಕೂಡಿವೆ. ಗಜ ಲಾಂಛನವುಳ್ಳ ಉಂಗುರವು 140 ಗ್ರಾಂ ತೂಕವಿದೆ. ತಾಮ್ರ ಶಾಸನದ ಒಟ್ಟು ತೂಕ 640 ಗ್ರಾ ಇದೆ. ಉಂಗುರದ ಗಜಲಾಂಛನ ಲೋಹದ ವ್ಯಾಸವು 7.5 ಸೆಂ.ಮೀ. ಇದೆ. ಉಂಗುರದ ವ್ಯಾಸವು 7.2 ಸೆಂ.ಮೀ ಇದ್ದು ಅದರ ಗಾತ್ರವು 2.5 ಸೆಂ.ಮೀ. ಆಗಿರುತ್ತದೆ. ಶಾಸನದ ಅಕ್ಷರಗಳು ಆಳವಾಗಿ ಕೊರೆಯಲ್ಪಟ್ಟಿದ್ದು ಸ್ಪಷ್ಟವಾಗಿದೆ. ಪ್ರತಿಯೊಂದು ಹಲಗೆಯಲ್ಲೂ ಆರು ಸಾಲುಗಳಿವೆ. ಪ್ರತಿಸಾಲಿನಲ್ಲೂ ಅಕ್ಷರಗಳು ಗರಿಷ್ಠ 35 ಮತ್ತು ಕನಿಷ್ಠ 28 ಇದ್ದು ಕಡೆಯ ಸಾಲಿನಲ್ಲಿ (ಕಡೆಯ ಹಲಗೆಯಲ್ಲಿ) 11 ಅಕ್ಷರಗಳು ಮಾತ್ರ ಇವೆ. ಬರಹದ ಸುತ್ತಲೂ ಹಲಗೆಯಲ್ಲಿ ಸ್ಥಳಾವಕಾಶವಿದೆ (Margin)

ಶಾಸನದ ಅಕ್ಷರಗಳು ಪೂರ್ವದ ಹಳೆಗನ್ನಡದಲ್ಲಿದ್ದು, ಭಾಷೆಯು ಸಂಪೂರ್ಣವಾಗಿ ಸಂಸ್ಕೃತ ಗದ್ಯದಲ್ಲಿದೆ.

## ಶಾಸನದ ಮುಖ್ಯಾಂಶಗಳು

ಇದು ಒಂದು ದಾನ ಶಾಸನ. ತಲಕಾಡಿನ ಗಂಗರಸನಾನ ಮುಷ್ಕರನು 'ಕಿರು ಮೊರೆ ಕೊಳಿ' ಎಂಬ ಗ್ರಾಮದ ತೈತ್ತರೀಯ ಶಾಖೆಯ ವಿದ್ವಾಂಸನಾದ 'ಕುಂಭಶರ್ಮಣ'ನೆಂಬ ಬ್ರಾಹ್ಮಣನಿಗೆ ಫಲವತ್ತಾದ ಭೂಮಿಯನ್ನು ದಾನವಾಗಿ ಕೊಡಲಾಗಿದೆ. ನಿಗದಿಯಾದ ದಿನಾಂಕವಿಲ್ಲ. ವೈಶಾಖ ಮಾಸದ ಪ್ರಶಸ್ತ ತಿಥಿಮುಹೂರ್ತ ನಕ್ಷತ್ರದಿನದಂದು ಎಂದು ಮಾತ್ರ ಇದೆ. ಗಂಗರಸರ ವಂಶಾವಳಿ ಇದೆ.

## ಶಾಸನದ ಮಹತ್ವ

ಗಂಗವಂಶವು ಕರ್ನಾಟಕದಲ್ಲಿ ಸುಮಾರು ಕ್ರಿ.ಶ. 350ರಿಂದ ಕ್ರಿ.ಶ.

1005ರವರೆಗೂ ತನ್ನ ಪರಮಾಧಿಕಾರವನ್ನು ಹೊಂದಿದ್ದಿತು. ಪ್ರಸ್ತುತ ಮುಷ್ಕರ ಮಹಾರಾಜನು ಕ್ರಿ.ಶ. 602 ರಿಂದ 620ರವರೆಗೆ ರಾಜ್ಯಭಾರ ಮಾಡಿರುವುದರಿಂದ ಹುಲ್ಲಹಳ್ಳಿ ಶಾಸನವು ಈ ಕಾಲದಲ್ಲೇ ರಚಿಸಿದೆಯೆಂದು ಹೇಳಬಹುದು.

ಮುಷ್ಕರನು ಗಂಗರಸನಾದ ದುರ್ವಿನೀತನ ಮಗನೆಂದು ಮಾತ್ರವೇ ಇದುವರೆಗೆ ತಿಳಿದಿತ್ತು. ಈ ಶಾಸನದಿಂದ ಗಂಗರಸ ದುರ್ವಿನೀತನಿಗೆ, ಕರಿಕಾಲ ಚೋಳ ವಂಶಾನ್ವಯದಲ್ಲಿ ಬಂದ ಸುಪ್ರಜನ ಪುತ್ರನೂ, ಉರಗಪುರಾಧಿಪನೂ (ತಮಿಳುನಾಡಿನ ತಿರುಚನಾಪಳ್ಳಿಯ ಇಂದಿನ ಉಕೆಯೂರ್) ಆದ ವಸುಮತೀಂದ್ರನ ಮಗಳನ್ನು ಕೊಟ್ಟು ವಿವಾಹ ಮಾಡಲಾಗಿತ್ತು. ಈ ಗಂಗರಸ ಮತ್ತು ಚೋಳ ರಾಜಕುಮಾರಿಯರ ಮಗನೇ ಪ್ರಸ್ತುತ ಶಾಸನದ ಮುಷ್ಕರನು-ಎಂಬುದಾಗಿ ಹೊಸ ಚಾರಿತ್ರಿಕ ಅಂಶವು ಮೊದಲಿಗೆ ನಮಗೆ ದೊರೆಯುತ್ತದೆ. ಈ ಶಾಸನವನ್ನು ಬರೆದ ಪೆರ್ದ್ದಟ್ಟಾರ ಎಂಬುವನಿಗೂ ಮುಷ್ಕರ ಮಹಾರಾಜನು ಫಲವತ್ತಾದ ಭೂಮಿಯನ್ನು ದಾನವಾಗಿ ಕೊಟ್ಟಿರುವುದು ಮತ್ತೊಂದು ಚಾರಿತ್ರಿಕ ಅಂಶವಾಗಿದೆ.

# 11. ಹುಲ್ಲಹಳ್ಳಿಯ ಸಂಘ ಸಂಸ್ಥೆಗಳು

## 1. ದೊಡ್ಡ ಪ್ರಮಾಣದ ಪ್ರಾಥಮಿಕ ಪತ್ತಿನ ವ್ಯವಸಾಯ ಸಹಕಾರ ಸಂಘ, ನಿಯಮಿತ

ಮೇಲ್ಕಂಡ ಸಂಘವು ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮಗಳ ವ್ಯವಸಾಯಾಭಿವೃದ್ಧಿಗೆ ಬಹುವಾಗಿ ಶ್ರಮಿಸುತ್ತಿದೆ. ಈ ಸಹಕಾರ ಸಂಘವು 1745 ಸದಸ್ಯರನ್ನು ಹೊಂದಿದ್ದು, ಒಂದು ಲಕ್ಷದ ಮೂವತ್ತೈದು ಸಾವಿರ (1,35000) ಸದಸ್ಯ ಷೇರು ಬಂಡವಾಳವನ್ನೂ ಮತ್ತು 50 ಸಾವಿರ ಸರ್ಕಾರದ ಷೇರು ಬಂಡವಾಳವನ್ನೂ ಹೊಂದಿದೆ.

ಸದಸ್ಯರಿಗೆ ಸಂಘದಿಂದ 20 ಸಾವಿರ ರೂಗಳವರೆಗೂ ಮೂರು ವಾರ್ಷಿಕ ಸಮ ಕಂತುಗಳಲ್ಲಿ ಹಿಂದಿರುಗಿಸುವ ಮಧ್ಯಮಾವಧಿ ಸಾಲವನ್ನೂ (ಎತ್ತು, ಕುರಿ ಕೊಳ್ಳಲು), 125ರೂಗಳವರೆಗೆ ಬಳಕೆ ಸಾಲವನ್ನೂ ಪಡೆಯುವ ಸೌಲಭ್ಯವಿದೆ. ಈ ಸಾಲದ ನೆರವು ಸದಸ್ಯರಿಗೆ ದೊರೆಯಲು 'ಮೈಸೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್'' ಮುಖ್ಯ ಪಾತ್ರವನ್ನು ವಹಿಸುತ್ತದೆ.

ಸಂಘದಲ್ಲಿ ಕ್ರಿಮಿನಾಶಕಗಳು, ನೇಗಿಲು ಮೊದಲಾದ ವ್ಯವಸಾಯದ ವಸ್ತುಗಳು, ರಾಸಾಯನಿಕ ಗೊಬ್ಬರಗಳು ಮತ್ತು ಕಂಟ್ರೋಲ್ ಬಟ್ಟೆಗಳು (ಆಹಾರ ಪದಾರ್ಥಗಳೂ ಮಾರಾಟವಾಗುತ್ತಿದ್ದುವು. ಆದರೆ ಈಗ ನ್ಯಾಯ ಬೆಲೆ ಅಂಗಡಿಯನ್ನು ಸರ್ಕಾರವು ತೆರೆದಿರುವುದರಿಂದ ಈ ಸಂಘದಲ್ಲಿ ಈಗ ಆಹಾರ ಪದಾರ್ಥ ಮಾರಾಟವಾಗುತ್ತಿಲ್ಲ) ಮೊದಲಾದ 50 ಸಾವಿರ ರೂ. ಗಳ ಮೌಲ್ಯವುಳ್ಳ ಪದಾರ್ಥಗಳು ಮಾರಾಟವಾಗುತ್ತವೆ. ಸಂಘದ ಸಿಬ್ಬಂದಿ ವರ್ಗದ ಸಂಬಳ ವಗೈರೆ ಕಳೆದು ಪ್ರತಿವರ್ಷ 18 ಸಾವಿರ ರೂ.ಗಳ ಆದಾಯ ಸಂಘಕ್ಕೆ ದೊರೆಯುತ್ತಿದೆ.

ರಾಜಕೀಯ ಗುಂಪುಗುಳಿತನವಿಲ್ಲದ ಹಿರಿಯರೂ ಅನುಭವಿಗಳೂ ಆದ ಸಹಕಾರ ಮನೋಭಾವನೆಯುಳ್ಳ ಸದಸ್ಯರನ್ನು ಹೊಂದಿರುವ ಈ ಅತ್ಯುತ್ತಮ ಸಹಕಾರ ಸಂಘವು ದಿನಾಂಕ 22–4–1949ರಲ್ಲಿ ಸ್ಥಾಪನೆಗೊಂಡು ದಿವಂಗತ ಶ್ರೀ ಹೆಚ್. ಎಂ. ನಾಗಪ್ಪನವರನ್ನು ಸ್ಥಾಪಕ ಅಧ್ಯಕ್ಷರನ್ನಾಗಿ 1959ರವರೆಗೂ ಹೊಂದಿದ್ದಿತು. ಈ ಹತ್ತು ವರ್ಷಗಳ ದೀರ್ಘ

ಸೇವೆಯಿಂದ ಜನಾನುರಾಗವನ್ನು ಪಡೆದಿದ್ದ ಶ್ರೀ ಹೆಚ್. ಎಂ. ನಾಗಪ್ಪನವರು ಹುಲ್ಲಹಳ್ಳಿಯ ಮರಿಯಪ್ಪನವರ ಮಕ್ಕಳು. 1934-35ರಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸೆರೆಮನೆವಾಸವನ್ನು ಅನುಭವಿಸಿದ್ದರು. ಸ್ವಾತಂತ್ರ್ಯಾನಂತರ ಜಿಲ್ಲಾ ಬೋರ್ಡ್ ಸದಸ್ಯರಾಗಿಯೂ, ನಂಜನಗೂಡು ತಾಲ್ಲೋಕು ಬೋರ್ಡಿನ ಪ್ರಥಮ ಉಪಾಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಈ ಕಾಲದಲ್ಲೇ ಹುಲ್ಲಹಳ್ಳಿ-ಸಂಗಮದ ರಸ್ತೆ ನಿರ್ಮಾಣವಾಯಿತು. ಮಳೆ-ಬೆಳೆಗಳ ಅಭಾವ ಕಾಲದಲ್ಲಿ ಬಡವರಿಗೆ ತಮ್ಮಲ್ಲಿದ್ದ ಆಹಾರ ಧಾನ್ಯವನ್ನು ಶ್ರೀ ಹೆಚ್. ಎಂ. ನಾಗಪ್ಪನವರು ಉದಾರವಾಗಿ ದಾನ ಮಾಡಿದರು. ರಾಂಪುರ ಶಾಲೆಯ ಮೂರು ಕೊಠಡಿಗಳ ನಿರ್ಮಾಣಕ್ಕೆ ಕಾರಣರಾದರು. ರಾಜ್ಯದ ಅಂದಿನ ಮುಖ್ಯಮಂತ್ರಿ ವೀರೇಂದ್ರಪಾಟೀಲರಿಂದ 'ಸಮ್ಯಕ್ ರತ್ನ' ಬಿರುದು ಪಡೆದರು. ಅನಂತರ ಶ್ರೀಯುತರಾದ ಎ. ಸುಬ್ಬರಾಯಪ್ಪನವರು (1959-60), ಹೆಚ್. ಎಂ. ಪುಟ್ಟಸ್ವಾಮಪ್ಪನವರು (1960-61), ದಿವಂಗತ ಶ್ರೀ ನಂಜುಂಡಯ್ಯನವರು (1961-63), ಹೆಚ್. ಟಿ. ಪುಟ್ಟಯ್ಯ (1963-70), ಹೆಚ್. ಎಸ್. ಪುಟ್ಟಯ್ಯನವರು (1970-71), ಹೆಚ್. ಬಿ. ಮರಿಯಪ್ಪನವರು (1971-72), ಹೆಚ್. ಟಿ. ತಿಮ್ಮೇಗೌಡರು (1972-74) ಸಂಘದ ಅಧ್ಯಕ್ಷರುಗಳಾಗಿ ದುಡಿದು ಅದರ ಶ್ರೇಯೋಭಿವೃದ್ಧಿಗೆ ಶ್ರಮಿಸಿರುತ್ತಾರೆ.

1974ರಲ್ಲಿ ಡಾ. ಅಮೀರ್ ಅಹ್ಮದ್‌ರವರು ಅಧ್ಯಕ್ಷರಾಗಿದ್ದಾಗ ಸಂಘವು ಅತ್ಯಂತ ವೈಭವದಿಂದ ರಜತ ಮಹೋತ್ಸವವನ್ನು ಆಚರಿಸಿತು. ಮುಂದಿನ ಸಾಲುಗಳಲ್ಲಿ ಶ್ರೀಯುತರಾದ ಹೆಚ್. ಎಸ್. ಪುಟ್ಟಯ್ಯನವರು (1975-77), ದಿವಂಗತ ಹೆಚ್. ಎಸ್. ಕಾಳಮಾದಪ್ಪನವರು (1978-79), ಹೆಚ್. ಎಸ್. ಗಿರಿರಾಜ್ ಅವರು (1979-80), ಮತ್ತೊಮ್ಮೆ ಹೆಚ್. ಬಿ. ಮರಿಯಪ್ಪನವರು (1980-83), ಬಿ. ಹೆಚ್. ನರಸಿಂಹ ಶೆಟ್ಟರು (1983-84), ಎಂ. ಬಸವಣ್ಣನವರು (1974-86) ಸಂಘದ ಅಧ್ಯಕ್ಷರಾಗಿ ದುಡಿದು, ಈಗ 87-88ನೇ ಸಾಲಿನಲ್ಲಿ ಆರ್. ಮಹಂತಪ್ಪನವರು ಅಧ್ಯಕ್ಷರಾಗಿರುತ್ತಾರೆ.

ಸಂಘದ ಗೌರವ ಕಾರ್ಯದರ್ಶಿಗಳಾಗಿ ದಿವಂಗತ ಸರ್ವ ಶ್ರೀ ಶ್ರೀಕಂಠಜೋಯಿಸರು, (1953-66), ಡಿ. ಮಾದೇಗೌಡರು (1970-71)

ಹಾಗೂ ಡಾ. ಎಸ್. ದ್ವಾರಕಾನಾಥ್ (1971_72) ಮೊದಲಾದವರು ಸಹಕಾರ ಸಂಘದ ಅಭಿವೃದ್ಧಿಯಲ್ಲಿ ದುಡಿದಿದ್ದಾರೆ.

2. ಮನೋನ್ಮಣಿ ಮಹಿಳಾ ಮಂಡಲಿ.

ಹುಲ್ಲಹಳ್ಳಿಯ ಗ್ರಾಮ ಪಂಚಾಯಿತಿ ಮತ್ತು ನಂಜನಗೂಡು ತಾಲ್ಲೋಕು ಅಭಿವೃದ್ಧಿ ಮಂಡಲಿಯ ನೆರವಿನಿಂದ ದಿನಾಂಕ 26-3-1969 ರಂದು ಹುಲ್ಲಹಳ್ಳಿಯ ಮಹಿಳೆಯರ ಉನ್ನತಿಗಾಗಿ ಸ್ಥಾಪನೆಗೊಂಡ 'ಮನೋನ್ಮಣಿ ಮಹಿಳಾ ಮಂಡಲಿ'ಯು ಹಲವು ಚಟುವಟಿಕೆಗಳ ಕೇಂದ್ರವಾಗಿದೆ. ಈ ಮಂಡಲಿಯ ಆಶ್ರಯದಲ್ಲಿ ಟೈಲರಿಂಗ್, ಕಸೂತಿ, ಬುಟ್ಟಿ ಹೆಣೆಯುವುದು, ಮಿಷಿನ್ ಎಂಬ್ರಾಯಿಡರಿ, ಪೆಯಿಂಟಿಂಗ್ ಮತ್ತು ಪೌಷ್ಠಿಕ ಆಹಾರ ತಯಾರಿಕೆ ಮೊದಲಾದ ವಿಷಯಗಳಲ್ಲಿ ಮಹಿಳೆಯರಿಗೆ ವಿಶೇಷ ತರಬೇತಿಯನ್ನು ನೀಡಲಾಗುತ್ತಿದೆ. ಈ ಮಂಡಲಿಯು ಶಿಶುವಿಹಾರ ಮತ್ತು ಮಹಿಳಾ ವಯಸ್ಕರ ಶಾಲೆಯನ್ನು ತೆರೆದು ಹಲವು ಕಾಲ ಶಿಕ್ಷಣ ಸೇವೆಯನ್ನೂ ಸಲ್ಲಿಸಿದೆ. ಹುಲ್ಲಹಳ್ಳಿಯ ಮಹಿಳೆಯರಲ್ಲಿ ಶೇ. 70 ಮಂದಿ ವಿವಿಧ ಕೈಗಾರಿಕಾ ತರಬೇತಿಯನ್ನು ಪಡೆದು ಮತ್ತು ಹೊಲಿಗೆಯಂತ್ರಗಳನ್ನು ಹೊಂದಿ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿರುತ್ತಾರೆ. ಹರಿಜನ ಮಹಿಳೆಯರಿಗೆ ಶೇ. 75ರ ರಿಯಾಯಿತಿ ದರದಲ್ಲಿ ಹೊಲಿಗೆಯಂತ್ರಗಳನ್ನು ಕೊಡಿಸಲಾಗಿದೆ. ಈ ಮಹಿಳೆಯರು ಬ್ಯಾಂಕುಗಳಲ್ಲಿ ಉಳಿತಾಯ ನಿಧಿಯ ಖಾತೆಯನ್ನು ತೆರೆದಿರುತ್ತಾರೆ. ಮನೋನ್ಮಣಿ ಮಹಿಳಾ ಮಂಡಲಿಯ ಉತ್ತಮ ಚಟುವಟಿಕೆಗಳಿಗಾಗಿ ನೆಹರು ಯುವಕ ಕೇಂದ್ರ ಮತ್ತು ಗ್ರಾಮೀಣ ಕುಶಲ ಕರ್ಮಿಗಳ ಯೋಜನೆಯಿಂದ ವಿದ್ಯಾರ್ಥಿ ವೇತನವನ್ನೂ, ಜಿಲ್ಲಾ ಗ್ರಾಮಾಭಿವೃದ್ಧಿ ಸಂಘದಿಂದ 2600 ರೂ. ಗಳನ್ನೂ ಗ್ರಾಮ ಪಂಚಾಯಿತಿ ಮತ್ತು ತಾಲ್ಲೋಕು ಅಭಿವೃದ್ಧಿ ಸಂಸ್ಥೆಯಿಂದ 200 ರೂಗಳ ನೆರವನ್ನೂ ಮತ್ತು ಹೊಲಿಗೆ ಮೊದಲಾದ ಸ್ಪರ್ಧಾತ್ಮಕ ಚಟುವಟಿಕೆಗಳಲ್ಲಿ ಜಿಲ್ಲಾ ಮಟ್ಟದಲ್ಲಿ 400 ರೂ.ಗಳ ಬಹುಮಾನವನ್ನೂ ಪಡೆದು 'ಉತ್ತಮ ಮಹಿಳಾ ಮಂಡಳಿ' ಎಂದು ಕೀರ್ತಿಗಳಿಸಿದೆ.

ಮಹಿಳಾ ಮಂಡಲಿಯ ಅಧ್ಯಕ್ಷರುಗಳಾಗಿ ಶ್ರೀಮತಿ ಭದ್ರಮ್ಮ ಮತ್ತು ಶ್ರೀಮತಿ ಶಾಂತಮ್ಮನವರು ದುಡಿದಿದ್ದಾರೆ. ಈಗ ಶ್ರೀಮತಿ ವಿಜಯಾಂಬ ಗಿರಿರಾಜ್ ಅವರು ಈ ಮಂಡಲಿಯ ಅಧ್ಯಕ್ಷರಾಗಿರುತ್ತಾರೆ.

### 3. ಶಾರದಾ ಯುವತಿ ಮಂಡಲಿ

ಹುಲ್ಲಹಳ್ಳಿಯ ಹೆಣ್ಣು ಮಕ್ಕಳಲ್ಲಿ ಕ್ರೀಡೆ, ಸಾಹಿತ್ಯ, ಕೈಗಾರಿಕೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಅಭಿರುಚಿಯನ್ನು ಬೆಳೆಸಲು ದಿನಾಂಕ 22–10–77 ರಲ್ಲಿ ರೂಪುಗೊಂಡ 'ಶಾರದ ಯುವತಿ ಮಂಡಲಿ'ಯು ಉತ್ತಮ ರೀತಿಯಲ್ಲಿ ಕಾರ್ಯವನ್ನು ನಿರ್ವಹಿಸುತ್ತಿದೆ.

ಜಿಲ್ಲಾ ಗ್ರಾಮಾಭಿವೃದ್ಧಿ ಸಂಸ್ಥೆ, ನೆಹರು ಯುವಕ ಕೇಂದ್ರ ಗ್ರಾಮಪಂಚಾಯಿತ್ತಿ, ಸರ್ಕಾರದ ಟ್ರೈಸಂ ಸ್ಕೀಂಗಳಿಂದ ಯುವತಿ ಮಂಡಲಿಯ ನೆರವನ್ನು ಪಡೆದು ಯುವತಿಯರಿಗೆ ಹೊಲಿಗೆ ಮತ್ತು ಗೃಹ ಕೈಗಾರಿಕೆಗಳಲ್ಲಿ ತರಬೇತಿಯನ್ನು ನೀಡಿದೆ. ಶಾರದಾ ಯುವತಿ ಮಂಡ ಲಿಯು ತನ್ನ ಸದಸ್ಯರನ್ನು ನಂಜನಗೂಡಿನ ಮಹಿಳಾ ವಿದ್ಯಾಪೀಠಕ್ಕೆ ಕಳುಹಿಸಿ ಹೆಚ್ಚಿನ ಕೈಗಾರಿಕಾ ತರಬೇತಿಯನ್ನೂ ಕೊಡುತ್ತಿದೆ. ಈ ಮಂಡಲಿಯ ಆಶ್ರಯದಲ್ಲಿ ಆಟೋಟಗಳಲ್ಲಿ, ಜಾನಪದ ನೃತ್ಯ, ಹಾಡುಗಾರಿಕೆ, ಚರ್ಚಾಸ್ಪರ್ಧೆ ಮತ್ತು ಆಶುಭಾಷಣ ಸ್ಪರ್ಧೆಗಳಲ್ಲಿ ತರ ಬೇತಿಯನ್ನು ನೀಡಿ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ನಡೆಯುವ ಸ್ಪರ್ಧೆಗಳಲ್ಲಿ ಭಾಗವಹಿಸಲು ಕಳುಹಿಸಲಾಗುವುದು. ಈ ಮಂಡಲಿಯ ಸದಸ್ಯರು ಸ್ಪರ್ಧೆಗಳಲ್ಲಿ ಹಲವು ಬಾರಿ ಬಹುಮಾನವನ್ನು ಪಡೆದು, ತನ್ನ ಉತ್ತಮ ಚಟುವಟಿಕೆಗಳಿಂದ ಜಿಲ್ಲಾ ಮಟ್ಟದಲ್ಲಿ 'ಶ್ರೇಷ್ಠ ಯುವತಿ ಮಂಡಲಿ' ಎಂಬ ಪ್ರಶಸ್ತಿಯನ್ನು ಪಡೆದಿದೆ.

ಶಾರದಾ ಯುವತಿ ಮಂಡಲಿಯ ಅಧ್ಯಕ್ಷರಾಗಿ ಕುಮಾರಿ ಹೆಚ್. ಎಸ್. ನಾಗರತ್ನ, ಕುಮಾರಿ ಸರೋಜ ಮತ್ತು ಪುಷ್ಪಾಜಗನ್ನಾಥ್ ಅವರುಗಳು ಸೇವೆಸಲ್ಲಿಸಿರುತ್ತಾರೆ.

ಹುಲ್ಲಹಳ್ಳಿಯ ಮಹಿಳಾ ಮಂಡಲಿ ಮತ್ತು ಯುವತಿ ಮಂಡಲಿಗಳು ಸಂಯುಕ್ತವಾಗಿ ರಾಷ್ಟ್ರೀಯ ಹಬ್ಬಗಳನ್ನೂ, ಕನ್ನಡ ರಾಜ್ಯೋತ್ಸವವನ್ನೂ ಆಚರಿಸುವುದಲ್ಲದೇ ಆಗಾಗ್ಗೆ ಆರೋಗ್ಯ ಮಕ್ಕಳ ಪ್ರದರ್ಶನವನ್ನೂ ಏರ್ಪಡಿಸುತ್ತವೆ. ಹುಲ್ಲಹಳ್ಳಿ ಗ್ರಾಮಪಂಚಾಯಿತ್ತಿಯು ಈ ಎರಡೂ ಮಂಡಲಿಗಳಿಗೂ ಸ್ವತಂತ್ರ ಭವನ ನಿರ್ಮಿಸಿಕೊಳ್ಳಲೆಂದು ಖಾಲಿ ನಿವೇಶನ ವನ್ನು ಒದಗಿಸಿದೆ.

## 4 ನಾಯಕ ಜನಾಂಗದ ಅಭಿವೃದ್ಧಿ ಸಂಘ

ನಾಯಕ ಜನಾಂಗದಲ್ಲಿ ಪರಂಪರಾನುಗತವಾಗಿ ಬೆಳೆದು ಬಂದ ಜಾನಪದ ಕಲೆಯಾದ ಕೋಲಾಟ, ಸುಗ್ಗಿ ಕುಣಿತ, ಚರ್ಮ ವಾದ್ಯ ಬಾರಿಸುವಿಕೆ, ಭಜನೆ-ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳ ಬೆಳವಣಿಗೆಗೆ ತಮ್ಮದೇ ಆದ ನಾಯಕ ಜನಾಂಗದ ಅಭಿವೃದ್ಧಿ ಸಂಘವನ್ನು ದಿನಾಂಕ 24–5–83 ರಂದು ಸ್ಥಾಪಿಸಿಕೊಂಡು ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಗ್ರಾಮದಲ್ಲಿ ನಡೆಯುವ ದೇವರ ಉತ್ಸವಗಳ ಸಮಯದಲ್ಲಿ ಕೋಲಾಟ ಮತ್ತು ಸುಗ್ಗಿ ಕುಣಿತಗಳನ್ನು ಪ್ರದರ್ಶಿಸುತ್ತಾರೆ.

ನೆಹರು ಯುವಕ ಕೇಂದ್ರದವರು ಹುಲ್ಲಹಳ್ಳಿ, ಯಳಂದೂರು ಮೊದಲಾದ ಸ್ಥಳಗಳಲ್ಲಿ ನಡೆಸಿದ ಜಿಲ್ಲಾ ಮತ್ತು ರಾಜ್ಯಮಟ್ಟದ ಜಾನಪದ ಕಲಾ ಮೇಳದಲ್ಲಿ ಭಾಗವಹಿಸಿ ಪ್ರಶಸ್ತಿ ಪತ್ರವನ್ನು ಪಡೆದಿರುತ್ತಾರೆ. ದಿನಾಂಕ 5–2–85 ರಂದು ಗುಜರಾತ್ ಜಿಲ್ಲೆಯ ಜುನಾಗಡ್ ಪಟ್ಟಣದಲ್ಲಿ ನಡೆದ 'ಯುವ ವರ್ಷ'ದ ಸಮಾರಂಭದಲ್ಲಿ ಭಾಗವಹಿಸಿದ್ದ ಹದಿನಾಲ್ಕು ವಿವಿಧ ರಾಜ್ಯಗಳ ಯುವಕ ಸಂಘಗಳ ಪೈಕಿ ಹುಲ್ಲಹಳ್ಳಿಯ ನಾಯಕ ಸಂಘವೂ ಒಂದಾಗಿತ್ತು. ಇದರಿಂದ ಜಾನಪದ ಕಲೆಯಲ್ಲಿ ಈ ಸಂಘವು ಅಂತರ ರಾಜ್ಯಮಟ್ಟದ ಕೀರ್ತಿಯನ್ನು ಹೊಂದಿದೆ. ಇದೇ ಸಂಘದ ಆಶ್ರಯದಲ್ಲಿ ಒಂದು ಕುಸ್ತಿಗರಡಿಯನ್ನು ಸ್ಥಾಪಿಸಲಾಗಿದ್ದು ಹಲವು ಬಾರಿ ಕುಸ್ತಿ ಪ್ರದರ್ಶನಗಳನ್ನೂ ನೀಡಲಾಗಿದೆ. ಸಂಘದ ಹೆಸರಿನಲ್ಲಿ ಹುಲ್ಲಹಳ್ಳಿ ನಾಯಕ ಜನಾಂಗದ ಹಿರಿಯರು ಒಂದೂ ಕಾಲು ಎಕರೆ ನಿವೇಶನದಲ್ಲಿ ಸುಮಾರು ಮೂರು ಲಕ್ಷ ರೂ.ಗಳ ಖರ್ಚಿನಿಂದ ವಿಸ್ತಾರವಾದ 'ನಾಯಕರ ಕಲ್ಯಾಣ ಮಂದಿರ'ವನ್ನು ಸ್ಥಾಪಿಸಿರುವುದು ಒಂದು ಅತ್ಯುತ್ತಮ ಬೆಳವಣಿಗೆಯಾಗಿದೆ.

## 5. ವೀರಶೈವ ಶರಣ ಮಂಡಲಿ

ವೀರಶೈವ ಜನಾಂಗದ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯ ಉದ್ದೇಶದಿಂದ 'ವೀರಶೈವ ಶರಣ ಮಂಡಲಿ' ರೂಪುಗೊಂಡಿದೆ. ಈ ಮಂಡಲಿಯ ಆಶ್ರಯದಲ್ಲಿ ಹುಲ್ಲಹಳ್ಳಿಯ ಸೋಮೇಶ್ವರ ಮತ್ತು ಬಸವೇಶ್ವರ ದೇವಾಲಯಗಳ ಪೂಜಾದಿ ಕಾರ್ಯಗಳು ನಡೆಯುತ್ತಿವೆ. ವೀರಶೈವ ಬಡ ಮಕ್ಕಳ ವಿದ್ಯಾಭ್ಯಾಸ ಮತ್ತು ಮದುವೆ ಮೊದಲಾದುವು

ಗಳಿಗೆ ಧನಸಹಾಯವನ್ನು ನೀಡುತ್ತಾ ಬಂದಿದೆ. ಶಿಕ್ಷಣ ಮತ್ತು ಧರ್ಮ ಸಂಸ್ಥೆಗಳಿಗೂ ಉದಾರ ನೆರವು ನೀಡುತ್ತಾ ಬಂದಿದೆ. 1975 ರಲ್ಲಿ ಸುಮಾರು 70 ಸಾವಿರ ರೂಗಳ ವೆಚ್ಚದಲ್ಲಿ 'ವೀರಶೈವ ಶರಣ ಮಂಡಲಿಯ ಕಲ್ಯಾಣ ಮಂದಿರವನ್ನು ನಿರ್ಮಿಸಿ ತಮ್ಮ ಜನಾಂಗದವರ ಮದುವೆ ಮೊದಲಾದ ಧಾರ್ಮಿಕ ಕಾರ್ಯಗಳನ್ನು ನಡೆಸಲು ಅನುಕೂಲವನ್ನು ಕಲ್ಪಿಸಿದೆ. ಶ್ರೀ ಮಹದೇವಪ್ಪ ಮತ್ತು ನಂಜಪ್ಪನವರು ಈ ಮಂಡಲಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರಾಗಿರುತ್ತಾರೆ.

### 6. ಲಯನ್ಸ್ ಕ್ಲಬ್, ಹುಲ್ಲಹಳ್ಳಿ

ಲಯನ್ಸ್ (Lions-Life Is Opurtunity Never Spoil,), 'ಮಾನವ ಜನ್ಮ ದೊಡ್ಡದು, ಹಾಳು ಮಾಡಬೇಡಿ' ಎಂಬ ಮಹಾನ್ ಧ್ಯೇಯವನ್ನು ಹೊಂದಿ ಮಾನವ ಜನಾಂಗಕ್ಕೆ ಅಪ್ರತಿಮ ಸೇವೆಯನ್ನು ಸಲ್ಲಿಸುತ್ತಿರುವ ವಿಶ್ವವ್ಯಾಪಿಯಾದ 'ಲಯನ್ಸ್' ಎಂಬ ಮಹಾ ಸಂಸ್ಥೆಯು ದಿನಾಂಕ 7-6-1917 ರಲ್ಲಿ ಚಿಕಾಗೋ ನಗರದಲ್ಲಿ 'ಮೆಲ್ವಿನ್ ಜೋನ್ಸ್' ಎಂಬ ಮಹಾನುಭಾವನಿಂದ ಪ್ರಪ್ರಥಮವಾಗಿ ಸ್ಥಾಪಿಸಲ್ಪಟ್ಟಿತು.

ಈ ಸಂಸ್ಥೆಯು ತನ್ನದೇ ಆದ ಪ್ರಚಂಡ ವ್ಯಕ್ತಿತ್ವವನ್ನು ಪಡೆದು ಪ್ರಪಂಚದ 157 ರಾಷ್ಟ್ರಗಳಲ್ಲಿ ತನ್ನ ಅಗಾಧ ಸೇವೆಯನ್ನು ಸಲ್ಲಿಸುತ್ತಿದೆ. ಈ ಸಂಸ್ಥೆಯು ವಿಶಿಷ್ಟವಾದ ಆಡಳಿತ ವ್ಯವಸ್ಥೆಯನ್ನು ಹೊಂದಿ ಪ್ರಪಂಚದಲ್ಲಿ 660 ಲಯನ್ ಜಿಲ್ಲೆಗಳನ್ನೂ, ಈ ಜಿಲ್ಲೆಗಳಲ್ಲಿ 37033 ಲಯನ್ ಸಂಸ್ಥೆಗಳನ್ನೂ, 13,51,093 ಸದಸ್ಯರನ್ನು ಹೊಂದಿದೆ.

ಲಯನ್ಸ್ ಸಂಸ್ಥೆಯು ವಿಶ್ವಮಟ್ಟದಲ್ಲಿ, ಲಯನ್ ಜಿಲ್ಲಾ ಮಟ್ಟದಲ್ಲಿ ಮತ್ತು ಪ್ರಾದೇಶಿಕ ಮಟ್ಟದಲ್ಲಿ ಒಂದೇ ರೀತಿಯ ಆಡಳಿತಾಧಿಕಾರಿಗಳನ್ನು ಹೊಂದಿರುತ್ತದೆ. ಅಂದರೆ ಒಬ್ಬರು ಅಧ್ಯಕ್ಷರು, ಮೂವರು ಉಪಾಧ್ಯಕ್ಷರು, ಖಜಾಂಚಿ, ಕಾರ್ಯದರ್ಶಿ, ಟೇಲ್‌ಟ್ವಿಸ್ಟರ್, ಟೇಮರ್ ಮತ್ತು ನಾಲ್ಕು ಮಂದಿ ನಿರ್ದೇಶಕರು, ಈ ಹನ್ನೆರಡು ಮಂದಿಯುಳ್ಳ ಅಧಿಕಾರ ವರ್ಗವು 15 ದಿನಗಳಿಗೊಮ್ಮೆ ಸಭೆ ಸೇರಿ ತಮ್ಮ ಪ್ರಾದೇಶಿಕ ಹಾಗೂ ಸೀಮಿತ ವಲಯ ಮಟ್ಟದಲ್ಲಿ ಸಲ್ಲಿಸಬಹುದಾದ ಜನ ಸೇವೆಯನ್ನು ಕುರಿತು ಚಿಂತಿಸಿ ಕಾರ್ಯಪ್ರವೃತ್ತರಾಗುತ್ತಾರೆ.

ಪ್ರತಿ ಲಯನ್ ಜಿಲ್ಲೆಗೊಬ್ಬರು ಚುನಾಯಿತ ಗೌರ್ನರ್ ಇದ್ದು, ಇವರು 3 ಅಥವಾ 4 ಲಯನ್ ಸಂಸ್ಥೆಗಳು ಸೇರಿರುವ ಜೋನ್‌ಗಳ ಛೇರ್ಮನ್‌ಗಳನ್ನೂ, ಆರೋಗ್ಯ ಶಿಕ್ಷಣಗಳೇ ಮೊದಲಾದ ವಿವಿಧ ಸೇವಾ ಕಾರ್ಯಗಳನ್ನು ನಿರ್ವಹಿಸಲು ಸುಮಾರು ನಲವತ್ತು ಮಂದಿ ಅಧ್ಯಕ್ಷರುಗಳನ್ನೂ ಮತ್ತು ಒಬ್ಬರು ಡೆಪ್ಯುಟಿ ಗೌರ್ನರ್ ಅನ್ನೂ ನಾಮಕರಣ ಮಾಡುತ್ತಾರೆ. ನಾಮಕರಣಗೊಂಡ ಪ್ರತ್ಯೇಕ ಪ್ರತ್ಯೇಕ ಸೇವಾ ಕಾರ್ಯಾಧ್ಯಕ್ಷರು ತಮಗೆ ಸೇರಿದ ಲಯನ್ ಕ್ಲಬ್‌ಗಳ ಅಧ್ಯಕ್ಷರು ಮತ್ತು ಜೋನ್ ಛೇರ್ಮನ್‌ಗಳ ಮನವಿಯ ಮೇರೆಗೆ ಸೇವಾಕಾರ್ಯಗಳನ್ನು ಅವಶ್ಯಕತೆಗನುಗುಣವಾಗಿ ನಡೆಸುವ ಏರ್ಪಾಡನ್ನು ಮಾಡುತ್ತಾರೆ. ಈ ಎಲ್ಲಾ ಅಧಿಕಾರಿಗಳು ಅಥವಾ ಕಾರ್ಯಕರ್ತರು ವರ್ಷಕ್ಕೊಮ್ಮೆ ನಡೆಯುವ ಅಂತರರಾಷ್ಟ್ರೀಯ ಲಯನ್ಸ್ ಸಮ್ಮೇಳನದಲ್ಲಿ 'ಉತ್ತಮ ಸೇವೆಯನ್ನು ಜೊತೆಗೂಡಿ ಮಾಡೋಣ' ಮೊದಲಾದ ವಿಶ್ವಲಯನ್ ಅಧ್ಯಕ್ಷರ ನುಡಿಮುತ್ತುಗಳನ್ನು ಪಾಲಿಸಲು ಶ್ರಮಿಸುತ್ತಾರೆ.

ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ದೊರೆಯುವ ಉಚಿತ ಸೇವಾ ಸೌಲಭ್ಯಗಳು, ತಮ್ಮ ಗ್ರಾಮದ ಮತ್ತು ಸುತ್ತಲ ಪ್ರದೇಶದ ಜನರಿಗೂ ದೊರೆಯುವಂತಾಗಲು ಹುಲ್ಲಹಳ್ಳಿಯ ಹಿರಿಯರು ಹಾಗೂ ಸಮಾಜ ಸೇವಾಸಕ್ತರು ದಿನಾಂಕ 10-5-1982 ರಂದು ನಂಜನಗೂಡಿನ ಲಯನ್ ಸಂಸ್ಥೆಯ ಸಹಕಾರದಿಂದ 'ಹುಲ್ಲಹಳ್ಳಿ ಲಯನ್ ಸಂಸ್ಥೆ'ಯನ್ನು ತೆರೆದು ಇಂದಿನವರೆಗೂ ಹಲವು ಜನಹಿತ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಹುಲ್ಲಹಳ್ಳಿ ಲಯನ್ ಸಂಸ್ಥೆಯ ಈವರೆಗಿನ ಸೇವಾ ಸಾಧನೆಗಳು :—

ಹಲವು ಬಾರಿ ಉಚಿತ ನೇತ್ರ ಚಿಕಿತ್ಸಾ ಶಿಬಿರಗಳನ್ನೂ, ಯೋಗಾಸನಾ ಶಿಬಿರ, ಸರ್ವವಿಷಜಂತು ಚಿಕಿತ್ಸಾ ಶಿಬಿರ, ವ್ಯವಸಾಯ, ಪಶುಪಾಲನೆ, ಆರೋಗ್ಯ ಶಿಬಿರ ಹಾಗೂ ಶಾಲಾಮಕ್ಕಳ ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸಲಾಗಿದೆ.

ಹುಲ್ಲಹಳ್ಳಿಯ ಲಯನ್ ಸಂಸ್ಥೆಯ ಸೇವಾ ತತ್ಪರತೆಯನ್ನು ಗಮನಿಸಿದರೆ 'ಲಯನ್ಸ್ ಲಾಂಛನ'ದಲ್ಲಿ ಅಳವಡಿಸಿರುವ ನೇರಳೆ ಮತ್ತು ಚಿನ್ನದ ಬಣ್ಣದ ಸೂಚ್ಯಾರ್ಥವಾದ 'ತನ್ನ ರಾಷ್ಟ್ರಕ್ಕೆ, ಸ್ನೇಹಿತರಿಗೆ ಮತ್ತು ವೈಯಕ್ತಿಕವಾಗಿ ಹೊಂದಬೇಕಾದ ರಾಜನಿಷ್ಠೆ ಮತ್ತು ತನ್ನ ಬಾಳಿನಲ್ಲಿ

ಅಳವಡಿಸಿಕೊಳ್ಳಬೇಕಾದ ಪ್ರಾಮಾಣಿಕತೆ ಮತ್ತು ಪರಿಶುದ್ಧತೆ'ಗೆ ಅನುಗುಣವಾಗಿ ಸಂಸ್ಥೆಯು ನಡೆದುಕೊಂಡು ಬರುತ್ತಿದೆ, ಎಂಬುದು ಅತಿಶಯೋಕ್ತಿಯಲ್ಲ ಎನಿಸುತ್ತದೆ.

ಹುಲ್ಲಹಳ್ಳಿಯ ಲಯನ್ ಸಂಸ್ಥೆಯು 324. DI ಜಿಲ್ಲೆಗೆ ಸೇರಿದ್ದು, ಮಂಡ್ಯ, ಕೋಲಾರ, ಬೆಂಗಳೂರು, ತುಮಕೂರು ಮತ್ತು ಚಿತ್ತೂರು ಈ ಆರು ರೆವಿನ್ಯೂ ಜಿಲ್ಲೆಗಳ ಸಾಮೂಹಿಕ ಮಂಡಲಕ್ಕೆ (ಲಯನ್ ಡಿಸ್ಟ್ರಿಕ್ಟ್) ಒಳಪಟ್ಟಿದ್ದು, ಈ ಎಲ್ಲ ಜಿಲ್ಲೆಗಳ ಸಹಕಾರವನ್ನು ಪಡೆಯುವ ಮತ್ತು ತನ್ನ ಸಹಕಾರವನ್ನು ಇವುಗಳಿಗೆ ನೀಡುವ ವ್ಯವಸ್ಥೆಗೆ ಒಳಪಟ್ಟಿದೆ. ಹುಲ್ಲಹಳ್ಳಿ ಲಯನ್ ಸಂಸ್ಥೆಯು ತನ್ನ ಮಾಸಿಕ ಸದಸ್ಯರು ಮತ್ತು ಚಟುವಟಿಕೆಗಳ (ಎಂ. ಎಂ. ಎ. ರಿಪೋರ್ಟ್ಸ್) ಆಧಾರದ ಮೇಲೆ ಡಿಸ್ಟ್ರಿಕ್ಟ್ ಗೌರ್ನರ್ ಇಂದ 'ಎರಡು ಸ್ಟಾರ್ ಅವಾರ್ಡ್' ಮತ್ತು 'ಚಟುವಟಿಕೆಯ ಅವಾರ್ಡ್'ನ್ನು ಪಡೆದಿದೆ.

ಹುಲ್ಲಹಳ್ಳಿ ಲಯನ್ ಸಂಸ್ಥೆಯು ಶ್ರೀ ಹೆಚ್. ಎಸ್. ಶಿವನಾಗಪ್ಪನವರನ್ನು (1982-83) ಸ್ಥಾಪಕ ಅಧ್ಯಕ್ಷರನ್ನಾಗಿಯೂ ಮತ್ತು ಮುಂದಿನ ಸಾಲುಗಳಲ್ಲಿ ಶ್ರೀ ಹೆಚ್. ಬಿ. ಮರಿಯಪ್ಪ (83-84), ಶ್ರೀ ಬಿ. ಹೆಚ್ ನರಸಿಂಹಶೆಟ್ಟಿ, (84-85), ಶ್ರೀ ಹೆಚ್. ಎಸ್. ಗಿರಿರಾಜ್ (85-86), ಶ್ರೀ ಹೆಚ್. ಪಿ. ಬಸವರಾಜು (86-87) ಎಂಬುವರುಗಳೂ, ಪ್ರಸ್ತುತ 87-88 ನೇ ಸಾಲಿನಲ್ಲಿ ಶ್ರೀ ಡಿ. ಮಾದೇಗೌಡ ಅವರೂ ಅಧ್ಯಕ್ಷರಾಗಿರುತ್ತಾರೆ.

ಮುಂಬರುವ 88-89 89-90, ಮತ್ತು 90-91 ನೆಯ ಸಾಲುಗಳಲ್ಲಿ ಡಾ. ಎಸ್. ದ್ವಾರಕಾನಾಥ್, ಶ್ರೀ ಡಿ. ಮಹದೇವಪ್ಪ ಮತ್ತು ಶ್ರೀ ಹೆಚ್. ಎಸ್. ಲಕ್ಷ್ಮೀಕಾಂತ ಅವರುಗಳನ್ನು ಅಧ್ಯಕ್ಷರುಗಳನ್ನಾಗಿ ಹೊಂದಲಿರುವ ಹುಲ್ಲಹಳ್ಳಿ ಲಯನ್ ಸಂಸ್ಥೆಯು ಸಮಾಜ ಸೇವೆಯತ್ತ ಮುನ್ನುಗ್ಗುತ್ತಿದೆ.

## ಹುಲ್ಲಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ರಿ)

ಹುಲ್ಲಹಳ್ಳಿಯ ಹಾಲು ಉತ್ಪಾಧಕರಲ್ಲಿ ಸಹಕಾರ ಭಾವನೆಯನ್ನುಂಟುಮಾಡಲು ಮತ್ತು ಅವರಿಗೆ ಹಲವು ಸೌಲಭ್ಯಗಳನ್ನೊದಗಿಸುವ ಉದ್ದೇಶದಿಂದ ಹುಲ್ಲಹಳ್ಳಿಯಲ್ಲಿ ದಿನಾಂಕ 23-8-78 ರಂದು 'ಹಾಲು

ಉತ್ಪಾದಕರ ಸಹಕಾರ ಸಂಘ'ವನ್ನು ಸ್ಥಾಪಿಸಲಾಯಿತು. ಈ ಸಂಘದಲ್ಲಿ ಸಾಮಾನ್ಯ ಸದಸ್ಯರು ಏಳು ಜನ, ಹರಿಜನರು ಒಬ್ಬರು, ಮಹಿಳಾ ಸದಸ್ಯರು ಒಬ್ಬರು ಒಟ್ಟು ಒಂಭತ್ತು ಮಂದಿ ಸದಸ್ಯರಿರುತ್ತಾರೆ. ಈತನಕ ಈ ಸಂಘದಲ್ಲಿ 148 ಮಂದಿ ಷೇರು ಸದಸ್ಯರಿದ್ದು 1480 ರೂ.ಗಳ ಷೇರು ಬಂಡವಾಳವಿದೆ. 1986-87 ನೇ ಸಾಲಿನಲ್ಲಿ ಈ ಸಂಘವು 83,177 ರೂ.ಗಳ ಹಾಲನ್ನು ಖರೀದಿಸಿತು. ಸ್ಯಾಂಪಲ್ ಹಾಲನ್ನು ಸ್ಥಳೀಯರಿಗೂ, ಉಳಿದ ಹಾಲನ್ನು ಮೈಸೂರು ಡೈರಿಗೂ ಮಾರಾಟ ಮಾಡಲಾಗುತ್ತದೆ. 86-87ನೇ ಸಾಲಿನಲ್ಲಿ 14,685 ರೂ ಲಾಭಗಳಿಸಿದ್ದು ಸಂಘದ ಸಿಬ್ಬಂದಿವರ್ಗದ ಸಂಬಳ ಹಾಗೂ ಇತರೆ ಬಾಬುಗಳಿಗೆ ಸುಮಾರು 10,000 ರೂ ಖರ್ಚು ಮಾಡಿ 5000 ರೂ.ಗಳ ನಿವ್ವಳ ಲಾಭಗಳಿಸಿದೆ. ಸಂಘವು ಈವರೆಗೆ ಷೇರು ಬಂಡ ವಾಳದ ಜೊತೆಗೆ 50,000 ರೂ.ಗಳನ್ನು ಹಾಲು ಮಾರಾಟದಿಂದ ನಿವ್ವಳ ಲಾಭವನ್ನು ಗಳಿಸಿ, ಬಂಡವಾಳವನ್ನು ಹೊಂದಿದೆ.

ಈ ಹಾಲು ಉತ್ಪಾದಕರ ಸಂಘಕ್ಕೆ ಹಿಂದಿನ ಗ್ರಾಮಪಂಚಾಯಿತ್ತಿಯು ಕಟ್ಟಡಕ್ಕಾಗಿ ಉಚಿತ ನಿವೇಶನವನ್ನು ನೀಡಿದೆ. N. R. E. P ವತಿಯಿಂದ ಕಟ್ಟಡ ನಿರ್ಮಾಣಕ್ಕೂ ಮಂಜೂರಾತಿ ದೊರೆತಿದೆ.

ಹಾಲು ಸರಬರಾಜುಗಾರರಿಗೆ ಸಂಘದಿಂದ ಒಂದು ರೂಗೆ 4 ಪೈಸೆ ಯಂತೆ ವರ್ಷಕ್ಕೊಮ್ಮೆ ಬೋನಸ್ ನೀಡಲಾಗುವುದು. 'ಮೈಸೂರು ಸಹಕಾರಿ ಹಾಲು ಉತ್ಪಾದಕರ ಸಂಘದ ಒಕ್ಕೂಟ'ದಿಂದ ಸಂಘದ ಸದಸ್ಯರ ಪಶುಗಳಿಗೆ ತುರ್ತು ವೈದ್ಯಕೀಯ ಚಿಕಿತ್ಸೆಯನ್ನು ನೀಡಲಾಗುವುದು. ರಿಯಾಯಿತ್ತಿ ದರದಲ್ಲಿ ಪಶು ಆಹಾರವನ್ನೂ, ಉಚಿತ ಹಸಿರು ಮೇವಿನ ಬೀಜವನ್ನೂ ಒದಗಿಸಲಾಗುವುದು. ಸಂಘದ ಮೂಲಕ ಹಸು, ಎಮ್ಮೆ ಗಳನ್ನು ಕೊಳ್ಳಲು ಹುಲ್ಲಹಳ್ಳಿಯ ಕಾರ್ಪೊರೇಷನ್ ಬ್ಯಾಂಕ್ ಸಾಲದ ಸೌಲಭ್ಯವನ್ನೂ ಒದಗಿಸುತ್ತದೆ. ಮೈಸೂರು ಸಹಕಾರಿ ಹಾಲು ಉತ್ಪಾದ ಕರ ಯೂನಿಯನ್ನಿನ ವ್ಯವಸ್ಥಾಪಕರು ಹಾಗೂ ಮಾರ್ಗವಿಸ್ತರಣಾಧಿಕಾರಿ ಗಳು, ಈ ಹುಲ್ಲಹಳ್ಳಿ ಸಂಘದ ಅಭಿವೃದ್ಧಿಗೆ ನೆರವಾಗುತ್ತಾರೆ. ಈ ಸಂಘವು ತಳೂರು ಮಾರ್ಗಕ್ಕೆ ಸೇರಿದೆ.

ಹುಲ್ಲಹಳ್ಳಿ ಹಾಲು ಉತ್ಪಾದಕರ ಸಂಘದಲ್ಲಿ ಮೂರು ವರ್ಷ ಕ್ಕೊಮ್ಮೆ ಕಾರ್ಯಕಾರಿ ಸಮಿತಿ ಚುನಾವಣೆ ನಡೆಯುತ್ತದೆ. ವರ್ಷಕ್ಕೆ 180 ದಿನಗಳು ಸಹಕಾರ ಸಂಘಕ್ಕೆ ಹಾಲು ಸರಬರಾಜು ಮಾಡಿರುವವರು

ಮಾತ್ರ ಅಭ್ಯರ್ಥಿಯಾಗಿ ನಿಲ್ಲಲು ಹಾಗೂ ಮತ ಚಲಾಯಿಸಲು ಹಕ್ಕನ್ನು ಪಡೆದಿರುತ್ತಾರೆ. ಇದುವರೆಗೆ ಹಾಲು ಉತ್ಪಾದಕ ಸಂಘದ ಅಧ್ಯಕ್ಷರಾಗಿ ಡಾ. ಎಸ್. ದ್ವಾರಕಾನಾಥ್ (1977–79 ರಿಂದ 1983-84), ಮಲೆ ಮಾದಪ್ಪ B.sc (1984–85) ಮತ್ತು ಹೆಚ್. ಎಸ್. ಶಿವನಂಜಪ್ಪ ನವರು (1985-86 ರಿಂದ....) ಸೇವೆಸಲ್ಲಿಸಿರುತ್ತಾರೆ.

ಮೇಲ್ಕಂಡ ವಿವಿಧ ಸಂಘಗಳು ಹುಲ್ಲಹಳ್ಳಿಯ ಸಮಷ್ಟಿಯ ಪ್ರಗತಿ ಯನ್ನು ತಮ್ಮ ತಮ್ಮ ವ್ಯಷ್ಟಿಯ ಪ್ರಗತಿಯ ಮೂಲಕ ಸಾಧಿಸುತ್ತಿವೆ. ಇವುಗಳ ಜೊತೆಗೆ ಬ್ರಾಹ್ಮಣ ಸಂಘ, ಹರಿಜನರ ಡಾ. ಅಂಬೇಡ್ಕರ್ ಯುವಕ ಸಂಘ, ಸಜ್ಜನ ವೀರಶೈವ ಸಂಘಗಳು ತಮ್ಮ ಜನಾಂಗದ ಅಭಿ ವೃದ್ಧಿಗೆ ಶ್ರಮಿಸುತ್ತಿವೆ. ಸುಭಾಷ್ ಯುವಕ ಸಂಘ ಮತ್ತು ಹಳ್ಳಿಯ ವಿದ್ಯಾರ್ಥಿಗಳಿಗೆ ಶಾಲಾ ಪರೀಕ್ಷೆಯ ಅವಧಿಯಲ್ಲಿ ಹುಲ್ಲಹಳ್ಳಿಯಲ್ಲಿ ಅನ್ನ ದಾನ ಮಾಡುತ್ತಿದ್ದ ಗಡವಲಾಯ ಸಂಘವು ಅಸ್ತಿತ್ವದಲ್ಲಿದ್ದು ಈಗ ನಿವೃತ್ತಿ ಹೊಂದಿವೆ.



↑
ಜಾನಪದ ಕಲೆ
ಕೋಲಾಟ

ಸುಪ್ರಸಿದ್ಧ
ಜಾನಪದಕಲೆ
ಹುಲ್ಲಹಳ್ಳಿಯ
ಸುಗ್ಗಿ ಕುಣಿತ
↑



ಹುಲ್ಲಹಳ್ಳಿಯಲ್ಲಿ ನಡೆಯುವ ಕಾಳಿಕಾಮಾತೆಯ ಉತ್ಸವ

# 12. ಹುಲ್ಲಹಳ್ಳಿಯ ಜಾನಪದ

## 'ಹುಲ್ಲಹಳ್ಳಿಯ ಜನಪದ ಗೀತೆಗಳು'

### 1. ಚಿಕ್ಕದೇವಮ್ಮನ ಪದ

ಸೊಲ್ಲು || ಚೆಲ್ಲಿದರು ಮಲ್ಲಿಗೆಯ ಬಾಣಾಸುರನೇರಿ ಮ್ಯಾಲೆ
ಅಂದಾದ ಚೆಂದಾದ ಮಾಯ್ಕಾರ್ ಚಿಕ್ಕಮ್ಮನಿಗೆ ||

ಬೆಟ್ಟಾದ ಮೇಲವ್ಳೆ ಬುಟ್ಟೆಂಡೆ ಚಿಕ್ಕಮ್ಮ
ಬಟ್ಟಾಲಿಡಿದವ್ಳೆ ಬಲಗೈಲಿ । ಬಾಳೆಹಣ್ಣ
ಇಟ್ಟಾಡಿ ವರವ ಕೊಡುತಾಳ

ಕೈಲ್ಲಾಗು ಬೆತ್ತ ಕಂಕ್ಳಲ್ಲಿ ಕೊರ್ಮಂಜಿ ಗೂಡು
ಯಾವುನಾಡವ್ಳ ವಾಸಕೊರ್ಮಿ । ಚಿಕ್ಕಮ್ಮ
ಹುಟ್ಟೇದ (ನಾಡ) ತಳವ ಹೆಸರೇಳ

ಹುಟ್ಟಿದ್ದು ಉತ್ತರ ದೇಶ ಬೆಳೆದದ್ದು ಕತ್ತಾಲ ರಾಜ್ಯ
ಹೆಣ್ಣು ಚಿಕ್ಕಮ್ಮ ಜಲನಾಡಿ । ಬರುವಾಗ
ಧೂಪಾದ ಮಂಜು ಕವಿದಾವ

ಅಕ್ಕ ಚಿಕ್ಕಮ್ಮಾಗ ಕೊಟ್ಟಾರು ಕೊಡುಗಾವ
ಕಟ್ಟಹುಣಸೂರು ಕಡಜಟ್ಟಿ । ಕಲ್ಲಂಬಾಳು
ಕೊಟ್ಟಾರು ಕುಂದೂರು ಕೊಡುಗಾವ

ಹಾಸುಗಲ್ಲಿನ ಮ್ಯಾಲೆ ಗುಡ್ಸೀವ ನಿನ್ನ ಮಂಡ
ಸಾಸುಳ್ಳಗಾತಿ ಚಿಕ್ಕದೇವಿ । ನಿನ್ನ ಮಂಡ
ಗುಡ್ಸೀವ ಸಣ್ಣಮರಳಲ್ಲಿ

ಗಂಧದ ಗಮನಕ್ಕ ಹೊಂಬಾಳ ಬಾರಕ್ಕ
ರಂಭೆ ಚಿಕ್ಕಮ್ಮ ಬೆವರೀಳ । ತಂಬಾಡಿ
ಬೀಸಯ್ಯ ಬೆಳ್ಳಿ ಚವಲೀಯ

ಮಾಯ್ಯಾತಿ ಗುಡಿಗ ಮಂಜಾಗ ಕವಿದಾವ
ಮಂಜಲ್ಲ ಮಳೆಯು ಹನಿಯಲ್ಲ । ಚಿಕ್ಕಮ್ಮ
ಮಂಡೆ ಸಿಕ್ಕೊಡೆದ ಕುರುಬೆವರು

ಏರಿ ಹತ್ಯಾಳ ನೀರನ್ನೆ ನೋಡ್ಯಾಳ
ಏರಿಗೆ ನೀರು ಸರಿಯೆಂದು । ಚಿಕ್ಕಮ್ಮ
ಏರ್ಯಾಳ ಬೆಳ್ಳಿ ಕುದುರಾವ

ಕರಿಯು ಸೀರಿಗೆ ನರಿಗೆ ಚಿನ್ನದ ಕುಣಿಕ
ನಡಮುಡಿಯು ಮ್ಯಾಲೆ ಬರುವವಳ । ಚಿಕ್ಕಮ್ಮ
ಗರಿಲಿದ್ದ ಮುತ್ತು ಜಲಿರೆಂದು

ಅಕ್ಕ ಚಿಕ್ಕಮ್ಮ ಪಟ್ಟಾವಗ್ಯೆಂದಾರ
ತುಪ್ಪ ಕೇಳೀನ ಮಡುವಾಳ । ಶೆಟ್ಟರು
ತುಪ್ಪಗಿಂತ ಮೇಲು ಶಿವಗಂಗೆ

ತಾಯಿ ಚಿಕ್ಕಮ್ನ ಸೀರಿವ್ಯೊಗ್ಯೆಂದಾರ
ಹಾಲು ಕೇಳೀನ ಮಡಿವಾಳ । ಶೆಟ್ಟರು
ಹಾಲಿಗಿಂತ ಮೇಲು ಶಿವಗಂಗೆ

ಅಡ್ಡ ಬೆಟ್ಟದಲ್ಲಿ ಗಿಡ್ಡೀರವತಾರವೇನ
ಅಡ್ಡಾಕಿ ಹುಲಿಯು ತಿವಿಯುವಳ । ಚಿಕ್ಕಮ್ಮ
ಗಿಡ್ಡಿ ನಿನ್ನ ರವ್ವಿಗೆ ನಿಲಬಾರ

ಕಡೆಯು ಬೆಟ್ಟದಲ್ಲಿ ಕಾಳೀರವತಾರವೇನ
ಕಾಕಾಕಿ ಹುಲಿಯು ತಿವಿಯೋಳ । ಚಿಕ್ಕಮ್ಮ
ಕಾಳಿ ನಿನ್ನ ರವ್ವಿಗೆ ನಿಲಬಾರ

ಕಗ್ಗಾಲಿ ತಂದು ಕದಿಯುಬಾಗಲ ಮಾಡಿ
ಒಡ್ಡುಗಲ್ಲಲ್ಲಿ ಒರುಗೌಳ । ಚಿಕ್ಕಮ್ಮ
ಗುಡ್ಡಾರ ಹೋಗಿ ಕರತನ್ನಿ

ಮಲ್ಲಿಗ್ಹೂ ನಲ್ಲಿ ಮಲ್ಲೀಯು ನೇದೌರ
ಮಲ್ಲಿ ಎಂದಾಳು ಮಲ್ಲಿಗೆಯು । ಚಿಕ್ಕಮ್ಮ
ಪಲ್ಲಕ್ಕಿ ಕೊಟ್ಟು ಕರತನ್ನಿ

ಚಂದದ ಗರಿ ಸೀರೆ ಚೆಂದಿಲ್ಲ ಅಂತೇಳಿ
ಚಂಡಿವೂಡವ್ವ ಹೊಳೆಯಲ್ಲಿ। ಚಿಕ್ಕವ್ವ
ಗೊಂಡಾಯ ಸೀರೆ ತರಲೆಂದು

## 2. ಮಾರಮ್ಮನ ಪದ

ಎಬ್ರು ಬತ್ತಾವ್ರೆ ಎದ್ದು ನೋಡು ಮಾರವ್ವ
ಗೆಜ್ಜೆ ಕಾಲಿನ ಇರುಮಕ್ಳು। ಕುಣ್ತಾವ
ಎದ್ದು ನೋಡವ್ವ ಕುಣ್ತಾವ

ಚಂದದ ಗರಿ ಸೀರೆ ಚಂದಿಲ್ಲ ಅಂತೇಳಿ
ಚಂಡಿವೂಡವ್ವ ಹೊಳೆಯಲ್ಲಿ। ಮಾರವ್ವ
ಗೊಂಡೆಯ ಸತ್ತಿಗೆ ತರಲೆಂದು

ಸಾಲಿಗ್ಸತ್ತಿಗೆ ಬಂದ ವ್ಯಾಲೆ ಕನ್ನಡಿ ಬಂದ
ಮೇಗಲ ಬೀದಿಯಿಂದ ಮಡಬಂದ। ಮಾರವ್ವ
ತಾ ಬಂದು ಬೀದಿ ಮೆರೆದಾಳ

ಅರಸಿ ಅಬ್ಬಕ್ಕ ಗೆರ್ಸೀಲಿ ಹೂ ಬಂದ
ವರ್ಸಕ್ಕೆ ನೂರು ಮಡಬಂದ। ಮಾರವ್ವ
ಅರಸಿ ನಿನ್ನಬ್ಬ ಐಬೋಗ

ದುಂಡಿ ಅಬ್ಬಕ್ಕ ಬಂಡೀಲ ಹೂಬಂದ
ಕೆಂಡುಗದ ಅಕ್ಕಿ ಮಡಬೆಂದ। ಮಾರವ್ವ
ದುಂಡಿ ನಿನ್ನಬ್ಬ ಐಬೋಗ

ಹಾವು ತುಳ್ಕೊಂಡು ತಾಯಿ ನಿನ್ನೆನೆವೇನು
ಹಾವು ಹಂಬಾಗಿ ಹರಿದಾವ। ಮಾರವ್ವ
ತಾಯಿ ನಿನ್ನೆದ್ದು ನೆನೆವೇನು

ಕೆಂಡ ತುಳ್ಕೊಂಡು ದುಂಡಿ ನಿನ್ನೆನೆವೇನು
ಕೆಂಡ ನೀರಾಗಿ ಹರಿದಾವ। ಮಾರವ್ವ
ದುಂಡಿನಿನ್ನೆದ್ದು ನೆನೆವೇನು

ದಡದಡದ ಬಳ್ಳಿ ದನ ಬರುವ ಹೊತ್ನಲ್ಲಿ
ಓಡಾಡೌಳಾರ ಹೊಳೆಯಲ್ಲಿ । ಮಾರಮ್ಮ
ಎಳೆಯ ಹೊಂಬಾಳ ಸುಳಿಯಲ್ಲಿ

ಅತ್ತಿ ಮರ ಕಾಣಿ ಮುತ್ತಿನ ಕೊಳ ಕಾಣಿ
ಅಕ್ಕಮಾರಮ್ನ [ಗುಡಿಗಾಣಿ] । ಗುಡಿಯ ಬಾಗಿಲ ಮುಂದೆ
ಸಾಲಿಟ್ಟು ಸರಳ ಎಳದಾರ

ಚುಚ್ಚಿದ ಬಾಯ್ಬೀಗ ಮಪ್ಪತ್ತಿನೂಟ
ನಾವೊಕ್ಕಿ ಬರನಾರಿ ಹೊಳೆಯಿಂದ । ಮಾರಮ್ಮ
ಒಪ್ಪಿತ ತಾಯಿ ಅರಕಾವ

## 3. ಶಿವನ ಪದ

ತೊಡೆಯ ಮ್ಯಾಲೆ ಗೌರಿ ಶಿವರಾಯಂಗೆ
ಮುಡಿಯ ಮ್ಯಾಲೆ ಗಂಗೆ ಶಿವರಾಯಂಗೆ
ಮಂಚಾದ ಮ್ಯಾಲೆ ಶಿವರಾಯ
ಮಲಗಿರೋ ಹೊತ್ನಲ್ಲಿ ಮಲ್ಲೇದೇವ
ಶ್ರೀಗೌರೀನ್ಕರದರಲ್ಲಾ ಮಲ್ಲೇದೇವ
ಕೇಳು ಕೇಳು ಶ್ರೀಗೌರಿ ಎಲೆಹೆಣ್ಣೆ
ನಾಮಲಗಿರೋ ಮಂಚದಲಿ ಎಲೆಹೆಣ್ಣೆ
ಕಂಟ ಕಂಬಕೆ ಮುತ್ತು ಶ್ರೀಗೌರಿ
ಮಂಚದ ಮ್ಯಾಲೆ ಇರುವಾಗ ಮಲ್ಲೇದೇವ
ಏನೊಂತ ಕೇಳುತಾರೆ ಶ್ರೀಗೌರಿಯು
ಮಾಯಾಕಾರ ಮಲ್ಲೇದೇವ
ನೀವ್ಕಂಡ ಕನಸಾ ಮಲ್ಲೇದೇವ
ನಾನೇನು ಬಲ್ಲೆನಯ್ಯಾ ಶಿವರಾಯ
ರನ್ನ ಅನ್ನುವುದು ಶಿವರಾಯ
ಅದು ಹೆಣ್ಣು ಅಂದಳಲ್ಲೋ ಮಲ್ಲೇದೇವ
ಪಟ್ಟಾ ಮಂಚಕೆ ಶಿವರಾಯ
ಮತ್ತೊಬ್ಬ ರಾಣಿ ಬರುವಳು ಮಲ್ಲೇದೇವ
ಮೂರು ಜನ ಮಡದಿರ ಮ್ಯಾಲೆ ಶಿವರಾಯ

ಮತ್ತೊಬ್ಬ ರಾಣಿ ತರಬೇಕೆಂದ ಶಿವರಾಯ
ಗೌರಿವೊಂದಿಗೆ ಜಗಳಮಾಡಿ ಶಿವರಾಯ
ಬೋರಮ್ಮನೊಂದಿಗೆ ಯುದ್ಧ ಮಾಡಿ ಶಿವರಾಯ
ಪಾರ್ವತಿಯೊಂದಿಗೆ ಪಂತಮಾಡಿ ಶಿವರಾಯ
ನಿನಗಿಂತ ಹೆಚ್ಚಿನವಳ ಶ್ರೀಗೌರಿ
ತತ್ತೀನಿ ಅಂತಹೇಳಿ ಶಿವರಾಯ
ಜಗಳಾವ ಮಾಡಿ ಶಿವರಾಯ
ಹಂಪೆಯೊಳಗ ಹೊರಟನು ಮಲ್ಲೇದೇವ
ಗಂಗೆಯ ತಡಿಯಲ್ಲಿ ಶಿವರಾಯ
ಒಂದು ಜಂಬುನೇರಿಳೆಮರ ಮಲ್ಲೇದೇವ
ಜಂಬುನೇರಿಳೆಮರ ಶಿವರಾಯ
ಕೊಂಬೇಲಿ ಹಣ್ಣ ಕೇಳುತಾರೆ ಮಲ್ಲೇದೇವ
ಕೊಂಬೇಲಿ ಹಣ್ಣ ಕೇಳುವಾಗ ಶಿವರಾಯ
ಗಂಗೆ ನೀರಿಗೆ ಬರುತವ್ರೆ ಮಲ್ಲೇದೇವ
ಸಂಗಡಗಾತಿ ಜೊತೆಯಲ್ಲಿ ಗಂಗೆಬಾಲೆ
ನೀರಿಗೆ ಬರುತಾಳೆ ಶಿವರಾಯ
ಬರುವ ಗಂಗೇನ ಕಂಡು ಶಿವರಾಯ
ಹಣ್ಣಿನ ಗ್ಯಾನ ಬಿಟ್ಟರಲ್ಲೋ ಮಲ್ಲೇದೇವ
ಹಣ್ಣಿನ ಗ್ಯಾನ ಬಿಟ್ಟರಲ್ಲೋ ಶಿವರಾಯ
ಸ್ವಾಮಿ ಹೆಣ್ಣಿನ ಗ್ಯಾನ ಮಾಡುತಾರ ಮಲ್ಲೇದೇವ
ಬಂದಾಳಲ್ಲೋ ಗಂಗೆ ಶಿವರಾಯ
ಗಂಗೆ ತಡೀಲಿ ನಿಂತಳಲ್ಲೋ ಮಲ್ಲೇದೇವ
ಮೆಲ್ಲ ಮೆಲ್ಲಗೆ ಇಳಿದು ಶಿವರಾಯ
ಅವರು ಏನಂತ ಕೇಳುತಾರೆ ಮಲ್ಲೇದೇವ
ಯಾರ ಹುಡುಗಿ ನೀನು ಶಿವರಾಯ
ನಿನ್ನ ಮತವೇನು ಅಂತ ಕೇಳುತಾರೆ ಮಲ್ಲೇದೇವ
ಹಾರೂರ ಹುಡುಗಿಯಲ್ಲ ಶಿವರಾಯ
ನಾನು ಅರಸರ ಹುಡುಗಿಯಲ್ಲ ಮಲ್ಲೇದೇವ
ನಾನು ಹುಟ್ಟೇ ದಂಬಿಗನ ಮಗ ಶಿವರಾಯ

ನನ್ನ ಮತ ಕಟ್ಕೊಂಡು ನಿನಗೇನ ಮಲ್ಲೇದೇವ
ನಿನ್ನ ನಾಮವೇನ ಅಂದಳಲ್ಲಾ ಶಿವರಾಯ
ಗಂಗಾಕ ಕಟ್ಟಿಲ್ಲ ಲಿಂಗಾಗ ಮುದ್ರವಿಲ್ಲ
ನಾವ್ ಬಾಳ ಬದುಕುವ ಬಾ ಶ್ರೀಗಿರಿಗೆ
ಲಿಂಗ ಕಟ್ಟಿದ ಗುರುವೆ ಶಿವರಾಯ
ನಿಮ್ಗೂ ನಮ್ಗೂ ಸರಿಯಿಲ್ಲ ಮಲ್ಲೇದೇವ
ನಿನ್ನ ಏನಾರೂ ಬಿಡೋನಲ್ಲೇ ಎಲೆಗಂಗೆ
ನೀ ಎದ್ದು ಬಾರೆ ಶ್ರೀಮುಡಿಗೆ ಎಲೆಗಂಗೆ (ಸಶೇಷ)

## 4. ಸಿದ್ದಪ್ಪಾಜಿ ಪದ

ಸಿದ್ದಯ್ಯಾ ಸ್ವಾಮಿ ಬನ್ನಿ
ಮಂಟೇದ ನಿಂಗಯ್ಯಾ ನೀವೆ ಬನ್ನಿ
ಸಿದ್ದ ಸಿದ್ದರಿಗೆಲ್ಲ ಅತಿಮುದ್ದು ಗನನೀಲಿ
ಸಿದ್ದಯ್ಯಾ ಸ್ವಾಮಿ ಬನ್ನಿ
ಹುಟ್ಟಿದ್ದು ಉತ್ತರ ದೇಶ ಬೆಳೆದದ್ದು ಕತ್ತಲ ರಾಜ್ಯ
॥ ಸಿದ್ದಯ್ಯಾ ॥
ಉತ್ತರ ದೇಶದಲ್ಲಿ ನಾಕಮೂಲೆ ಕೊಳವಂತೆ ॥ ಸಿದ್ದಯ್ಯಾ ॥
ನಾಕಮೂಲೆ ಕೊಳವೊಳಗೆ ಕೆಂದಾವರದ ಪುಸ್ಮ
॥ ಸಿದ್ದಯ್ಯಾ ॥
ಕೆಂದಾವರದ ಪುಸ್ಮದಲ್ಲಿ ಉದ್ಭವ ಆದರಲ್ಲೋ ॥ ಸಿದ್ದಯ್ಯಾ॥
ಉದ್ಭವ ಆಗಿ ಸ್ವಾಮಿ ನರಲೋಕ ನೋಡುತವ್ರೆ
॥ ಸಿದ್ದಯ್ಯಾ ॥
ಅರವತ್ತಾರು ಕಾಚ ನೂರೆಂಟು ಬಿರುದು ॥ ಸಿದ್ದಯ್ಯಾ ॥
ಕಲ್ಲಿನಲ್ಲಿ ಪವಾಡ ಮುಳ್ಳಿನಲ್ಲಿ ಪವಾಡ ॥ ಸಿದ್ದಯ್ಯಾ ॥
ಹುಲಿಚರ್ಮ ಉಟ್ಟಾರಲ್ಲೋ ಮಲ್ಲಿಗುಲಾಬಿ ದರಿಸರಲ್ಲೋ
॥ ಸಿದ್ದಯ್ಯಾ ॥
ಕೆಂಪಾನವಲಕ್ಕಿಗೂಡು ಬಲ್ದಕೈಲಿ ಹಿಡಿದರಲ್ಲೋ
॥ ಸಿದ್ದಯ್ಯಾ ॥

ರುದ್ರಾಕ್ಷಿ ಮಣಿಯನ್ನು ಕತ್ತಿನಲ್ಲಿ ದರಿಸರಲ್ಲೋ
|| ಸಿದ್ದಯ್ಯಾ ||
ಎಳಗವಿಯ ಸಿದ್ದರೆಲ್ಲಾ ಸುಳಗಾವಿ ಮುಸಗಿಟ್ಟಾರಲ್ಲೋ
|| ಸಿದ್ದಯ್ಯಾ ||
ಹೂಬತ್ತಿ ಬಸ್ಮಾವನ್ನು ಮೈಯೆಲ್ಲಾ ದರಿಸರಲ್ಲೋ
|| ಸಿದ್ದಯ್ಯಾ ||
ಒಡದು ಮೂಡನಿಲ್ಲವಲ್ಲಾ ಕಡದು ತಿದ್ದನಿಲ್ಲವಲ್ಲಾ
|| ಸಿದ್ದಯ್ಯಾ ||
ಕೆಂದಾವರದ ಪುಸ್ಪದಲ್ಲಿ ಉದ್ಬಾವೊಂದಾದರಲ್ಲಾ
|| ಸಿದ್ದಯ್ಯಾ ||
ಅವ್ರು ಹುಟ್ಟಿದಂತ ಏಳು ಜಿನಕೆ ಭೂಮಿತಾಯಿ ಪಡೆದರಲ್ಲಾ
|| ಸಿದ್ದಯ್ಯಾ ||
ನಾನೆ ಹೆಚ್ಚಾದನೋ ಅಂತ ಹೇಳಿ
ಭೂಮಿತಾಯಿ ಹೆಚ್ಚಾದಳೋ ಅಂತ ಹೇಳಿ
ತ್ರಾಸಿಯನ್ನು ತತ್ತಾರಲ್ಲೋ || ಸಿದ್ದಯ್ಯಾ ||
ತ್ರಾಸಿಯನ್ನು ತತ್ತಾರಲ್ಲೋ ತೂಕನಾದ್ರೂ ಮಾಡ್ತಾರಲ್ಲೋ
|| ಸಿದ್ದಯ್ಯಾ ||
ಅವ್ರು ಶಿವಕಂತ್ಯ ಮಡುಗುತಾರೆ ಉರಿಯುಗದ್ದೆ ಮಡುಗುತಾರೆ
|| ಸಿದ್ದಯ್ಯಾ ||
ಉರಿಯುಗದ್ದೆ ಮಡುಗಿಬುಟ್ಟು ಭೂಮಿತಾಯ ತೂಗುತಾರೆ
|| ಸಿದ್ದಯ್ಯಾ ||
ಭೂಮಿತಾಯಿ ತೂಗುತಾರೆ ಶಿವಕಂತೆ ಮೇಲಾಯಿತಲ್ಲೋ
|| ಸಿದ್ದಯ್ಯಾ ||
ಶಿವಕಂತೆ ಮೇಲಾಯಿತಲ್ಲೋ ಕಂಡೆಯ ಮೇಲಾಯಿತಲ್ಲೋ
|| ಸಿದ್ದಯ್ಯಾ ||
ದರೆಗೆ ದೊಡ್ಡವರಂತೆ ಹೆಸರು ಕುಲವ ತಗದರಲ್ಲೋ
|| ಸಿದ್ದಯ್ಯಾ ||
ಉತ್ತರ ದೇಶದಲ್ಲಿ ನಾಕಮೂಲೆ ನೋಡುತಾರೆ
|| ಸಿದ್ದಯ್ಯಾ ||

ನಾಕುಮೂಲೆ ನೋಡುತಾರೆ ಎತ್ತಲಾಗೂ ಕತ್ತಲಾಯ್ತೊ ||

ಉತ್ತರದು ದೇಶದಲ್ಲಿ ಬೆಳಕನಾನು ಮಾಡಬೇಕು
|| ಸಿದ್ದಯ್ಯಾ ||
ಬೆಳಕ ನಾನು ಮಾಡಬೇಕು ಅಂತೇಳಿ ಜಲಿಜಲಿನ ಬೆವತರಂತೆ
|| ಸಿದ್ದಯ್ಯಾ ||
ಜಲಿಜಲಿನ ಬೆವರು ತಾವೆ ತೆಗೆದರಲ್ಲೋ || ಸಿದ್ದಯ್ಯಾ ||
ಬೆವರು ತಾವೇ ತೆಗೆದು ಭೂಮಿತಾಯಿಗೆ ಪಿಡಿದರಲ್ಲೋ
|| ಸಿದ್ದಯ್ಯಾ ||
ಬಿದ್ದಂತ ಬೆವರಲ್ಲಿ ಹಳ್ಳುತಾಳು ಆಯಿತಲ್ಲೋ
|| ಸಿದ್ದಯ್ಯಾ ||
ಹಳ್ಳುತಾಳು ಆಯಿತಲ್ಲೋ ಹಳ್ಳುತಿರುಳು ಕಟ್ಟಿತಲ್ಲೋ
|| ಸಿದ್ದಯ್ಯಾ ||
ಹಳ್ಳುತಿರುಳು ತೆಗೆದರಂತೆ ಅಂಗೈಯಲ್ಲಿ ಮಡಗರಲ್ಲೋ
|| ಸಿದ್ದಯ್ಯಾ ||
ಅಂಗೈಯಲ್ಲಿ ಮಡಗ್ತವ್ರು ಎಣ್ಣೆ ತಾವೇ ತೆಗೆದರಲ್ಲೋ
|| ಸಿದ್ದಯ್ಯಾ ||
ಭೂಮಿತಾಯಿ ಬಗೆದರಲ್ಲೋ ಸೊಳ್ಳು ತಾವೇ
ಮಾಡುತಾರೋ || ಸಿದ್ದಯ್ಯಾ ||
ತಮ್ಮ ಕಾವಿಬಟ್ಟೆ ಹರಿದರಲ್ಲೋ ಬತ್ತಿ ತಾವೇ
ಮಾಡುತಾರೋ || ಸಿದ್ದಯ್ಯಾ ||
ಚಕಮುಕಿಯು ಹೊಡಿತಾರೆ ಪರಂಜ್ಯೋತಿ ಎತ್ತುತಾರೆ
|| ಸಿದ್ದಯ್ಯಾ ||
ಹತ್ತು ಬೆಳ್ಳಿತ್ತಿ ಜ್ಯೋತಿಗೆ ಕೈ ಮುಗಿತಾರೆ || ಸಿದ್ದಯ್ಯಾ ||
ಜ್ಯೋತಿಲಿಂಗಯ್ಯಾ ಅನ್ನುತೇಳಿ ನಾಮಕರಣ ಕರೀತಾರೆ
|| ಸಿದ್ದಯ್ಯಾ ||
ವಲ್ಲೂರ ನಿನ್ನಲ್ಲಿ ಬೇಡ ವಂಚನೆ ನಿನ್ನಲ್ಲಿ ಬೇಡ
|| ಸಿದ್ದಯ್ಯಾ ||
ದೊಡ್ಡೋರ ಮನೆಗೂ ಜ್ಯೋತಿಯಾಗು

ಬಡೋರ ಮನೆಗೂ ಜ್ಯೋತಿಯಾಗು ॥ ಸಿದ್ದಯ್ಯಾ ॥
ಯೆತ್ತಮನೆಗೂ ಜ್ಯೋತಿಯಾಗು ನೀಸತ್ತಮನೆಗೂ
ಜ್ಯೋತಿಯಾಗು ॥ ಸಿದ್ದಯ್ಯಾ ॥
ವೊಲಯನ್ಮನೆಗೂ ಜ್ಯೋತಿಯಾಗು ಮಾದಗನ್ಮನೆಗೂ
ಜ್ಯೋತಿಯಾಗು ॥ ಸಿದ್ದಯ್ಯಾ ॥
ನೀ ಆದಿಗೂ ಜ್ಯೋತಿಯಾಗು ಬೀದಿಗೂ ಜ್ಯೋತಿಯಾಗು
॥ ಸಿದ್ದಯ್ಯಾ ॥
ಹೇಳಿಬುಟ್ಟೆ ನನ್ನ ಗುರುವೆ ಮುಂದಿನ ದಿಟ್ಟೆ ಮಡುಗುತಾರೆ
॥ ಸಿದ್ದಯ್ಯಾ ॥
ನಾನೆಹೆಚ್ಚು ಅನ್ನುತೀತಿ ನನಗೆ ಹೆಚ್ಚಿನವರು
॥ ಸಿದ್ದಯ್ಯಾ ॥
ನನಗಿಂತ ಹೆಚ್ಚಿನವರು ದೊಡ್ಡ ಬಸವಣ್ಣನವರು
॥ ಸಿದ್ದಯ್ಯಾ ॥
ದೊಡ್ಡ ಬಸವಣ್ಣನವರು ಕಲ್ಯಾಣದಲ್ಲಿ ಇರುವರು
॥ ಸಿದ್ದಯ್ಯಾ ॥
ಕಲ್ಯಾಣಕ್ಕೆ ಹೋಗಿ ನಾನು ಅವರ ನಿಜವನ್ನು ನೋಡಬೇಕು
॥ ಸಿದ್ದಯ್ಯಾ ॥
ಅವರ ನಿಜವನ್ನು ನೋಡಬೇಕು ಅವರ ಸತ್ಯವನ್ನು
ನೋಡಬೇಕು ॥ ಸಿದ್ದಯ್ಯಾ ॥
(ಸಶೇಷ)

## ಜಾನಪದ ಕಲೆಗಳು

ಸುಗ್ಗಿಕುಣಿತ, ಮಾರಿಕುಣಿತ, ಕಡ್ಡಿವರಸೆ, ಕೋಲಾಟ, ಪಟಾವರಸೆ, ಪಂಜಿನ ಭರಾಟೆ, ಹುಲಿಕುಣಿತ, ಕರಗ ನೃತ್ಯ ಇವು ಹುಲ್ಲಹಳ್ಳಿಯ ಪ್ರಮುಖ ಜಾನಪದ ಕಲೆಗಳಾಗಿವೆ.

ಹರಿಜನರ ಮುಳ್ಳೂರಯ್ಯ ಮತ್ತು ಕಳ್ಳಂಜಯ್ಯ (ಇವರು ಈಗಿಲ್ಲ) ಎಂಬುವರು ಪಟಾವರಸೆ ಮತ್ತು ಪಂಜಿನಭರಾಟೆ ಎಂಬ ಸಾಹಸಮಯ ಕಲೆಯಲ್ಲಿ ನಿಸ್ಸೀಮರಾಗಿದ್ದರು. ಮುಳ್ಳೂರಯ್ಯನು ಹುಲಿ ಶಿಕಾರಿಯಲ್ಲಿ ಚಾಮುಂಡನಾಯ್ಕನಿಗೆ ಸಹಕಾರಿಯಾಗಿದ್ದನು. ಈತನ ಹೆಸರು ಈಗಲೂ ಚಿರಸ್ಥಾಯಿಯಾಗಿದೆ. ಇಂದು ಕುಂಡಯ್ಯನ ತಿಬ್ಬಯ್ಯ ಮತ್ತು ವಸ್ತಾದ್

ಮೊಣ್ಣಯ್ಯ ಮೊದಲಾದವರು ಕಡ್ಡಿವರಸೆ ಮತ್ತು ಪಂಜಿನ ಭರಾಟೆಯಲ್ಲಿ ಪಳಗಿದ್ದಾರೆ. ಈ ಹರಿಜನರಿಗೆ ಬಯಲು ನಾಟಕದಲ್ಲೂ ಗೀಳುಂಟು ಸಿದ್ದಯ್ಯ, ತಿಬ್ಬಯ್ಯ ಚಿಕ್ಕಾಸಯ್ಯ, ಚಿಕ್ಕತಿಬ್ಬಯ್ಯ ಮೊದಲಾದವರು ಕಲಾವಿದರು. ಇವರಲ್ಲಿ ಹಾರ್ಮೋನಿಯಂ ಮತ್ತು ತಬಲವನ್ನು ನುಡಿಸು ವವರೂ ಇದ್ದಾರೆ. ಪುಟ್ಟಸ್ವಾಮಯ್ಯ ಮತ್ತು ಕಾಳಮಾದನ ಜವರಯ್ಯ ನಾಟಕ ಕಲಿಸುವ ಮೇಷ್ಟರಾಗಿದ್ದರು.

ಸುಗ್ಗಿಕುಣಿತ, ಮಾರಿಕುಣಿತ, ಜನಪದಗೀತೆಗಳಲ್ಲಿ ನಾಯಕ ಪರಿವಾರದವರು ಪರಿಶ್ರಮವನ್ನು ಪಡೆದಿದ್ದಾರೆ. ಹುಲ್ಲಹಳ್ಳಿಯ ಸುಗ್ಗಿ ಕುಣಿತ ಮತ್ತು ಮಾರಿಕುಣಿತಗಳು ಕರ್ನಾಟಕ ರಾಜ್ಯಕ್ಕೆ ಕೀರ್ತಿಯನ್ನು ತಂದುಕೊಟ್ಟಿವೆ.



ಹುಲ್ಲಹಳ್ಳಿಯ ಹುಲಿ : ಚಾಮುಂಡನಾಯಕ ಹುಲಿಯನ್ನು
ಎದುರಿಸುತ್ತಿರುವುದು



ಪೇಶ್ ಇಮಾಂ ಮಹಮದ್ ಜಾಫರ್



ಶ್ರೀನಾಲ್ವಡಿ ಕೃಷ್ಣರಾಜ ಒಡೆಯರು

# 13. ಹುಲ್ಲಹಳ್ಳಿಯ ಕಥೆಗಳು

## 1. ಪೇಶ್ ಇಮಾಂ

ಮುಸ್ಲಿಂ ಜನಾಂಗವು ತಮ್ಮ ಧಾರ್ಮಿಕ ಗುರುವನ್ನು ಗೌರವದಿಂದ ಸಂಬೋಧಿಸುವ ಹೆಸರು, 'ಪೇಶ್ ಇಮಾಂ'.

ಗುರುವನ್ನು ಸರ್ವಧರ್ಮಗಳೂ ಸಾಕ್ಷಾತ್ ಪರಬ್ರಹ್ಮನೆಂದೇ ವರ್ಣಿಸುತ್ತವೆ. ಇಂತಹ ಪೂಜನೀಯ ಗುರುಸ್ಥಾನವನ್ನು ಚಿಕ್ಕಂದಿನಲ್ಲೇ ಅಲಂಕರಿಸಿ ತಮ್ಮ ಮುಪ್ಪಿನವರೆಗೂ ನಿರಪೇಕ್ಷ ಭಾವದಿಂದ ನಿರ್ವಹಿಸಿ ಕೊಂಡು ಬರುತ್ತಿರುವ ಏಕಮಾತ್ರ ವ್ಯಕ್ತಿಯೆಂದರೆ ಹುಲ್ಲಹಳ್ಳಿಯ ಪೇಶ್ ಇಮಾಂ ಮಹಮುದ್ ಜಾಫರ್ ಅವರು.

1915 ರಲ್ಲಿ ಪ್ರಸಿದ್ಧ ಪಿಡಬ್ಲ್ಯುಡಿ ಕಂಟ್ರಾಕ್ಟರ್ ಮಹಮುದ್ ಬುಡಾನ್‌ಸಾಬ್ ಮತ್ತು ಜೈನಬ್ಬೀ ಇವರಿಗೆ ಎರಡನೆಯ ಮಗನಾಗಿ ಮಹಮುದ್‌ಜಾಫರ್ ಜನ್ಮವೆತ್ತಿದರು. ಬಾಲಕ ಜಾಫರ್‌ನನ್ನು ಬುಡಾನ್ ಸಾಹೇಬರು ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಕಳುಹಿಸಿಕೊಟ್ಟರು. ಲಖ್ನೌ ನಿಂದ ಮೈಸೂರಿಗೆ ಬಂದು ನೆಲೆಸಿದ್ದ ಮೌಲ್ವಿ ಅಬ್ದುಲ್ ಸತ್ತಾರ್‌ಸಾಬ್ ಎಂಬುವರು ಮಹಮುದ್‌ಜಾಫರನಿಗೆ ವಿದ್ಯಾಗುರುಗಳಾದರು. ಈ ಗುರು ಗಳಿಂದ ಜಾಫರನು ಅರಬ್ಬೀ ಭಾಷೆ ಮತ್ತು ಕುರಾನ್ ಗ್ರಂಥವನ್ನು ಅಭ್ಯಾಸಮಾಡಿ ಮೌಲ್ವಿ ವಿದ್ಯೆಯನ್ನು ಗಳಿಸಿದನು. ಜಾಫರನು ಗುರುವಿನ ಆಶೀರ್ವಾದ ಮತ್ತು ಅಪ್ಪಣೆಯನ್ನು ಪಡೆದು, ಹುಲ್ಲಹಳ್ಳಿಗೆ ಬಂದು ತನ್ನ ಇಪ್ಪತ್ತನೇ ವಯಸ್ಸಿನಲ್ಲಿ ಅಂದರೆ 1935 ರಲ್ಲಿ ಮಸೀದಿಯ ಪೇಶ್‌ಇಮಾಂ ಆಗಿ ಕಾರ್ಯವನ್ನು ನಿರ್ವಹಿಸಲು ಪ್ರಾರಂಭಿಸಿದರು. ತಂದೆ ಬುಡಾನ್ ಸಾಬ್ ಅವರು ತಮ್ಮ ಮಗನಿಗೆ ಹುಲ್ಲಹಳ್ಳಿಯಲ್ಲೇ ಜಮೀನ್ದಾರರಾಗಿದ್ದ ಸುಲ್ತಾನ್ ಮೋದಿನ್ ಸಾಬರ ಮಗಳಾದ ಪ್ಯಾರೀಜಾನ್ ಎಂಬ ಹುಡುಗಿ ಯನ್ನು ಮದುವೆ ಮಾಡಿದರು.

ಮಹಮುದ್‌ಜಾಫರರು ಸಂಸಾರದ ನಿರ್ವಹಣೆಗಾಗಿ ಬಟ್ಟೆ ಹೊಲಿ ಯುವ ಕೆಲಸ ಮಾಡುತ್ತಿದ್ದರು. ಸ್ವಲ್ಪ ದಿನಗಳಲ್ಲಿ ಸಣ್ಣದಾಗಿ ಒಂದು ಬಟ್ಟೆ ಅಂಗಡಿಯನ್ನೂ ತೆರೆದರು. ಇಷ್ಟಾದರೂ ಇವರ ಮನಸ್ಸು ಸಾಂಸಾ ರಿಕ ಸುಖಕ್ಕಿಂತ ಹೆಚ್ಚಾಗಿ ಅಲ್ಲಾನ ಕಡೆಗೇ ಇರುತ್ತಿತ್ತು. ಹುಲ್ಲಹಳ್ಳಿಯ

ಮಸೀದಿಯು ನಾಲಾದಂಡೆಯಿಂದ ಊರ ಮಧ್ಯಕ್ಕೆ ಸ್ಥಳಾಂತರಿಸಲ್ಪಟ್ಟಾಗಲೂ ಮತ್ತು ನಾಡಹೆಂಚಿನ ಮನೆಯಿಂದ ಸುಂದರವೂ ಭವ್ಯವೂ ಆದ ಮಂದಿರವಾಗಿ ಪರಿಣಮಿಸಿದಾಗಲೂ ಮಹಮದ್‌ಜಾಫರ್‌ರವರೇ ಪೇಶ್ ಇಮಾಂ ಆಗಿ ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿದ್ದರು. 1935 ರಿಂದ 1970ರ ವರೆಗೂ ಯಾವುದೇ ಸಂಭಾವನೆ ಇಲ್ಲದೆ ಅಲ್ಲಾನ ಮತ್ತು ತಮ್ಮ ಸಮಾಜದ ಸೇವೆಯನ್ನು ಮಾಡಿದರು. ಇವರಿಗೆ ಈಗಾಗಲೇ 4 ಮಂದಿ ಗಂಡು ಮಕ್ಕಳೂ, 4 ಮಂದಿ ಹೆಣ್ಣು ಮಕ್ಕಳೂ ಜನಿಸಿದ್ದರು. ಮೊದಲಿನಿಂದಲೂ ಬಡತನವನ್ನೇ ಅನುಭವಿಸುತ್ತಿದ್ದ ಇವರಿಗೆ ಆರ್ಥಿಕವಾಗಿ ತೊಂದರೆಯಾಗಲು ತಮ್ಮ ಮನೆಯನ್ನು ಮತ್ತು ಅಲ್ಪ ಸ್ವಲ್ಪವಿದ್ದ ಗದ್ದೆಯನ್ನೂ ಮಾರಿ ಹೆಂಡತಿ ಮಕ್ಕಳೊಂದಿಗೆ ಮೈಸೂರು ನಗರವನ್ನು ಸೇರಿ ಒಂದು ಬಾಡಿಗೆ ಮನೆಯಲ್ಲಿ ವಾಸಿಸಲಾರಂಭಿಸಿದರು. ಇಂದು ಇವರ ಗಂಡು ಮಕ್ಕಳು ಸಂಪಾದನಾ ಮಾರ್ಗವನ್ನು ಕಂಡುಕೊಂಡಿದ್ದಾರೆ.

ಮಹಮದ್‌ಜಾಫರರು ಮೈಸೂರಿಗೆ ಬಂದ ಒಂದು ವರ್ಷದ ನಂತರ 'ಮಿರಾನ್‌ಬೇಗ್ ಮಸೀದಿ'ಯಲ್ಲಿ ಪೇಶ್‌ಇಮಾಂ ಸ್ಥಾನವು ಖಾಲಿಯಾಯಿತು. ಅಲ್ಲಿಯ ಮೇಲ್ವಿಚಾರಕರು ಈ ಜಾಫರರನ್ನು ಪ್ರಾರ್ಥಿಸಿಕೊಳ್ಳಲು, ಇವರಿಗೆ ಸಂಸಾರದ ಬವಣೆಯಿದ್ದರೂ ಅಲ್ಲಾನ ಕಡೆಗೇ ಹೆಚ್ಚಿನ ಒಲವು ಇದ್ದುದರಿಂದ ಪೇಶ್‌ಇಮಾಂ ಆಗಿರಲು ಒಪ್ಪಿಕೊಂಡರು.

197? ರಿಂದ ಹನ್ನೆರಡು ವರ್ಷಗಳ ಕಾಲ ಮಿರಾನ್‌ಬೇಗ್ ಮಸೀದಿಯಲ್ಲಿಯೂ ಧರ್ಮಾರ್ಥವಾಗಿ ಅಂದರೆ ಸಂಭಾವನೆಯಿಲ್ಲದೇ ಸೇವೆಯನ್ನು ಸಲ್ಲಿಸಿದರು. ಒಂದು ದಿನ ಮಸೀದಿಯ ಮೆಟ್ಟಿಲುಗಳನ್ನು ಇಳಿಯುತ್ತಿದ್ದಾಗ ಕಾಲು ಜಾರಿಬಿದ್ದು ಸೊಂಟದ ಮೂಳೆಗೆ ತುಂಬಾ ಪೆಟ್ಟಾಯಿತು. ಒಂದು ವರ್ಷಕಾಲ ಚಿಕಿತ್ಸೆ ಮತ್ತು ವಿಶ್ರಾಂತಿಯನ್ನು ಪಡೆದರು. ಅಲ್ಲಾನ ದಯದಿಂದ ಈಗ ಗುಣಮುಖರಾಗಿ ನಡೆದಾಡುವಂತಾಗಿದ್ದಾರೆ.

ಮೈಸೂರಿನ ಸಾತಗಹಳ್ಳಿ ಪಾಳ್ಯ (ಮಹಮದ್ ನಗರ) ದಲ್ಲಿ ಸಣ್ಣದೊಂದು ಮನೆಯನ್ನು ಕಟ್ಟಿಕೊಂಡು ತಮ್ಮ ಕಡೆಯ ಮಗನಾದ ಏಜಾಸ್ ಅಹ್ಮದ್ ಖುರೇಷಿಯ ಬಳಿ ವಾಸವಾಗಿರುತ್ತಾರೆ. 1984 ರಿಂದ ಇವರು ಈಗ ವಾಸಿಸುತ್ತಿರುವ ಪಾಳ್ಯದ ಮಸೀದಿಯಲ್ಲಿ ಪೇಶ್‌ಇಮಾಂ ಆಗಿದ್ದಾರೆ. ಈ ಪಾಳ್ಯವು ಹೊಸ ಬಡಾವಣೆಯಾಗಿರುವುದರಿಂದ ಮಸೀದಿಗಾಗಿಯೇ

ಪ್ರತ್ಯೇಕ ಕಟ್ಟಡವಿಲ್ಲದಿದ್ದರೂ ಒಂದು ಸಣ್ಣ ಮನೆಯಲ್ಲಿ ಪ್ರಾರ್ಥನಾದಿಗಳನ್ನು ಜಾಫರರು ನಡೆಸುತ್ತಿದ್ದಾರೆ.

ಮುಸ್ಲಿಂ ಸಮಾಜವು ಮಹಮದ್‌ಜಾಫರ್ ಅವರಿಗೆ ಸಂಭಾವನೆ ಕೊಡುತ್ತೇವೆಂದರೂ ಸ್ವೀಕರಿಸಲು ಇಷ್ಟವಿಲ್ಲದ ಎಪ್ಪತ್ತೆರಡು ವರ್ಷದ ಈ ವೃದ್ಧರು 'ಅಲ್ಲಾನ ಸೇವೆಗೆ ಹಣ ಪಡೆದರೆ ಅದು ಪೂಜೆ ಎನಿಸುವುದಿಲ್ಲ' ಎನ್ನುತ್ತಾರೆ.

ತಮ್ಮ ಇಪ್ಪತ್ತನೆಯ ವಯಸ್ಸಿನಿಂದ ಈವರೆಗೂ ತಮ್ಮನ್ನು ಅಲ್ಲಾನ ಮತ್ತು ಮುಸ್ಲಿಂ ಸಮಾಜದ ಸೇವೆಗೆ ತೊಡಗಿಸಿಕೊಂಡಿರುವ ಇವರು ತಮ್ಮ ಮುಂದಿನ ದಿನಗಳನ್ನೂ ಈ ರೀತಿಯ ಸೇವೆಗೇ ಮೀಸಲಿಟ್ಟಿದ್ದಾರೆ.

ಅಲ್ಲಾನ ಅಸಾಮಾನ್ಯ ಭಕ್ತರೂ, ನಿಸ್ವಾರ್ಥ ನಿರಾಡಂಬರ ವ್ಯಕ್ತಿಯೂ ಆದ ಪೇಶ್‌ಇಮಾಂ ಮಹಮದ್‌ಜಾಫರ್ ಅವರು ಎಲ್ಲಿದ್ದರೇನಂತೆ? ಇವರು ನಮ್ಮ ಹುಲ್ಲಹಳ್ಳಿಯವರು ಎಂಬುದೇ ನಮಗೆ ಹೆಮ್ಮೆ ಮತ್ತು ಗೌರವ. ಇವರಿಗೂ ಇವರ ಕುಟುಂಬದವರಿಗೂ ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕೊಟ್ಟು ಕರುಣಿಸಲಿ ಎಂದು ಅಲ್ಲಾನನ್ನು ಪ್ರಾರ್ಥಿಸೋಣ.

## 2. ಹುಲ್ಲಹಳ್ಳಿಯ ಹುಲಿ

ಭವ್ಯವಾದ ದೇವಾಲಯ. ಗರ್ಭಗುಡಿಯಲ್ಲಿ, ಭಕ್ತರ ಅಭೀಷ್ಟಗಳನ್ನು ಪೂರೈಸುವ ಶ್ಯಾಮಲ ವರ್ಣದ ಶ್ರೀ ವರದರಾಜಸ್ವಾಮಿಯು ದಿವ್ಯಾಭರಣಗಳಿಂದಲೂ, ಹಲವು ಸುಗಂಧ ಪುಷ್ಪಹಾರಗಳಿಂದಲೂ, ಅಲಂಕೃತನಾಗಿ, ಶಂಖ ಚಕ್ರ ಗದಾಧಾರಿಯೂ, ಮೀನಕುಂಡಲ ಧಾರಿಯೂ, ಪೀತಾಂಬರ ಧಾರಿಯೂ, ಊರ್ಧ್ವಪುಂಡ್ರಧಾರಿಯೂ, ಅಭಯ ಹಸ್ತ ಶೋಭಿತನೂ ಹಾಗೂ ಹಸನ್ಮುಖಿಯೂ ಆಗಿ ಕಂಗೊಳಿಸುತ್ತಿರಲು; ಮುಂದಿನ ಪ್ರಾಂಗಣದಲ್ಲಿ ಭರ್ಜಿ, ಖಡ್ಗ ಮೊದಲಾದ ಆಯುಧಗಳನ್ನೂ ಮತ್ತು ಬಲೆಗಳನ್ನೂ, ಭೇರಿ ಮೊದಲಾದ ವಾದ್ಯ ವಿಶೇಷಗಳನ್ನೂ ಹಿಡಿದು ಭಕ್ತಿಯಿಂದ ಶ್ರೀ ವರದರಾಜಸ್ವಾಮಿಯ ಅನುಗ್ರಹವನ್ನೇ ಎದುರು ನೋಡುತ್ತಾ ಬೇಟೆಗಾರರ ಪಡೆಯೊಂದು ಎರಡು ಸಾಲುಗಳಲ್ಲಿ ಎದುರು ಬದುರಾಗಿ ಮುಕುಳಿತ ಹಸ್ತದಿಂದ ನಿಂತಿದ್ದರು.

ಬೇಟೆಗಾರರ ಪಡೆಯು ಈ ಸಾಲಿನ ಅಗ್ರಭಾಗದಲ್ಲಿ ದೇವತಾ ಮೂರ್ತಿಯ ಮುಂಭಾಗದಲ್ಲಿ ಅತುಲಭುಜಬಲನೂ, ಶ್ರೀ ವರದರಾಜ ಸ್ವಾಮಿಯ ಭಕ್ತಾಗ್ರಣಿಯೂ ಆದ ಬೇಟೆಗಾರರ ನಾಯಕನಾದ ಚಾಮುಂಡನಾಯಕನು ಕೈಮುಗಿದು ನಿಂತು, ಕಣ್ಮುಚ್ಚಿ ಧ್ಯಾನಾಸಕ್ತ ನಾಗಿ ತನ್ನ ಹೃದಯ ಕಮಲದಲ್ಲಿ ಶ್ರೀ ವರದರಾಜಸ್ವಾಮಿಯ ದಿವ್ಯ ಮೂರ್ತಿಯನ್ನು ನಿಲ್ಲಿಸಿ ಮನಸ್ಸಿನಲ್ಲಿಯೇ 'ಹೇ ! ವರದರಾಜ, ತೃಣಪುರೀ ನಿವಾಸ, ನಾವಿಂದು ಕೈಗೊಳ್ಳುವ ಹುಲಿಯ ಬೇಟೆಯು ಯಶಸ್ವಿಯಾಗಲಿ, ವರವನ್ನು ಕರುಣಿಸು.' ಎಂಬುದಾಗಿ ಪ್ರಾರ್ಥಿಸುತ್ತಾ ತನ್ನ ಮುಗಿದ ಹಸ್ತ ವನ್ನು ಬಿಡಿಸಿ ದೇವರತ್ತ ಚಾಚಿದನು. ಕೂಡಲೇ ಶ್ರೀ ವರದರಾಜ ಸ್ವಾಮಿಯ ಶಿರದಲ್ಲಿದ್ದ ಸೇವಂತಿಗೆ ಹೂವೊಂದು ಹಾರಿ ಬಂದು ಚಾಮುಂಡ ನಾಯಕನ ಹಸ್ತದಲ್ಲಿ ಬಿದ್ದಿತು. ಈ ಸುಂದರ ದೃಶ್ಯವನ್ನು ಕಂಡ ಬೇಟೆ ಗಾರರ ಪಡೆಯು ಹರ್ಷೋದ್ಗಾರದಿಂದ, 'ಶ್ರೀ ವರದರಾಜನಿಗೆ ಜೈ!... ಭಕ್ತೋದ್ಧಾರನಿಗೆ ಜೈ!.... ತೃಣಪುರಾಧೀಶನಿಗೆ ಜೈ!...'-ಎಂಬುದಾಗಿ ದೇವಾಲಯದಲ್ಲಿ ಪ್ರತಿಧ್ವನಿಸುವಂತೆ ಜಯಕಾರ ಮಾಡಿತು.

ಎಚ್ಚೆತ್ತ ಚಾಮುಂಡನಾಯಕನು ಶ್ರೀ ವರದರಾಜನ ಅನುಗ್ರಹಕ್ಕೆ ಸುಪ್ರೀತನಾಗಿ ಆ ಜಗನ್ಮೋಹಕ ಮೂರ್ತಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು.

ಮೈಸೂರು ಜಿಲ್ಲೆಯ ನಂಜನಗೂಡಿನ ಪಶ್ಚಿಮ ಭಾಗದಲ್ಲಿ ಸುಮಾರು ಹನ್ನೆರಡು ಕಿ.ಮೀ. ದೂರದಲ್ಲಿರುವ ಹುಲ್ಲಹಳ್ಳಿಯು ಅಂದು ನಿಸರ್ಗದತ್ತ ವನರಾಜಿಯಿಂದ ಮನೋಹರವಾಗಿ ತೃಣಪುರಿ ಎಂಬ ಹೆಸರಿನಿಂದ ಪ್ರಸಿದ್ಧ ವಾಗಿತ್ತು. ಇಲ್ಲಿ ಅಸಂಖ್ಯ ಹುಲ್ಲೆಗಳು ನಿರ್ಭಯವಾಗಿ ಓಡಾಡಿಕೊಂಡಿ ದ್ದವು. ಹುಲ್ಲಹಳ್ಳಿಯಲ್ಲಿದ್ದ ಸಾಧು, ಸನ್ಯಾಸಿಗಳು ಮತ್ತು ಮಠಾಧೀಶರು ಹುಲ್ಲೆಗಳನ್ನು ಸಾಕಿ, ಬೆಳೆಸಿಕೊಂಡು ಬರುತ್ತಿದ್ದ ಸಂಪ್ರದಾಯವನ್ನೇ ಇಲ್ಲಿನ ಜನರೂ ಮುಂದುವರಿಸಿಕೊಂಡು ಬಂದಿದ್ದರು. ಇಂತಹ ಮುಗ್ಧ ಹುಲ್ಲೆಗಳು ಒಮ್ಮೊಮ್ಮೆ ಹುಲಿಯ ಬಾಯಿಗೆ ತುತ್ತಾಗುತ್ತಿದ್ದವು. ಇದನ್ನು ನಿವಾರಿಸಲು ಪ್ರಯತ್ನಿಸಿದ ಕಪ್ಪಸೋಗೆ ಗ್ರಾಮದ ಭೈರನಾಯ್ಕ, ಚಿಕ್ಕ ನಾಯ್ಕ ಹಾಗೂ ಇನ್ನಿಬ್ಬರು ಹುಲಿಯ ಬಾಯಿಗೆ ತುತ್ತಾಗಿದ್ದರು. ಭಯ ಗೊಂಡ ಜನರು ತಮ್ಮ ಮಹಾರಾಜರಿಗೆ ಮೊರೆಯಿಟ್ಟರು. ಪ್ರಜಾವತ್ಸಲ ರಾದ ಮೈಸೂರು ಸಿಂಹಾಸನಾಧೀಶ್ವರ ಶ್ರೀ ಶ್ರೀ ನಾಲ್ವಡಿಕೃಷ್ಣರಾಜ

ಒಡೆಯರ್ ಅವರು ಆ ಕ್ರೂರ ಹುಲಿಯನ್ನು ಸಂಹರಿಸಲು ಆಗಮಿಸಿದ್ದರು. ಹುಲಿ ಶಿಕಾರಿಯಲ್ಲಿ ಹೆಸರು ಗಳಿಸಿ, ಧೈರ್ಯ ಶೌರ್ಯಾದಿಗಳಿಗೆ ಆಗರ ವಾಗಿದ್ದ ಹುಲ್ಲಹಳ್ಳಿಯ ಚಾಮುಂಡನಾಯ್ಕನನ್ನೂ ಮೈಸೂರು ಒಡೆಯರು ಹುಲಿಯ ಬೇಟೆಗಾಗಿ ಆಹ್ವಾನಿಸಿದ್ದರು.

ಹುಲ್ಲಹಳ್ಳಿ ಒಂದು ಸಣ್ಣ ಗ್ರಾಮವಾದರೂ ವೀರರ ಭೂಮಿ. ಹಿಂದಿನ ಹೊಯ್ಸಳ ಮತ್ತು ವಿಜಯನಗರದ ಚಕ್ರವರ್ತಿಗಳು ನಡೆಸುತ್ತಿದ್ದ ಯುದ್ಧಗಳಲ್ಲಿ ಹುಲ್ಲಹಳ್ಳಿಯ ವೀರರೂ ಭಾಗವಹಿಸುತ್ತಿದ್ದರು. ಅದೇ ಪರಂಪರೆಯಲ್ಲಿ ಬಂದ ಚಾಮುಂಡನಾಯಕನೂ ಮೈಸೂರು ಒಡೆಯರಿಗೆ ಹುಲಿ ಶಿಕಾರಿಯಲ್ಲಿ ಸಹಾಯಕನಾಗಿ ಹೊರಟು ಹುಲ್ಲಹಳ್ಳಿಯ ಶ್ರೀ ವರದ ರಾಜಸ್ವಾಮಿಯ ಅನುಗ್ರಹವನ್ನು ಪಡೆದನು.

ಹುಲ್ಲಹಳ್ಳಿಯ ರಾಜ ಸೇವಾಸಕ್ತ ಪರಿವಾರ ಜನಾಂಗದ ನಾಯಕನೇ ಚಾಮುಂಡನಾಯಕ. ಈತನದು ಎತ್ತರವಾದ ಆಕೃತಿ, ವಿಶಾಲವಾದ ಉರ ಪ್ರದೇಶ, ಅಗಲವಾದ ಮುಖದ ಎರಡೂ ಕೆನ್ನೆಗಳ ಅರ್ಧಭಾಗ ಆವರಿಸಿದ್ದ ದೊಡ್ಡ ಮೀಸೆ, ಕಾಂತಿಯನ್ನು ಹೊರ ಸೂಸುವ ಕಣ್ಣುಗಳು, ಗಂಭೀರ ವಾದ ನಡಿಗೆ. ಅರ್ಧ ಅಡಿ ಮುಂದದ ಗಿರ್ಕಿ ಚಡಾವನ್ನು ಮೆಟ್ಟಿ ನಡೆಯು ತ್ತಿದ್ದರೆ, 'ಇದು ಚಾಮುಂಡನಾಯಕನದೇ ನಡಿಗೆ'—ಎಂದು ಜನರು ಊಹಿಸುವಷ್ಟು ಜನಮನದಲ್ಲಿ ಚಿರಸ್ಥಾಯಿಯಾಗಿದ್ದ ಈ ಚಾಮುಂಡ ನಾಯಕನು ಕ್ಷಾತ್ರ ತೇಜಸ್ಸಿನಿಂದ ಬೆಳಗುತ್ತಿದ್ದನು.

ಚಾಮುಂಡನಾಯಕನು ಹುಲಿಯ ಬೇಟೆಗೆ ಸಿದ್ಧನಾಗಿ ತನ್ನ ಪಡೆ ಯೊಂದಿಗೆ ದೇವಾಲಯದಿಂದ ಹೊರಟು ಶ್ರೀ ಮಹಾರಾಜರ ಬಿಡಾರವಾದ ರತ್ನಪುರಿ ಕೋಟೆಯನ್ನು ತಲುಪಿದನು. ಕಾಡಿನ ಸುತ್ತಲೂ ಬಲೆಯನ್ನು ನೆಡಲಾಯಿತು. ಕಾಡಿನ ಒಂದು ಭಾಗದಲ್ಲಿ ಮಹಾರಾಜರಿಗೆಂದು ವಿಶೇಷ ವಾದ ಒಂದು ಎತ್ತರದ ಅಟ್ಟವನ್ನು ನಿರ್ಮಿಸಲಾಯಿತು. ಮಹಾರಾಜರು ಬಂದೂಕುಧಾರಿಗಳಾಗಿ ಆ ಅಟ್ಟದಲ್ಲಿ ಆಸೀನರಾದರು. ಬೇಟೆಗಾರರು ಚರ್ಮವಾದ್ಯಗಳನ್ನು ಬಾರಿಸುತ್ತಾ ಕಾಡಿನ ಒಂದೆಡೆಯಿಂದ ಮತ್ತೊಂದೆ ಡೆಗೆ ಬರುತ್ತಿದ್ದರು. ವಾದ್ಯವನ್ನು ಕೇಳಿದ ಕೂಡಲೇ ಪೊದೆಯ ಮರೆ ಯಲ್ಲಿ ಅಡಗಿದ್ದ ಹುಲಿಯು ಹೊರಬಂದು ಬೇಟೆಗಾರರ ಸಮೂಹವನ್ನು ನೋಡಿ ಅವರಿಗೆ ಕಂಡೂ ಕಾಣಿಸದಂತೆ ಮರೆಯಾಯಿತು. ಹೀಗೆ ಹಲವು ಬಾರಿ ಒಮ್ಮೆ ಕಾಣಿಸಿ, ಮತ್ತೊಮ್ಮೆ ಮರೆಯಾಗುತ್ತಿತ್ತು. ಆ ಒಂದು

ಕ್ಷಣದಲ್ಲಿ ಕಂಡ ಹುಲಿಯ ಆಕೃತಿಯು ಬೇಟೆಗಾರರಿಗೆ ದಿಗ್ಭ್ರಾಂತಿಯ ನ್ನುಂಟುಮಾಡಿತ್ತು. ಅದರ ಉದ್ದ ಬಾಲದ ತುದಿಯಿಂದ ಮುಖದವರೆಗೆ ಹದಿನೈದು ಅಡಿಯನ್ನು ಮೀರಿತ್ತು. ಅದರ ಶರೀರವನ್ನು ಒಬ್ಬ ಗಂಡಾಳು ತಬ್ಬಲಾರದಷ್ಟು ಗಾತ್ರವಾಗಿತ್ತು. ಬೆಂಕಿಯ ಕಿಡಿಗಳನ್ನು ಹೊರಸೂಸುವ ಮಿಂಚಿನ ಕಣ್ಣುಗಳು, ಒಮ್ಮೆ ತನ್ನ ಪಂಜವನ್ನು ಅರಳಿಸಿದರೆ ಘೋರ ಕೃಷ್ಣಸರ್ಪವೊಂದು ಹೆಡೆ ಬಿಚ್ಚಿದಂತೆ ಕಾಣುತ್ತಿತ್ತು. ಮೈಮೇಲಿನ ಕಪ್ಪು ಪಟ್ಟೆಗಳು ಕಾಲಯಮನ ಮೀಸೆಯನ್ನು ಹೋಲುತ್ತಿದ್ದುವು. ಇಂತಹ ರಕ್ಕಸ ಹುಲಿಯನ್ನು ಬೇಟೆಯಾಡುವುದೂ, ಮೃತ್ಯುವಿನ ಬಾಯಿಗೆ ಹೋಗುವುದೂ ಒಂದೇ ಎನಿಸುವಂತಿತ್ತು.

ಅಟ್ಟದ ಮೇಲೆ ಕುಳಿತು ಕಾಡಿನ ಸುತ್ತಲೂ ಕಣ್ಣಾಡಿಸುತ್ತಿದ್ದ ನಾಲ್ವಡಿ ಕೃಷ್ಣರಾಜಒಡೆಯರು ಹುಲಿಯನ್ನು ಕಂಡ ಕೂಡಲೇ ಬಂದೂಕಿನ ಕುದುರೆಯನ್ನು ಅದುಮಿದರು. ಗುಂಡಿನ ಸದ್ದು ಕಾಡಿನಲ್ಲೆಲ್ಲಾ ಮೊಳ ಗಿತು. ಮಿಂಚಿನ ಓಟದಲ್ಲಿ ಸಾಗುತ್ತಿದ್ದ ಆ ಹುಲಿಯ ಬಾಲದ ತುದಿಗೆ ಗುಂಡು ತಾಗಿ ಮುಂದೆ ಹೋಯಿತು. ಎಂದೂ ಗುರಿ ತಪ್ಪದ ಒಡೆಯರ ಶಿಕಾರಿ ಅಂದು ಅವರನ್ನು ಅಣಕಿಸಿತು. ನೊಂದ ಹುಲಿ ಮತ್ತೂ ಉಗ್ರ ವಾಗಿ ಆರ್ಭಟಿಸುತ್ತಾ ಸಂಚರಿಸುತ್ತಿತ್ತು. ಈ ಘಟನೆಯನ್ನು ಕಂಡ ಚಾಮುಂಡನಾಯಕನಿಗೆ ರೋಷವು ಉಕ್ಕಿತು. ತನ್ನ ಒಡೆಯರಿಗಾದ ಅವ ಮಾನದಿಂದ ತತ್ತರಿಸಿದನು. 'ಆ ದುಷ್ಟ ಹೆಬ್ಬುಲಿಯನ್ನು ಸಂಹರಿಸದೇ ಹಿಂದಿರುಗುವುದಿಲ್ಲ'–ಎಂದು ಪ್ರತಿಜ್ಞೆ ಮಾಡಿದನು. ಒಡೆಯರ ಬಳಿ ಬಂದು ಶಿರಬಾಗಿ ನಮಸ್ಕರಿಸಿ, ಏಕಾಂಗ ವೀರನಾಗಿ ಆ ಹುಲಿಯೊಡನೆ ಸೆಣಸಲು ಅಪ್ಪಣೆಯನ್ನು ಬೇಡಿದನು. ಒಡೆಯರು ಚಾಮುಂಡನಾಯಕನ ಧೈರ್ಯೋ ತ್ಸಾಹವನ್ನು ಕಂಡು, 'ಆಗಬಹುದು'–ಎಂದರು.

ಚಾಮುಂಡನಾಯ್ಕನು ತನ್ನ ಇಷ್ಟ ದೈವವಾದ ತೃಣಪುರಾಧೀಶ ಶ್ರೀ ವರದರಾಜಸ್ವಾಮಿಯನ್ನು ಸ್ಮರಿಸಿ ಬಲಗೈಯಲ್ಲಿ ಭರ್ಜಿಯನ್ನು ಹಿಡಿದು, ತನ್ನ ಎಡಗೈಗೆ ಸಂಪೂರ್ಣವಾಗಿ, ಮುಂದವಾಗಿ ಬಟ್ಟೆಯನ್ನು ಸುತ್ತಿ ಬಿಗಿದು ಮುನ್ನಡೆದನು. ರಾಜಭಟರು ಮತ್ತು ಚಾಮುಂಡನಾಯಕನ ಪರಿವಾರ ದವರು ಬಹು ದೂರದಲ್ಲಿ ಅರಣ್ಯವನ್ನು ಸುತ್ತುವರಿದರು. ನಾಲ್ಕು ದಿಕ್ಕಿ ನಿಂದಲೂ ವಾದ್ಯದ ಸದ್ದು ಕೇಳಿ ಬರುತ್ತಲೇ ಇತ್ತು. ಚಾಮುಂಡ ನಾಯಕನು ಅರಣ್ಯದ ಮಧ್ಯ ಪ್ರದೇಶವಾದ ಬಯಲನ್ನು ತಲುಪಿದನು.

ಒಡೆಯರು ಅಟ್ಟದ ಮೇಲಿಂದ ಈ ಸಂಪೂರ್ಣ ದೃಶ್ಯವನ್ನು ಗಮನಿಸುತ್ತಲಿದ್ದರು. ಮನುಷ್ಯರ ರಕ್ತದ ರುಚಿಯನ್ನು ಕಂಡಿದ್ದ ಆ ಹೆಬ್ಬುಲಿಯು ಏಕಾಂಗಿಯಾಗಿ ಬರುತ್ತಿದ್ದ ಚಾಮುಂಡನಾಯಕನನ್ನು ಕಂಡೊಡನೆ ಅದರ ಬಾಯಲ್ಲಿ ನೀರೂರಿತು. ಪೊದೆಯ ಸಂದಿನಲ್ಲೇ ಒಮ್ಮೆ ಗರ್ಜಿಸಿತು. ಗರ್ಜನೆ ಬಂದತ್ತ ಚಾಮುಂಡನಾಯಕನು ತನ್ನ ದೃಷ್ಟಿಯನ್ನು ಹರಿಸಿದನು. ಹುಲಿಯ ಆ ತೀಕ್ಷ್ಣ ಕಣ್ಣುಗಳು ಪೊದೆಯ ನಡುವಿನ ಕತ್ತಲೆಯಲ್ಲಿ ಮಣಿದೀಪದಂತೆ ಕಿರಣವನ್ನು ಚೆಲ್ಲುತ್ತಿದ್ದವು. ಚಾಮುಂಡ ನಾಯಕನ ವಿಶಾಲ ನೇತ್ರದ ಕಾಂತಿಯೂ ಅಷ್ಟೇ ಪ್ರಖರವಾಗಿತ್ತು. ಎರಡು ದೃಷ್ಟಿಗಳೂ ಒಮ್ಮೆಲೆ ಸಂಧಿಸಿದೊಡನೆ ಹುಲಿಯು ಚಾಮುಂಡನಾಯಕ ನತ್ತ ಧಾವಿಸಿತು.

ಒಡೆಯರು ಗಂಭೀರ ಚಿತ್ತದಿಂದ ತಾವು ಕುಳಿತಲ್ಲಿಂದಲೇ ನೋಡು ತ್ತಿದ್ದರು. ಗುಹೆಯ ಬಾಯಿಯಂತೆ ತನ್ನ ಬಾಯಿಯನ್ನು ತೆರೆದು ಆ ಹುಲಿಯು ಚಾಮುಂಡನಾಯಕನ ಮೇಲೆರಗಿತು. ಸ್ವಲ್ಪವೂ ವಿಚಲಿತ ನಾಗದ, ಭಯಭೀತನಾಗದ ಆ ಚಾಮುಂಡನಾಯಕನು, ಬಟ್ಟೆಯನ್ನು ಸುತ್ತಿದ್ದ ಎಡಗೈಯನ್ನು ಅಡ್ಡಲಾಗಿ ಹುಲಿಯ ಬಾಯೊಳಕ್ಕೆ ತುರುಕಿ, ಬಲಗೈಯಲ್ಲಿದ್ದ ಹರಿತವಾದ ಭರ್ಜಿಯಿಂದ ಅದರ ಎದೆಯ ಭಾಗಕ್ಕೆ ಬಲ ವಾಗಿ ಚುಚ್ಚಿದನು ಆ ಭರ್ಜಿಯು ಚಾಮುಂಡನಾಯಕನ ತೋಳ್ಬಲ ವನ್ನು ಪ್ರದರ್ಶಿಸಲೋ ಎಂಬಂತೆ, ಎದೆಯಲ್ಲಿ ನಾಟಿ ಹುಲಿಯ ಬೆನ್ನಲ್ಲಿ ಹೊರಬಂದಿತು. ರೋಷಾವೃತವಾದ ಆ ಹುಲಿಯು ಚಾಮುಂಡನಾಯಕನ ಎಡಗೈಯನ್ನು ತನ್ನ ಹಲ್ಲಿನಿಂದ ಅದುಮಿ, ನಂತರ ಚೀರುತ್ತಾ ಬಿರುಗಾಳಿಗೆ ಸಿಕ್ಕಿದ ಮಹಾವೃಕ್ಷವು ಕಡಿದು ಬೀಳುವಂತೆ ನೆಲದ ಮೇಲೆ ಉರುಳಿತು.

ಅಟ್ಟದ ಮೇಲೆ ಕುಳಿತಿದ್ದ ಒಡೆಯರು, 'ಭಲೇ! ವೀರ! ಭಲೇ!' ಎಂದು ಕರತಾಡನ ಮಾಡಿದರು. ರಾಜಭಟರು ಮತ್ತು ಹುಲ್ಲಹಳ್ಳಿಯ ಬೇಟೆಗಾರರು ಒಡೆಯರ ಸಂತೋಷವನ್ನು ಅನುಮೋದಿಸಿ ಜಯಕಾರ ಮಾಡಿದರು. ಸ್ವಲ್ಪ ಕಾಲ ನೆಲದ ಮೇಲೆ ಹೊರಳಾಡಿ ಗುಡುಗಿನಂತೆ ಶಬ್ದ ಮಾಡುತ್ತಾ ಆ ಹುಲಿಯು ತನ್ನ ಪ್ರಾಣವನ್ನು ಬಿಟ್ಟಿತು.

ಶ್ರೀ ನಾಲ್ವಡಿ ಕೃಷ್ಣರಾಜಒಡೆಯರು ತಮ್ಮ ಅಟ್ಟದಿಂದಿಳಿದು ಸಾವನ್ನಪ್ಪಿದ ಹುಲಿಯ ಬಳಿಗೆ ನಡೆದರು. ಚಾಮುಂಡನಾಯಕನು ವಿಜಯೋತ್ಸಾಹದಿಂದ ಒಡೆಯರಿಗೆ ವಂದಿಸಿದನು. ಒಡೆಯರು ಆತನನ್ನು

ತಬ್ಬಿಕೊಂಡು ತಮಗಾದ ಆನಂದವನ್ನು ವ್ಯಕ್ತಪಡಿಸಿದರು. ಚಾಮುಂಡ ನಾಯಕನ ಎಡತೋಳಿನಲ್ಲಿ ರಕ್ತದ ಕಲೆಯನ್ನು ಕಂಡ ಒಡೆಯರು, 'ಚಾಮುಂಡನಾಯಕ, ಈ ರಕ್ಕಸ ಹುಲಿಯನ್ನು ಕೊಂದು ಕಾಡಿನ ಸಾಧು ಪ್ರಾಣಿಗಳನ್ನೂ, ನಮ್ಮ ಪ್ರಜೆಗಳನ್ನು ರಕ್ಷಿಸಿದ್ದೀಯೆ. ನಿನ್ನ ಧೈರ್ಯ ಶೌರ್ಯಾದಿಗಳು ನಮ್ಮ ಚಾರಿತ್ರಿಕ ವ್ಯಕ್ತಿಗಳಾದ ಹೊಯ್ಸಳ ಮತ್ತು ಟಿಪ್ಪುಸುಲ್ತಾನರನ್ನು ನೆನಪಿಗೆ ತರುತ್ತಿದೆ. ನಿನ್ನ ಈ ಪರಾಕ್ರಮಕ್ಕೆ ಮೈಸೂರಿನಲ್ಲಿ ನಡೆಯುವ ನವರಾತ್ರಿ ಉತ್ಸವದಲ್ಲಿ ಸೂಕ್ತ ಗೌರವವನ್ನು ಸಲ್ಲಿಸುತ್ತೇವೆ. ನಿನ್ನ ತೋಳಿನ ಗಾಯ ಗುಣವಾಗುವವರೆಗೆ ನೀನು ನಮ್ಮ ಅರಮನೆಯಲ್ಲಿಯೇ ಇರಬೇಕು' ಎಂದು ಹೇಳಿ, ಆ ಹುಲಿಯ ಬೃಹತ್ ಶರೀರವನ್ನು ತಮ್ಮ ಯಂತ್ರ ರಥದಲ್ಲಿ (ಜೀಪ್‌ನಲ್ಲಿ) ಹಾಕಿಕೊಂಡು, ಹುಲ್ಲ ಹಳ್ಳಿಯ ಬೇಟೆಗಾರರ ಪಡೆಯನ್ನು ಕೆಲವು ದಿನಗಳಲ್ಲಿಯೇ ಕರೆಸಿಕೊಳ್ಳು ತ್ತೇವೆಂದು ಅವರಿಂದ ಬೀಳ್ಕೊಂಡು ಒಡೆಯರು, ತಮ್ಮ ಭಟರು ಮತ್ತು ಚಾಮುಂಡನಾಯಕನೊಡನೆ ಮೈಸೂರಿನತ್ತ ಹೊರಟರು.

ಚಾಮುಂಡನಾಯಕನಿಗೆ ರಾಜವೈದ್ಯರಿಂದ ಔಷಧೋಪಚಾರವನ್ನು ನಡೆಸಲಾಯಿತು. ಕೆಲವು ದಿನಗಳಲ್ಲಿ ಆತನು ಸಂಪೂರ್ಣವಾಗಿ ಗುಣ ಹೊಂದಿದನು. ಒಂದು ದಿನ ಒಡೆಯರು ಚಾಮುಂಡನಾಯ್ಕನಿಗೆ ತಮ್ಮ ಅರಮನೆಯ ಭಿತ್ತಿ ಚಿತ್ರಗಳನ್ನು ತೋರಿಸುತ್ತಾ ಬರುತ್ತಿದ್ದರು. ನವರಾತ್ರಿ ಉತ್ಸವದ ವೈಭವಗಳನ್ನು ವರ್ಣಗಳಿಂದ ಚಿತ್ರಿಸಲಾಗಿತ್ತು. ಚಾಮುಂಡ ನಾಯಕನು ಅವುಗಳನ್ನು ನೋಡಿ ಚಿತಕ್ರಲೆಯ ಸೊಬಗಿಗೆ ಬೆರಗಾದನು. ಕರಿಕಲ್ಲು ತೊಟ್ಟಿಯ ಒಳಾಂಗಣಕ್ಕೆ ಒಡೆಯರು ಆತನನ್ನು ಕರೆದೊಯ್ದರು. ಅಲ್ಲಿನ ಅನೇಕ ಭಿತ್ತಿ ಚಿತ್ರಗಳ ನಡುವೆ 'ಹುಲಿಯ ಬಾಯೊಳಗೆ ಎಡಗೈ ಯನ್ನು ಇಟ್ಟು, ಭರ್ಜಿಯಿಂದ ಕೂಡಿದ ಬಲಗೈಯನ್ನು ಮೇಲೆತ್ತಿ ಹುಲಿ ಯೊಡನೆ ಹೋರಾಡುವ ವೀರನೊಬ್ಬನ ಚಿತ್ರವನ್ನು ನೋಡಿ ಆಶ್ಚರ್ಯ ಚಕಿತನಾದನು. ಒಮ್ಮೆ ಒಡೆಯರ ಕಡೆಗೂ, ಒಮ್ಮೆ ಆ ಚಿತ್ರದ ಕಡೆಗೂ ಚಾಮುಂಡನಾಯಕನು ತನ್ನ ದೃಷ್ಟಿಯನ್ನು ಹರಿಸಿದನು. ಆ ಚಿತ್ರವು ಅವನದೇ ಆಗಿತ್ತು. ಆಗ ಒಡೆಯರು, 'ಚಾಮುಂಡನಾಯಕ, ಈ ವರ್ಣ ಚಿತ್ರವನ್ನು ತೋರಿಸಲೆಂದೇ ನಿನ್ನನ್ನು ಇಲ್ಲಿಗೆ ಕರೆತಂದೆ. ನಿನ್ನ ಬೇಟೆಯ ಅಪೂರ್ವವಾದ ದೃಶ್ಯವು ನಮ್ಮ ನೆನಪಿನಿಂದ ಅಳಿಸದೇ ಇರಲೆಂದು ನಮ್ಮ ಆಸ್ಥಾನ ಶಿಲ್ಪಿಯಾದ ಶ್ರೀ ಸಿದ್ಧಲಿಂಗಸ್ವಾಮಿಯವರಿಂದ ಬರೆಸಲಾಗಿದೆ-'

ಎಂದರು. ಚಾಮುಂಡನಾಯಕನು ಆನಂದ ಬಾಷ್ಪಪೂರಿತನಾಗಿ, 'ಒಡೆಯರ ಅಭಿಮಾನವನ್ನು ಗಳಿಸಿದ ನಾನೇ ಧನ್ಯನು' ಎಂದು ಅವರ ಕಾಲಿಗೆರಗಿದನು.

ನವರಾತ್ರಿಯ ಸಮಯ ಬಂದಿತು. ಆಶ್ವಯುಜ ಶುಕ್ಲಪಕ್ಷದಲ್ಲಿ ಪಾಡ್ಯದಿಂದ ದಶಮಿಯ ತನಕ ನಡೆಯುವ ದಸರಾ, ನಾಡಹಬ್ಬದ ವಿವಿಧ ಕಾರ್ಯಕ್ರಮಗಳು. ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಗಳ ಕಾಲ ದಿಂದ ನಡೆದು ಬಂದು ಮೈಸೂರು ಅರಸರು ಅದನ್ನು ಮುಂದುವರಿಸಿದ್ದರು. ಶ್ರೀ ನಾಲ್ವಡಿ ಕೃಷ್ಣರಾಜಒಡೆಯರು ಹುಲ್ಲಹಳ್ಳಿಯ ಪರಿವಾರ (ನಾಯಕ) ಜನಾಂಗದವರಿಗೆ ಸುತ್ತೋಲೆಯನ್ನು ಕಳುಹಿಸಿ ನವರಾತ್ರಿಯ ಉತ್ಸವಕ್ಕೆ ಬರಮಾಡಿಕೊಂಡರು. ಮೈಸೂರು ಅರಮನೆಯ ಮುಂದಣ ವಿಶಾಲ ಆವರಣದಲ್ಲಿ ಮಲ್ಲಯುದ್ಧ, ಕತ್ತಿವರಸೆ, ಕುದುರೆ ಸವಾರಿ ಹಾಗೂ ವಿವಿಧ ವ್ಯಾಯಾಮ ಪ್ರದರ್ಶನಗಳೂ ನಡೆದುವು. ಪ್ರಸಿದ್ಧ ಸಂಗೀತಗಾರರಿಂದ ಹಾಡುಗಾರಿಕೆ, ವೀಣೆ, ಪಿಟೀಲು, ಕೊಳಲು, ಮೃದಂಗ ವಾದನಗಳು ಸಭಿಕರನ್ನು ಆನಂದ ಸಾಗರದಲ್ಲಿ ತೇಲಿಸಿದುವು.

ನವಮಿಯ ದಿನ ಉತ್ತಮ ಹಾಡುಗಾರರು, ಕಲಾವಿದರು, ಕವಿಗಳು ಮತ್ತು ಮಲ್ಲರಿಗೆ ಮಹಾರಾಜರಿಂದ ಸನ್ಮಾನವನ್ನು ನೀಡಲಾಯಿತು. ಈ ಎಲ್ಲಾ ಸನ್ಮಾನಗಳಿಗೆ ಕಿರೀಟವಿಟ್ಟಂತೆ ಮಹಾರಾಜರು ಹುಲ್ಲಹಳ್ಳಿಯ ವೀರ ಚಾಮುಂಡನಾಯ್ಕನಿಗೆ ಕಿಕ್ಕಿರಿದ ಸಭೆಯಲ್ಲಿ ಹಸಿರು ಪೇಟವನ್ನು ಶಿರದಲ್ಲಿ ತೊಡಿಸಿ, ಬಂಗಾರದ ಉಂಗುರವನ್ನು ಬೆರಳಿಗಿಟ್ಟು, ರಾಜಮುದ್ರೆ ಯುಳ್ಳ ಭರ್ಜಿಯೊಂದನ್ನು ನೀಡಿ ಗೌರವಿಸಿದರು.

ಮಹಾರಾಜರು, 'ಹುಲ್ಲಹಳ್ಳಿಯ ಪರಿವಾರ ಜನಾಂಗವನ್ನು ರಾಜ ಪರಿವಾರ ಎಂದು ಗೌರವಿಸಲಾಗಿದೆ. ಇನ್ನು ಮುಂದೆ ನಮ್ಮ ಅರಮನೆಯ ವತಿಯಿಂದ ನಡೆಯುವ ಎಲ್ಲ ಕಾರ್ಯಕ್ರಮಗಳಲ್ಲೂ ಉತ್ಸವಗಳಲ್ಲೂ ಜವಾಬ್ದಾರಿ ಪಾತ್ರವಹಿಸಲು ಇವರಿಗೆ ಅನುಮತಿ ನೀಡಲಾಗಿದೆ. ಹಾಗೂ ಭಯಂಕರ ಹುಲಿಯನ್ನು ಕೊಂದು ಮಹದುಪಕಾರ ಮಾಡಿದ ವೀರ ಚಾಮುಂಡನಾಯಕನು ತನಗೆ ಬೇಕಾದುದನ್ನು ನಮ್ಮಿಂದ ಪಡೆಯ ಬಹುದು'–ಎಂದು ಘೋಷಿಸಿದರು. ಇಡೀ ಸಭೆಯು ಹರ್ಷೋದ್ಗಾರ ದಿಂದ ನಲಿದಾಡಿತು. ಆಗ ಸಂತೋಷಾತಿರೇಕದಿಂದ ಚಾಮುಂಡನಾಯ್ಕನು ಮಹಾರಾಜರಿಗೆ ವಂದಿಸಿ, 'ನಂಜನಗೂಡು ಮತ್ತು ಹೆಗ್ಗಡದೇವನ

ಕೋಟೆಯ ಸುತ್ತಲ ಅರಣ್ಯ ಪ್ರದೇಶದಲ್ಲಿ, ನಮ್ಮ ಹುಲ್ಲಹಳ್ಳಿಯ ಪರಿವಾರ ಜನಾಂಗದವರಿಗೆ ಯಾವ ನಿರ್ಬಂಧವೂ ಇಲ್ಲದೆ ಹುಲಿ ಶಿಕಾರಿ ಮಾಡಬಹುದೆಂದು ಅಪ್ಪಣೆ ಕೊಡಬೇಕು ಎಂಬುದೇ ಮಹಾರಾಜರಲ್ಲಿ ನನ್ನ ಕೋರಿಕೆ' ಎಂದನು.

ನಾಲ್ವಡಿ ಕೃಷ್ಣರಾಜಒಡೆಯರು ಮುಗುಳ್ನಕ್ಕು 'ಇದು ವೀರನಾದವನ ಸಹಜ ಕೋರಿಕೆ ಹೌದು' ಎಂದು ಅವನ ಪ್ರಾರ್ಥನೆಯನ್ನು ಮನ್ನಿಸಿ ರಾಜ ಶಾಸನವನ್ನು ಹೊರಡಿಸಿದರು.

ವಿಜಯ ದಶಮಿಯಂದು ನಡೆದ ಅದ್ದೂರಿಯ ದಸರಾ ಮೆರವಣಿಗೆಯಲ್ಲಿ ಹುಲ್ಲಹಳ್ಳಿಯ ಚಾಮುಂಡನಾಯಕನೂ ಭಾಗವಹಿಸಿದನು. ಹುಲ್ಲಹಳ್ಳಿಯ ಜನತೆಗೆ ಈತನನ್ನು 'ಹುಲಿ ಚಾಮುಂಡನಾಯಕ' ನೆಂದು ಕರೆಯುವುದೇ ರೂಢಿಯಾಯಿತು.

—ಹು. ಭೀ. ನಾಗರಾಜ
ಸಣ್ಣ ಕತೆ–ಪ್ರಕಟಣೆ : ಮಂಜುವಾಣಿ
ಅಕ್ಟೋಬರ್ 1986

## 14. ಹುಲ್ಲಹಳ್ಳಿಯ ಜನಾಂಗಗಳು ಹಾಗೂ ಇತರ ಅಂಶಗಳು

ಹುಲ್ಲಹಳ್ಳಿಯು ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿರುವ ಒಂದು ಅಪೂರ್ವ ಸ್ಥಳ. ಇಲ್ಲಿಯ ಜನಾಂಗ ಸಾಮರಸ್ಯವೇ ಇದಕ್ಕೆ ಸಾಕ್ಷಿ. ಹುಲ್ಲ ಹಳ್ಳಿಯು 1981ರ ಜನಗಣತಿಯ ಪ್ರಕಾರ 9,627 ಜನಸಂಖ್ಯೆಯನ್ನು ಹೊಂದಿದೆ. ಇಂದು ಈ ಸಂಖ್ಯೆಯು 10,000ವನ್ನು ಮೀರಿದೆ ಎಂದು ಅಂದಾಜು ಮಾಡಲಾಗಿದೆ. ಇದರ ಜೊತೆಗೆ ಹುಲ್ಲಹಳ್ಳಿಯಲ್ಲಿ ಕೆಲವು ಕಾಲ ವಾಸವಾಗಿದ್ದು ಮತ್ತೆ ಪ್ರಯಾಣ ಬೆಳೆಸುವ ಸರ್ಕಾರಿ ನೌಕರರು ಹಾಗೂ ಇನ್ನಿತರರು (Floating Population) 1000 ಜನರೆಂದು ಅಂದಾಜು ಮಾಡಿದೆ. ಒಟ್ಟಿನಲ್ಲಿ ಈ ಹುಲ್ಲಹಳ್ಳಿಯು 11000 ಜನಸಂಖ್ಯೆಯುಳ್ಳ ಪ್ರದೇಶವಾಗಿದೆ ಎಂದು ಹೇಳಬಹುದು. ಇದರಲ್ಲಿ ಮೂವತ್ತೊಂದು ವಿವಿಧ ಜನಾಂಗಗಳನ್ನು ಗುರುತಿಸಿ ಅವುಗಳನ್ನು ಈ ಕೆಳಗಿನಂತೆ ವಿಂಗಡಿಸ ಬಹುದಾಗಿದೆ.

**1. ಸಂಖ್ಯಾದೃಷ್ಟಿಯಲ್ಲಿ**

**ಅ. ಬಹುಸಂಖ್ಯಾತರು**

1. ನಾಯಕ ಪರಿವಾರ (ಸು. 3000)
2. ಮುಸಲ್ಮಾನರು (ಸು. 1800)
3. ಹರಿಜನ (ಸು. 1600), 4. ವೀರಶೈವರು (ಸು. 1000)

**ಆ. ಅಲ್ಪಸಂಖ್ಯಾತರು**

1. ಸಜ್ಜನ ವೀರಶೈವರು (ಸು. 320), 2. ವಡ್ಡಾ ಬೋವಿಗಳು (ಸು. 300) 3. ಒಕ್ಕಲಿಗರು (ಸು. 280), 4. ಕುರುಹಿನ ಶೆಟ್ಟರು (ಸು. 250), 5. ಬ್ರಾಹ್ಮಣರು (ಸು. 200), 6. ಈಡಿಗರು 200 7. ಬೆಳ್ಳಾಲಗೌಡರು (ಸು. 1‥0), 8. ಮಡಿವಾಳ ಶೆಟ್ಟರು (ಸು. 120) 9. ಕುಂಬಾರ ಶೆಟ್ಟರು (ಸು. 100)

ಇ. ಅತ್ಯಲ್ಪ ಸಂಖ್ಯಾತರು

1. ಗೆಜ್ಜಗಾರ ಶೆಟ್ಟರು (ಸು. 60), 2. ವಿಶ್ವಕರ್ಮರು (ಸು. 50) 3. ತೆಲುಗು ಶೆಟ್ಟರು (ಸು. 30), 4. ಉಪ್ಪಲಿಗ ಶೆಟ್ಟರು (ಸು. 30), 5. ಆರಾಧ್ಯರು (ಸು. 30), 6. ಜೈನ-ಮಾರ್ವಾಡಿಗಳು (ಸು. 40), 7. ನಯನಜ ಕ್ಷತ್ರಿಯ (ಸು. 15), 8. ಮರಾಠಿ (ಸು. 12), 9. ಹಾವಾಡಿಗರು (ಸು. 25), 10. ಮಲೆಯಾಳಿ ಹಿಂದು (ಸು. 10), 11. ಮಲೆಯಾಳಿ ಮುಸ್ಲಿಂ (ಸು. 10), 12. ಬಳೆಗಾರ ಶೆಟ್ಟರು (ಸು. 30) 13. ಅರಸುಗಳು (ಸು. 8), 14. ಭಾವಸಾರ ಕ್ಷತ್ರಿಯ (ಸು. 6), 15. ರಾಜಾವರ ಕ್ಷತ್ರಿಯ (ಸು. 6), 16. ದಾಸಯ್ಯ (ಸು. 8), 17. ಗೂರ್ಖಾ (ಸು. 6), 18. ಸಾಮಂಥಾರಿಗೌಡರು (ಜೈನರು) (ಸು. 10).

2. ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದುವರಿದವರು

ಬ್ರಾಹ್ಮಣರು, ವೀರಶೈವರು, ಸಜ್ಜನ ವೀರಶೈವರು, ಮುಸಲ್ಮಾನರು, ಕುರುಹಿನ ಶೆಟ್ಟರು, ಒಕ್ಕಲಿಗರು, ವಡ್ಡಬೋವಿಗಳು, ವಿಶ್ವಕರ್ಮರು, ಆರಾಧ್ಯರು, ಈಡಿಗರು, ಜೈನಮಾರ್ವಾಡಿಗಳು ಮತ್ತು ಇತರರು.

3. ಸಾಮಾಜಿಕವಾಗಿ, ಶೈಕ್ಷಣಿವಾಗಿ ಮುಂದುವರಿಯು ತ್ತಿರುವವರು

ನಾಯಕ ಪರಿವಾರ, ಹರಿಜನ ಹಾಗೂ ಉಳಿದ ಎಲ್ಲಾ ಜನಾಂಗಗಳು.

4. ಆರ್ಥಿಕವಾಗಿ ಮುಂದುವರಿದವರು

(ಆಯಾ ಜನಾಂಗಗಳಲ್ಲಿ ಅಂದಾಜು ಶೇಕಡಾವಾರು) ಜೈನರು (ಶೇ. 100), ಮಲೆಯಾಳಿ ಹಿಂದು (ಶೇ. 100), ಮಲೆಯಾಳಿ ಮುಸ್ಲಿಂ (ಶೇ. 100), ಸಜ್ಜನ ವೀರಶೈವರು (ಶೇ. 80), ವೀರಶೈವರು (ಶೇ. 40), ಒಕ್ಕಲಿಗರು (ಶೇ. 40), ಮುಸ್ಲಿಮರು (ಶೇ. 5), ವಡ್ಡಬೋವಿ ಗಳು (ಶೇ. 5), ಈಡಿಗರು (ಶೇ. 2), ಬ್ರಾಹ್ಮಣರು (ಶೇ. 1), ಉಳಿದ ಜನಾಂಗಗಳು (ಶೇ. ½ ಕ್ಕಿಂತ ಕಡಿಮೆ)

ಹುಲ್ಲಹಳ್ಳಿಯ ಜನಾಂಗಗಳ ಪ್ರಮುಖ ಉದ್ಯೋಗ ವ್ಯವಸಾಯ. ಇದರ ಜೊತೆಗೆ ವ್ಯಾಪಾರೋದ್ಯಮ ಮೊದಲಾದ ಸ್ವಂತ ಉದ್ಯೋಗಗಳಿವೆ.

ವ್ಯವಸಾಯ ಕೂಲಿಕಾರರೂ ಬಹುಮಂದಿ ಇದ್ದಾರೆ. ಸರ್ಕಾರಿ ನೌಕರಿಯಲ್ಲಿ ತೊಡಗಿರುವವರು ಇಡೀ ಗ್ರಾಮದ ಜನಸಂಖ್ಯೆಯಲ್ಲಿ ಶೇ. 1 ಎಂದು ಹೇಳಬಹುದು. ಆದಿದ್ರಾವಿಡರು (ಹರಿಜನ) ಹಂದಿಸಾಕಣೆಯಲ್ಲೂ ಮತ್ತು ಮಂಡಲ ಗ್ರಾಮ ಪಂಚಾಯಿತ್ತಿಯ ಭಂಗಿ ವೃತ್ತಿಯಲ್ಲೂ (ಕೆಲವರು) ತೊಡಗಿದ್ದಾರೆ.

## ಹುಲ್ಲಹಳ್ಳಿಯಲ್ಲಿ ವ್ಯವಸಾಯ

ಹುಲ್ಲಹಳ್ಳಿಗೆ ಸೇರಿದ ಖುಷ್ಕಿ ಭೂಮಿಯು 902 ಎಕರೆ ಮತ್ತು 39 ಗುಂಟೆ ಇದೆ.

ನೀರಾವರಿಗೆ ಒಳಪಟ್ಟ ಭೂಮಿ, ಹುಲ್ಲಹಳ್ಳಿ ನಾಲೆಯಿಂದ 25 ಎಕರೆ, ಕಬಿನಿ ಬಲದಂಡೆ ನಾಲೆಯಿಂದ 594 ಎಕರೆ ಮತ್ತು 39 ಗುಂಟೆ, ನುಗು ನಾಲೆಯಿಂದ 146 ಎಕರೆ ಮತ್ತು 22 ಗುಂಟೆಗಳಾಗಿರುತ್ತವೆ.

ಇಲ್ಲಿಯ ಪ್ರಮುಖ ಆಹಾರದ ಬೆಳೆ ಭತ್ತ, ರಾಗಿ, ಜೋಳ, ತೊಗರಿ ಮೊದಲಾದ ದ್ವಿದಳ ಧಾನ್ಯಗಳು, ಎಳ್ಳು ಮುಂತಾದುವು.

ಇಲ್ಲಿಯ ಆರ್ಥಿಕ ಬೆಳೆಗಳು, ಕಬ್ಬು, ಅರಶಿನ, ಹರಳು, ಹತ್ತಿ, ಮೆಣಸಿ ನುುಂತಾದುವು.

ಇಲ್ಲಿಯ ಬಾಗಾಯ್ತು 9 ಎಕರೆ 9 ಗುಂಟೆ ಮಾತ್ರ ಇರುತ್ತದೆ.

## ಹುಲ್ಲಹಳ್ಳಿಯ ಜನರಾಡುವ ಮಾತೃಭಾಷೆಗಳು

ಹುಲ್ಲಹಳ್ಳಿಯ ಮುಖ್ಯ ವ್ಯವಹಾರ ಭಾಷೆ ಕನ್ನಡವಾಗಿದೆ. ವಿವಿಧ ಜನಾಂಗದ ಮಾತೃಭಾಷೆಯು ಕನ್ನಡ, ತಮಿಳು, ತೆಲಗು, ಉರ್ದು, ಮಲೆಯಾಳಿ, ಮರಾಠಿ, ಮಾರ್ವಾಡಿ ಹಾಗೂ ಹಿಂದಿ ಆಗಿರುತ್ತದೆ.

## ಹುಲ್ಲಹಳ್ಳಿಯಲ್ಲಿರುವ ಸೌಲಭ್ಯಗಳು

ವಿದ್ಯಾಭ್ಯಾಸಕ್ಕಾಗಿ ಶಾಲಾ ಕಾಲೇಜುಗಳೂ (ಪಿ.ಯು.ಸಿ. ವರೆಗೆ), ಆರ್ಥಿಕ ವ್ಯವಹಾರಕ್ಕಾಗಿ ಬ್ಯಾಂಕುಗಳೂ, ಔಷಧೋಪಚಾರಕ್ಕಾಗಿ ಸಾರ್ವಜನಿಕ ಹಾಗೂ ಪಶುವೈದ್ಯ ಶಾಲೆಗಳೂ ಇರುವುದಲ್ಲದೇ, ವಿದ್ಯುಚ್ಛಕ್ತಿ, ಟೆಲಿಫೋನ್, ಸಾರಿಗೆ ಸೌಲಭ್ಯಗಳೂ ಸಾಕಷ್ಟಿವೆ. ಗ್ರಾಮಾಭಿವೃದ್ಧಿಗಾಗಿ ಡೆಪ್ಯುಟಿ ತಹಶಿಲ್ದಾರ್ ಅವರ ನಾಡ ಕಚೇರಿ ಸಹ ಇದೆ. ಕಪಿಲಾನದಿ ಗ್ರಾಮದ ಪಕ್ಕದಲ್ಲೇ ಹರಿಯುವುದರಿಂದ ನೀರಿಗೆ ಬರವಿಲ್ಲ.

ಗ್ರಾಮದಲ್ಲಿ ಸಾಕಷ್ಟು ಬಾವಿಗಳೂ, ಕೈಪಂಪುಗಳೂ ಇವೆ. ಆದರೂ ಶೀಘ್ರ ಗತಿಯಲ್ಲಿ ಬೆಳೆಯುತ್ತಿರುವ ಹುಲ್ಲಹಳ್ಳಿಗೆ ನೀರಿನ ಕೊಳವೆಗಳ ವ್ಯವಸ್ಥೆಯು ಜರೂರಾಗಿ, ಸಮರ್ಪಕವಾಗಿ ಆಗಬೇಕಾಗಿದೆ. ಜನರ ಮನೋರಂಜನೆಗಾಗಿ ಶ್ರೀ ವೆಂಕಟೇಶ್ವರ ಚಿತ್ರಮಂದಿರವಿದೆ. ಇದರ ಮಾಲೀಕರು ಹುಲ್ಲಹಳ್ಳಿಯವರೇ ಆದ ಶ್ರೀ ಹೆಚ್. ಪಿ. ಬಸವರಾಜು ಅವರು.



ಶ್ರೀ ಗುರುರಾಘವೇಂದ್ರ ಮೂಲದೇವರು, ರಾಂಪುರ



ಕಂತ್ರೆ ಮಾದಪ್ಪನ ಬೆಟ್ಟದಲ್ಲಿ ಸಮಾಧಿಸ್ಥರಾಗಿರುವ
ಶ್ರೀ ಶ್ರೀ ಶ್ರೀ ಸಂಜುಂಡ ಶಿವಯೋಗಿಗಳು

ಸಂಗಮದ ಸದ್ಗುರು ಶ್ರೀ ಶ್ರೀ ಶ್ರೀ ಮಹದೇವ ತಾತ

ಸದ್ಗುರು ಶ್ರೀ ಶ್ರೀ ಶ್ರೀ ಮಹದೇವತಾತನವರ ದಿವ್ಯ ಸಮಾಧಿ-(ಸಂಗಮ)

## 15. ಹುಲ್ಲಹಳ್ಳಿಯ ಪರಿಸರ

ಹುಲ್ಲಹಳ್ಳಿಯು ಪ್ರಕೃತಿ ಸುಂದರವಾದ ಒಂದು ದೊಡ್ಡ ಗ್ರಾಮ. ಅಥವಾ ಒಂದು ಸಣ್ಣ ನಗರ. ನಂಜನಗೂಡು ತಾಲ್ಲೋಕಿನ ಬಹುದೊಡ್ಡ ಹೋಬಳಿ ಕೇಂದ್ರ. ಡೆಪ್ಯುಟಿ ತಹಶೀಲ್ದಾರರವರ ಕಛೇರಿಯನ್ನು ಹೊಂದಿರುವುದರಿಂದ ಒಂದು ಉಪತಾಲ್ಲೋಕು ಎಂದರೂ ಸರಿಯೆ.

ಪಾವನೆ ಕಪಿಲಾ ನದಿಯ ದಕ್ಷಿಣ ತಟದಲ್ಲಿ ನೆಲೆಗೊಂಡಿರುವ ಹುಲ್ಲ ಹಳ್ಳಿಯು, ಕಪಿಲೆಯ ಉತ್ತರ ದಡದಲ್ಲಿ ಶ್ರೀ ಗುರು ಸಾರ್ವಭೌಮ ರಾಘವೇಂದ್ರ ಮಂತ್ರಾಲಯವೆಂದು ಖ್ಯಾತವಾಗಿರುವ ರಾಂಪುರವನ್ನೂ ನೈಋತ್ಯ ಭಾಗದಲ್ಲಿ ಸುಮಾರು ಏಳು ಕಿ.ಮೀ. ದೂರದಲ್ಲಿ ಮಹಿಮೆವೆತ್ತ ಕಂತೆಮಾದಪ್ಪನ ಬೆಟ್ಟವನ್ನೂ, ವಾಯುವ್ಯ ಭಾಗದಲ್ಲಿ ಎರಡು ಕಿ.ಮೀ. ದೂರದಲ್ಲಿ ಕಪಿಲಾ ಅಣೆಕಟ್ಟೆಯನ್ನೂ, ದಕ್ಷಿಣದಲ್ಲಿ ನಾಲ್ಕು ಕಿ.ಮೀ. ದೂರದಲ್ಲಿ ಕಾರೆಯ ಮ್ಯಾಗ್ನಸೈಟ್‌ಗಣಿಯನ್ನೂ ಹಾಗೂ ಪಶ್ಚಿಮ ಭಾಗ ದಲ್ಲಿ ಸುಮಾರು ಎಂಟು ಕಿ.ಮೀ. ದೂರದಲ್ಲಿ ಭೃಗು ಮತ್ತು ಕಪಿಲಾ ನದಿಗಳು ಕೂಡುವ ಪವಿತ್ರ ಕ್ಷೇತ್ರವೆನಿಸಿದ ಸಂಗಮವನ್ನೂ ಹೊಂದಿ ಚಲುವಿನ ಪರಿಸರದಿಂದ ಕಂಗೊಳಿಸುತ್ತಿದೆ.

### 1. ಶ್ರೀ ಗುರುರಾಘವೇಂದ್ರ ಮಂತ್ರಾಲಯ, ರಾಂಪುರ

ಕಪಿಲಾ ನದಿಯ ಬಲದಂಡೆಯಲ್ಲಿ ಹುಲ್ಲಹಳ್ಳಿಯಿದ್ದರೆ, ಎಡದಂಡೆ ಯಲ್ಲಿ ರಾಂಪುರವಿದೆ. ಈ ಎರಡೂ ಸ್ಥಳಗಳನ್ನು ಕಪಿಲಾ ಸೇತುವೆಯು ಒಂದುಗೂಡಿಸಿದೆ. ಈ ರಾಂಪುರವು ಶ್ರೀ ಗುರು ಸಾರ್ವಭೌಮ ರಾಘವೇಂದ್ರರ ಬೃಂದಾವನವನ್ನು ಹೊಂದಿ ಮಹಿಮೆಯಲ್ಲಿ ಮೂಲ ಮಂತ್ರಾಲಯದ ಪಡಿ ನೆರಳಿನಂತಿದೆ.

ಕೃತಯುಗದಲ್ಲಿ ಶ್ರೀಮನ್ನಾರಾಯಣನು ನರಸಿಂಹನಾಗಿ ಅವತರಿಸಿದ ಕಾಲದಲ್ಲಿ ಮಹಾಭಾಗವತನೆಂದೂ, ಸಾಕ್ಷಾತ್ ಇಂದ್ರನಿಗೇ ಜ್ಞಾನದಾನ ವನ್ನು ಮಾಡಿದ ಪ್ರಹ್ಲಾದನು ಕಲಿಯುಗದಲ್ಲಿ ಶ್ರೀ ವ್ಯಾಸರಾಯರಾಗಿ ಜನಿಸಿದನು. ಶ್ರೀ ವ್ಯಾಸರಾಯರು ಮಾಧ್ವ ಸಂಪ್ರದಾಯದ ಸೋಸಲೆ ಮಠಕ್ಕೆ ಸ್ವಾಮಿಯಾಗಿದ್ದರು. ಇವರು ತಿರುಪತಿಯಲ್ಲಿ ಶ್ರೀನಿವಾಸದೇವರಿಗೆ ಹನ್ನೆರಡು ವರುಷಗಳ ಕಾಲ ಅರ್ಚಕರಾಗಿದ್ದರು. ಕ್ರಿ.ಶ. 1509–1529

ರವರೆಗೆ ವಿಜಯ ನಗರದ ಶ್ರೀಕೃಷ್ಣದೇವರಾಯನ ಸಿಂಹಾಸನದಲ್ಲಿ ಕುಳಿತು ಹಿಂದೂ ಸಾಮ್ರಾಜ್ಯವನ್ನು ಆಳಿದರು. ಇವರು ಕೃಷ್ಣ ಎಂಬ ಅಂಕಿತದಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಶ್ರೀ ವ್ಯಾಸರಾಯರೇ ಮುಂದೆ ಶ್ರೀ ರಾಘವೇಂದ್ರರಾಗಿ ಜನ್ಮನೆತ್ತಿದರು.

ಶ್ರೀ ರಾಘವೇಂದ್ರರು ಕ್ರಿ.ಶ. 1624 ರಿಂದ 1671 ರವರೆಗೆ ನಂಜನಗೂಡು ಮಾಧ್ವಮಠದಲ್ಲಿ ಸ್ವಾಮಿಯಾಗಿದ್ದರು. ಅನೇಕ ಕೀರ್ತನೆಗಳನ್ನು ಬರೆದರು. ಕನ್ನಡದ ಕೀರ್ತನೆಯಾದ 'ಇಂದು ಎನಗೆ ಗೋವಿಂದ ನಿನ್ನಯ ಪಾದಾರವಿಂದವ ತೋರೋ ಮುಕುಂದ' ಸುಪ್ರಸಿದ್ಧವಾದುದು. ಹಲವು ಸಂಸ್ಕೃತ ಗ್ರಂಥಗಳನ್ನೂ ಇವರು ಬರೆದಿದ್ದಾರೆ. ಶ್ರೀ ರಾಘವೇಂದ್ರರು ಬಳ್ಳಾರಿ ಬಳಿಯಲ್ಲಿರುವ ಮಂಚಾಲೆಯಲ್ಲಿ (ಇಂದಿನ ಆಂಧ್ರ ಪ್ರದೇಶದ ಮಂತ್ರಾಲಯ) ಬೃಂದಾವನಸ್ಥರಾಗಿ ಶ್ರೀಗುರುಸಾರ್ವಭೌಮರೆಂದು ಜಗತ್ ಪ್ರಸಿದ್ಧರಾಗಿ ತಮ್ಮ ದೈವೀಶಕ್ತಿಯ ಪ್ರಭಾವವನ್ನು ಬೀರುತ್ತಿದ್ದಾರೆ.

ಕ್ರಿ.ಶ. 1782 ರಲ್ಲಿ ರಾಂಪುರವು ದಿವಾನ್ ಪೂರ್ಣಯ್ಯನವರ ತಮ್ಮಂದಿರ ಮಕ್ಕಳಾದ ಹಿರಣ್ಯಪ್ಪ ಎಂಬುವರ ಜಹಗೀರಿಯಾಗಿತ್ತು. ಹಿರಣ್ಯಪ್ಪನವರು ಶ್ರೀ ರಾಘವೇಂದ್ರರ ಪರಮ ಭಕ್ತರಾಗಿದ್ದರು. ಇವರು ಅಂದಿನ ಮೂಲ ಮಂತ್ರಾಲಯದ ಪೀಠಸ್ಥರಾಗಿದ್ದ ಶ್ರೀ ಶ್ರೀ ಶ್ರೀ ವರದೇಂದ್ರತೀರ್ಥ ಶ್ರೀಪಾದಂಗಳವರಿಂದ ಮೂಲ ಮೃತ್ತಿಕಾ ಅಕ್ಷತಾದಿಗಳನ್ನು ಪಡೆದು ರಾಂಪುರದಲ್ಲಿ ಮೈಸೂರಿನ ದಿವಾನ್ ಪೂರ್ಣಯ್ಯನವರ ಸಂಪೂರ್ಣ ಸಹಕಾರದೊಂದಿಗೆ ಶ್ರೀ ರಾಘವೇಂದ್ರ ಬೃಂದಾವನವನ್ನು ನಿರ್ಮಿಸಿ ಪ್ರತಿಷ್ಠಾಪಿಸಿದರು. ಬೃಂದಾವನದ ನಿತ್ಯವಿಧಿಗೆಂದು ಒಂದು ಎಕರೆ ತರಿ, ಐದು ಎಕರೆ ಖುಷ್ಕಿ ಭೂಮಿಯನ್ನು ಬಿಟ್ಟುಕೊಟ್ಟರು.

ಮುಂದಿನ ದಿನಗಳಲ್ಲಿ ಈ ಬೃಂದಾವನವು ಸ್ವಲ್ಪ ಕಾಲ ಅಜ್ಞಾತವಾಸವನ್ನು ಅನುಭವಿಸಬೇಕಾಯಿತು. ಈ ಬೃಂದಾವನವನ್ನು ಆವರಿಸಿದಂತೆ ಹಸಿರು ಕಾಡು ಬೆಳೆಯತೊಡಗಿತು. ಹಿರಣ್ಯಪ್ಪನವರ ವಂಶಸ್ಥರಾದ ಶ್ರೀ ರಾಮರಾಯರ ಆಗಮನವು ಈ ರಾಂಪುರಕ್ಕಾಯಿತು. ಶ್ರೀ ರಾಮರಾಯರು ಮಂತ್ರಾಲಯಕ್ಕೆ ಹೋಗಿ ಶ್ರೀ ರಾಘವೇಂದ್ರರ ದರ್ಶನವನ್ನು ಪಡೆಯಬೇಕೆಂಬ ಹಂಬಲ ಸಾಕಷ್ಟಿತ್ತು, ಆದರೆ ಬಡತನ ಅವರ ಆಸೆಯನ್ನು ಈಡೇರಿಸಲಿಲ್ಲ. ಆಗ ರಾಘವೇಂದ್ರರೇ ಇವರ ಕನಸಿನಲ್ಲಿ ಕಾಣಿಸಿಕೊಂಡು 'ನಾನು ರಾಂಪುರದಲ್ಲೇ ಇದ್ದೇನೆ' ಎಂದರು. ಆಗ ಶ್ರೀ ರಾಮರಾಯರು

ಬೃಂದಾವನದ ಸುತ್ತ ಬೆಳೆದಿದ್ದ ಕಾಡನ್ನು ಕತ್ತರಿಸಿ ಶ್ರೀ ರಾಘವೇಂದ್ರರ ಅಜ್ಞಾತವಾಸವನ್ನು ನಿವಾರಿಸಿದರು.

ಮುಂದೆ ತುಮಕೂರಿನ ನಿವೃತ್ತ ಶೇಕ್ದಾರ್‌ನರಿ ಕೃಷ್ಣಮೂರ್ತಾಚಾರ್ ಅವರು ರಾಂಪುರದಲ್ಲಿ ಸರ್ಕಾರದಿಂದ ಜಮೀನನ್ನು ಪಡೆದು ವಾಸವಾಗಿದ್ದರು. ಇವರ ದತ್ತು ಮಗನಾದ ಶೇಷಗಿರಿರಾವ್ ಅವರಿಗೆ ಮಕ್ಕಳಿರಲಿಲ್ಲ. ಶೇಷಗಿರಿರಾವ್ ಹಾಗೂ ಅವರ ಧರ್ಮ ಪತ್ನಿಯವರಾದ ಶ್ರೀಮತಿ ಶೇಷಾಬಾಯಿಯವರು ಶ್ರೀ ರಾಘವೇಂದ್ರರ ಸೇವೆಯಲ್ಲಿ ನಿರತರಾದರು. ದೇವಾಲಯದ ಜೀರ್ಣೋದ್ಧಾರವನ್ನು ಕೈಗೊಂಡರು. ಬೃಂದಾವನದ ಗರ್ಭಾಂಕಣದ ಸುತ್ತಲಿನ ನಿವೇಶನವನ್ನು ಹಾಲುಮತದ ಮುದ್ದೇಗೌಡನೂ, ಬೃಂದಾವನದ ಪಶ್ಚಿಮ ಭಾಗದ ಭೂಮಿಯನ್ನು ಮರೀಗೌಡನೂ, ಪೂರ್ವದ ಭೂಮಿಯನ್ನು ದೂರಗ್ರಾಮದ ಮಾದಪ್ಪನೂ ಮತ್ತು ಚನ್ನಗೌರವ್ವನ ರಾಮಣ್ಣನೂ ಬಿಟ್ಟುಕೊಟ್ಟರು. ಶ್ರೀ ಶೇಷಗಿರಿರಾವ್ ಅವರು ರಾಂಪುರದವರೇ ಆದ ಶ್ರೀ ಕೃಷ್ಣಮೂರ್ತಾಚಾರ್ ಅವರಿಗೆ ಬೃಂದಾವನದ ಅರ್ಚನಾದಿಗಳನ್ನು ವಹಿಸಿ, ಜಮೀನನ್ನೂ (ಗದ್ದೆ) ಕೊಟ್ಟರು.

ಇಂದು ಶ್ರೀ ಕೃಷ್ಣಮೂರ್ತಾಚಾರ್ಯರ ಮಗಳು ಶ್ರೀಮತಿ ಕೃಷ್ಣವೇಣಮ್ಮ ಹಾಗೂ ಅಳಿಯಂದಿರಾದ ಶ್ರೀ ರಂಗರಾಯರೂ ಬೃಂದಾವನದ ಪೂಜಾ ಹಸ್ತೋದಕಾದಿಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಈ ಸಂದರ್ಶನೀಯ ಬೃಂದಾವನವು ಸಿಹಿ ನೀರಿನ ನೆಲಬಾವಿಯ ಮೇಲೆ 4½ ಅಡಿ ಎತ್ತರ, 2 ಅಡಿ ಚದರದ್ದಾಗಿದ್ದು ಕೂರ್ಮಾಸೀನವಾಗಿದೆ (ಆಮೆಯು ತಳವುಳ್ಳದ್ದು.) ಬೃಂದಾವನದ ಪೂರ್ವಭಾಗವು ದಂಡ ಕಮಂಡಲು ಜಪಸರದೊಂದಿಗೆ ಪದ್ಮಾಸನಾಸೀನಧ್ಯಾನ ಮುದ್ರರಾಗಿರುವ ಶ್ರೀ ಗುರುರಾಯರ ಪ್ರತೀಕವು ಭಕ್ತರ ಮನೋಬಿಂಬವನ್ನು ಪ್ರತಿಬಿಂಬಿಸುತ್ತ ಪ್ರೇಕ್ಷಕರ ಚಿತ್ತ ಭಿತ್ತಿಯಲ್ಲಿ ನಿತ್ಯನೂತನವಾಗಿ ನೆಲೆಸುವಂತಿದೆ. ರಾಯರ ಪ್ರತೀಕದ ಮೇಲುಭಾಗದಲ್ಲಿ ಸೀತಾರಾಮಲಕ್ಷ್ಮಣರ ಪ್ರತೀಕವಿದೆ. ಇವರ ದಕ್ಷಿಣ ಭಾಗದಲ್ಲಿ ಶ್ರೀ ವ್ಯಾಸರನ್ನೂ ವಾಮಭಾಗದಲ್ಲಿ ಕಾಳಿಂಗ ಮರ್ಧನನನ್ನೂ, ಹಿಂಬದಿಯಲ್ಲಿ ಶಂಖಚಕ್ರಗಳ ಪ್ರತೀಕವನ್ನೂ ಹೊಂದಿದೆ.

ಶ್ರೀ ಬೃಂದಾವನದ ನಿತ್ಯ ಪೂಜೆಯಲ್ಲದೆ ಪ್ರತಿ ಗುರುವಾರ ವಿಶೇಷ

ಪೂಜೆಯೂ ಮತ್ತು ಪ್ರತಿವರ್ಷ ಶ್ರಾವಣಮಾಸದಲ್ಲಿ ಶ್ರೀ ರಾಘವೇಂದ್ರರ ಆರಾಧನೆಯೂ ನಡೆಯುತ್ತಿದೆ. ಬೃಂದಾವನದ ಪೂಜಾ ವಿಶೇಷವು ಇಂದು ಯಾವ ಮೂಲಾದಾಯವೂ ಇಲ್ಲದೆ ಕೇವಲ ಭಕ್ತಾದಿಗಳ ಸಹಕಾರದಿಂದಲೇ ನಡೆಯುತ್ತಿದೆ.

ಶ್ರೀ ರಾಘವೇಂದ್ರ ಬೃಂದಾವನದ ಉತ್ತರ ಭಾಗದಲ್ಲಿ ಪ್ರಾಣದೇವರ (ಆಂಜನೇಯಸ್ವಾಮಿ) ಗುಡಿಯಿದೆ.

ರಾಂಪುರದ ಮತ್ತೊಂದು ಪ್ರಸಿದ್ಧ ದೇವಾಲಯ ಶ್ರೀ ರಾಮಲಿಂಗೇಶ್ವರ. ಈ ದೇವಾಲಯದಲ್ಲಿ ಬೃಹತ್ತಾದ, ತ್ರೇತಾಯುಗದ ಶ್ರೀರಾಮನಿಂದ ಪ್ರತಿಷ್ಠಾಪಿಸಲ್ಪಟ್ಟ ಮರಳುಲಿಂಗವಿದೆ. ಈ ಲಿಂಗವು ಪಶ್ಚಿಮಾಭಿಮುಖವಾಗಿದೆ. ಆದರೆ ದೇವಾಲಯದ ಮುಖ್ಯ ದ್ವಾರವು ದಕ್ಷಿಣಾಭಿಮುಖವಾಗಿದೆ. ಈ ರಾಮಲಿಂಗೇಶ್ವರ ದೇವಾಲಯದಲ್ಲಿ 4 ಅಡಿ ಎತ್ತರದ ವಿಷ್ಣು ಮತ್ತು ಗಣಪತಿಯ ವಿಗ್ರಹವಿದೆ. ಭಿನ್ನವಾದ ಮತ್ತೊಂದು ವಿಷ್ಣುವಿನ ವಿಗ್ರಹದ ಪ್ರಭಾವಳಿಯಲ್ಲಿ ದಶಾವತಾರದ ಕೆತ್ತನೆ ಇದೆ. ಈ ವಿಗ್ರಹಗಳನ್ನು ರಾಂಪುರದ ಬಳಿಯ (ಪಶ್ಚಿಮ ಭಾಗ) ಮೂಡಲ ಕೋಟೆ (ಈಗ ಅವಶೇಷ)ಯ ದೇಗುಲದಿಂದ ತಂದವುಗಳಾಗಿವೆ. ಮೂಡಲಕೋಟೆಯಲ್ಲಿ ಒಂದು ಎತ್ತರದ ಕಲ್ಲಿನಲ್ಲಿ ಮೂರು ಅಡಿಯ ಗೊಮ್ಮಟೇಶ್ವರನನ್ನು ಬಿಡಿಸಲಾಗಿದೆ. ಆದ್ದರಿಂದ ಇದನ್ನು ಜೈನಧರ್ಮದ ಸ್ಥಳವೆಂದು ಗುರುತಿಸಬಹುದು. ಶ್ರೀರಾಮಲಿಂಗೇಶ್ವರ ದೇವಾಲಯದಲ್ಲಿ ದೊಡ್ಡದಾದ ಕಲ್ಲಿನ ಬಸವ ಮತ್ತು ಚಂಡಿ, ಚಾಮುಂಡಿಯರ ವಿಗ್ರಹಗಳೂ ಇವೆ.

ಈ ರಾಮಲಿಂಗೇಶ್ವರ ದೇವಾಲಯವನ್ನು 15ನೇ ಶತಮಾನದಲ್ಲಿ ಹೆಮ್ಮಯ್ಯ, ಮಾದಶೆಟ್ಟಿ, ನಾಡಪ್ಪಶೆಟ್ಟಿ, ಬಸೆಟ್ಟಿ ಮೊದಲಾದ ಹಿರಿಯರು ಜೀರ್ಣೋದ್ಧಾರ ಮಾಡಿದರು ಎಂದು ಒಂದು ಶಾಸನ ತಿಳಿಸುತ್ತದೆ. ಈ ಶಾಸನವನ್ನು ಮಾದಯ್ಯ ಬಿಚ್ಚಯ್ಯ ಕೆತ್ತಿದರು ಎಂದೂ ತಿಳಿಸುತ್ತದೆ. ಈ ಶಿಲಾಶಾಸನ ದೇವಾಲಯದ ಒಳಭಾಗದಲ್ಲಿದೆ.

ಪೂರ್ವ, ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿ ಕಪಿಲಾನದಿಯಿಂದ ಆವರಿಸಲ್ಪಟ್ಟ ನೈಸರ್ಗಿಕ ಪರ್ಯಾಯ ದ್ವೀಪದಂತಿರುವ ರಾಂಪುರವು ಪ್ರೇಕ್ಷಣೀಯ ಸ್ಥಳವಾಗಿದೆ.

ರಾಂಪುರದ ಈಶಾನ್ಯ ಭಾಗದಲ್ಲಿ ಮೂರು ಮೈಲಿ ದೂರದಲ್ಲಿ ಕೆಂಬಲ್ ಎಂಬ ಗ್ರಾಮವಿದೆ. ಮೈಸೂರಿನ ಒಡೆಯರು ಇಂಗ್ಲಿಷರ

ಸಹಾಯಕ ಸೈನ್ಯ ಪದ್ಧತಿಗೆ ಒಳಪಟ್ಟು, ಇಂಗ್ಲಿಷರ ಸೈನ್ಯದ ಒಂದು ತುಕಡಿ ಈ ಗ್ರಾಮದಲ್ಲಿತ್ತು. ಕೆಂಪು ಬಲ (ಸೈನ್ಯ) ಇದ್ದುದರಿಂದ ಈ ಗ್ರಾಮ ಕೆಂಬಲ ಎಂದಾಯಿತು. ಇಲ್ಲಿ ಮಣ್ಣಿನ ಕೋಟೆಯ ಅವಶೇಷವಿದೆ. ಸೀತಾರಾಮಲಕ್ಷ್ಮಣರ ಅತ್ಯಂತ ಸುಂದರ ವಿಗ್ರಹಗಳುಳ್ಳ ದೇವಾಲಯವಿದೆ. ಈ ಗ್ರಾಮದ ಬಳಿ ಬುಗತಮ್ಮನ ಬೆಟ್ಟವಿದೆ. ಹಿಂದಿನ ಪಾಳೆಯಗಾರರು ಶತ್ರುಗಳ ವೀಕ್ಷಣೆಗೆ ಈ ಬೆಟ್ಟವನ್ನು ಬಳಸುತ್ತಿದ್ದರು. ಈ ಗ್ರಾಮದ ಬಳಿ ಕಪಿಲಾ ನದಿಯ ದಡದಲ್ಲಿ ಭೀಮೇಶ್ವರ ಗುಡಿಯಿದೆ. ಈ ಗುಡಿಯನ್ನು ಸಿನಿಮಾ ನೃತ್ಯ ನಿರ್ದೇಶಕ ಮೂಗೂರು ಸುಂದರ್ ಅವರು ಜೀರ್ಣೋದ್ಧಾರ ಮಾಡಿಸಿರುತ್ತಾರೆ. ಶಿಥಿಲ ಕೋಟೆಯಲ್ಲಿ ಬಾಗಿಲು ವೀರಣ್ಣನ ವೀರಗಲ್ಲು ಇದೆ. ಈತನು ಒಂದು ಯುದ್ಧದಲ್ಲಿ ಬಾಗಿಲು ಕಾಯುತ್ತಲೇ ಹೋರಾಡಿ ಸತ್ತನು. ಈತನ ವೀರಗಲ್ಲಿಗೆ ಈಗಲೂ ಪೂಜೆ ನಡೆಯುತ್ತಿದೆ. ಕೋಟೆಯ ಸುತ್ತಲೂ ವೀರಗಲ್ಲುಗಳು ಹಾಗೂ ಮಾಸ್ತಿಕಲ್ಲುಗಳನ್ನು ಕಾಣಬಹುದು.

## 2. ಕಂತೆ ಮಾದಪ್ಪನ ಬೆಟ್ಟ

ಕ್ರಿ.ಶ. 1800ರ ವೇಳೆಯಲ್ಲಿ ಮಾದಪ್ಪನೆಂಬ ವೀರಶೈವ ಶರಣನು ಹುಲ್ಲಹಳ್ಳಿ, ಕಣೇನೂರು, ಕಪ್ಪಸೋಗೆ, ಚಂದ್ರವಾಡಿ, ಕುರಿಹುಂಡಿ, ಯಾಳೀಹಳ್ಳಿ ಹಾಗೂ ಆಕಲ ಗ್ರಾಮಗಳಲ್ಲಿ ಹಗಲು ಸಂಚರಿಸಿ ಭಿಕ್ಷೆ ಬೇಡುವುದು, ರಾತ್ರಿವೇಳೆ ಯಾವುದಾದರೂ ಮಠದಲ್ಲೋ ದೇವಾಲಯದಲ್ಲೋ ಮಲಗುವುದು–ತನ್ನ ದಿನಚರಿಯನ್ನಾಗಿ ಮಾಡಿಕೊಂಡಿದ್ದನು. ಈತನು ವೀರಶೈವ ಪದ್ಧತಿಯಂತೆ ಕಂತೆ ಭಿಕ್ಷವನ್ನು ಬೇಡುತ್ತಿದ್ದುದರಿಂದ ಕಂತೆ ಮಾದಪ್ಪನೆಂದು ಕರೆಯಲ್ಪಡುತ್ತಿದ್ದನು. ಈತನ ಮುಖದ ತೇಜಸ್ಸು ಮತ್ತು ಗಂಭೀರವಾದ ವಾಣಿಯಿಂದ ಈತನನ್ನು ಒಬ್ಬ ಯೋಗಿಯೆಂದು ಹೇಳಬಹುದಾಗಿತ್ತು. ಜನರು ಈತನಲ್ಲಿ ಗೌರವ, ಭಕ್ತಿ ಭಾವನೆಗಳನ್ನು ಹೊಂದಿದ್ದರು. ಮಾದಪ್ಪನು ತನ್ನ ಅಂತ್ಯದಿನಗಳಲ್ಲಿ ಹುಲ್ಲಹಳ್ಳಿಗೆ ನೈಋತ್ಯ ಮೂಲೆಯಲ್ಲಿ ಸುಮಾರು 7–8 ಕಿ.ಮೀ. ದೂರದಲ್ಲಿರುವ ಒಂದು ಗುಡ್ಡದಲ್ಲಿ ವಾಸಿಸತೊಡಗಿ, ಆ ಗುಡ್ಡದ ಸುತ್ತಲ ಗ್ರಾಮಗಳಲ್ಲಿ ಹಗಲು ಭಿಕ್ಷೆ ಬೇಡಿ, ರಾತ್ರಿ ಗುಡ್ಡವನ್ನು ಸೇರುತ್ತಿದ್ದನು. ಸಾಮಾನ್ಯವಾಗಿ ಏಕಾಂಗಿಯಾಗಿಯೇ ಇರುತ್ತಿದ್ದ ಇವನು ಇಡೀ ರಾತ್ರಿಯನ್ನು ಯೋಗನಿದ್ರೆ

ಯಲ್ಲಿಯೇ ಕಳೆಯುತ್ತಿದ್ದನು. ಹೀಗಿರುವಲ್ಲಿ ಒಂದು ದಿನ ಕಂತೆ ಮಾದಪ್ಪನು ತಾನು ನೆಲೆಸಿದ್ದ ಗುಡ್ಡದಲ್ಲಿ ತನ್ನ ಭೌತಿಕ ಶರೀರವನ್ನು ತ್ಯಜಿಸಿ ಪರಶಿವನಲ್ಲಿ ಲೀನವಾದನು. ಅಂದಿನಿಂದ ಈತನ ಭಕ್ತಾದಿಗಳು ಆ ಗುಡ್ಡವನ್ನು ಕಂತೆ ಮಾದಪ್ಪನ ಬೆಟ್ಟವೆಂದು ಕರೆಯತೊಡಗಿದರು.

ಕ್ರಿ. ಶ. 1870ರ ವೇಳೆಯಲ್ಲಿ ಶ್ರೀ ನಂಜುಂಡ ಶಿವಯೋಗಿ ಎಂಬು ವರು ಕಂತೆ ಮಾದಪ್ಪನ ಬೆಟ್ಟದ ಮಹಿಮೆಯನ್ನು ಕಲ್ಪಿಸಿಕೊಂಡು ಅದನ್ನೇ ಧ್ಯಾನ ಮಂದಿರವನ್ನಾಗಿ ಮಾಡಿಕೊಂಡು ಜೀವಿಸುತ್ತಿದ್ದರು.

ನಂಜುಂಡ ಶಿವಯೋಗಿಗಳು ಕಂತೆಮಾದಪ್ಪನ ನೆನಪಿಗಾಗಿ ಒಂದು ಶಿವಲಿಂಗವನ್ನು ಸ್ಥಾಪಿಸಿ, ದೇವಾಲಯವನ್ನು ನಿರ್ಮಾಣ ಮಾಡಿದರು. ಬಹು ಕಡಿದೂ ಎತ್ತರವೂ ಆದ ಆ ಗುಡ್ಡದಲ್ಲಿ ದೇವಾಲಯವನ್ನು ನಿರ್ಮಾಣ ಮಾಡಿದುದು ಒಂದು ಸಾಹಸವೇ ಆಗಿದೆ.

ಮೊದಲು ನೀರಿಗಾಗಿ ಆ ಗುಡ್ಡದ ಮೇಲೊಂದು ಕಲ್ಯಾಣಿಯನ್ನು ತೋಡಿಸಿ ಮೆಟ್ಟಿಲುಗಳನ್ನು ಕಟ್ಟಿಸಿದರು. ದೇವಾಲಯದ ನಿರ್ಮಾಣಕ್ಕೆ ಎತ್ತಿನ ಗಾಡಿಗಳಲ್ಲಿ ಗುಡ್ಡದ ಬುಡದಿಂದ ಮೇಲುಭಾಗಕ್ಕೆ ಕಲ್ಲುಗಳನ್ನು ಸಾಗಿಸಬೇಕಾಗಿತ್ತು. ಎತ್ತುಗಳು ಕಲ್ಲು ತುಂಬಿದ ಗಾಡಿಯನ್ನು ಎಳೆಯ ಲಾರದೆ ಅರ್ಧದಾರಿಯಲ್ಲೇ ನಿಂತುಬಿಡುತ್ತಿದ್ದುವು. ಆಗ ನಂಜುಂಡ ಶಿವ ಯೋಗಿಗಳು ಗುಡ್ಡದ ಮೇಲು ಭಾಗದಲ್ಲೇ ನಿಂತು, 'ಬಸವಾ, ಬಾಪ್ಪಾ' ಎಂದು ಮೃದು ಮಧುರ ಧ್ವನಿಯಿಂದ ಕರೆದ ಕೂಡಲೇ ಎತ್ತುಗಳು ಗಾಡಿ ಯನ್ನು ಎಳೆದುಕೊಂಡು ಬಂದು ಗುಡ್ಡದ ಶಿಖರದ ಮೇಲಿರುತ್ತಿದ್ದುವು. ಜನರು ಇವರ ಆತ್ಮಶಕ್ತಿಯನ್ನು ಕಂಡು ಬೆರಗಾಗುತ್ತಿದ್ದರು.

ನಂಜುಂಡ ಶಿವಯೋಗಿಗಳು ಮೈಸೂರು ಬಳಿಯ ಕೀಳನಪುರ ದಲ್ಲೊಂದು ಬಸವೇಶ್ವರ ದೇವಾಲಯವನ್ನೂ, ಹುಲ್ಲಹಳ್ಳಿ ಬಳಿ ಇರುವ ಕಪಿಲಾ-ಭೃಗು ಸಂಗಮದಲ್ಲಿ ಕಾರೆಯ ಸ್ವಾಮಿಗಳ ಗದ್ದಿಗೆಯ ಮಂಟಪ ವನ್ನೂ ನಿರ್ಮಿಸಿದ್ದಾರೆ.

ನಂಜುಂಡ ಶಿವಯೋಗಿಗಳು ಸಂಗಮಕ್ಕೆ ಹೋಗುವ ವೇಳೆಯಲ್ಲಿ ಪ್ರವಾಹದಿಂದ ತುಂಬಿದ ಭೃಗು ನದಿಯನ್ನು ದಾಟಲು ತೆಪ್ಪದಲ್ಲಿ ಕುಳಿತರೆ ಆ ತೆಪ್ಪವು ಯಾರ ಸಹಾಯವೂ ಇಲ್ಲದೆ ತಾನಾಗಿಯೇ ಇವರನ್ನು ಆಚೆ ದಡಕ್ಕೆ ಕೊಂಡೊಯ್ಯುತ್ತಿದ್ದಿತು-ಎಂದು ಇವರ ಭಕ್ತಾದಿಗಳು ಇಂದಿಗೂ ಹೇಳುತ್ತಾರೆ.

ಹುಲ್ಲಹಳ್ಳಿಯ ವಿರಕ್ತ ಮಠದ ಅಧಿಕಾರಿಯಾಗಿದ್ದ ರುದ್ರ ಮುನಿಗಳೇ ನಂಜುಂಡ ಶಿವಯೋಗಿಯಾಗಿ ಜನ್ಮವೆತ್ತಿದ್ದರು–ಎಂದು ವೀರಶೈವರು ನಂಬುತ್ತಾರೆ.

ನಂಜುಂಡ ಶಿವಯೋಗಿಗಳು ಕಂತೆ ಮಾದಪ್ಪನ ಬೆಟ್ಟದಲ್ಲಿ ಹಲವು ಕಾಲ ಜೀವಿಸಿ, ತಮ್ಮ ಧ್ಯಾನ ಮಂದಿರವಾದ ನೆಲಮಾಳಿಗೆಯಲ್ಲಿಯೇ ತಮ್ಮ ದೇಹ ತ್ಯಾಗ ಮಾಡಿದರು. ಆ ಸ್ಥಳದಲ್ಲಿ ಇವರ ಭಕ್ತಾದಿಗಳು ನಂಜುಂಡ ಶಿವಯೋಗಿಗಳ ಗದ್ದಿಗೆಯನ್ನು ನಿರ್ಮಿಸಿದ್ದಾರೆ.

ಕಂತೆ ಮಾದಪ್ಪನ ಬೆಟ್ಟವು ಪವಿತ್ರಪುಷ್ಕರಣಿ, ವೃಕ್ಷ ಸಮೂಹ, ದೇವಾಲಯಗಳು ಮತ್ತು ಅನ್ನ ಛತ್ರವನ್ನು ಹೊಂದಿ ಒಂದು ಪವಿತ್ರ ತಾಣವಾಗಿ ಭಕ್ತಾದಿಗಳನ್ನ ಆಕರ್ಷಿಸುತ್ತಿದೆ. ಇಲ್ಲಿ ಕಾರ್ತಿಕ ಮಾಸದಲ್ಲಿ ವಿಶೇಷ ಪೂಜೆ ಮತ್ತು ಭಕ್ತಾದಿಗಳಿಂದ ಅನ್ನದಾನ ನಡೆಯುತ್ತದೆ.

### 3. ಹುಲ್ಲಹಳ್ಳಿ ಅಣೆಕಟ್ಟೆ

ಕರ್ನಾಟಕವನ್ನು ಆಳಿದ ಚಕ್ರವರ್ತಿಗಳು, ರಾಜರು, ಪಾಳೆಯಗಾರರು ತಮ್ಮ ಆಧಿಪತ್ಯಕ್ಕೆ ಒಳಪಟ್ಟ ಪ್ರದೇಶಗಳಲ್ಲಿ, ಜನತೆಯಲ್ಲಿ ಆಧ್ಯಾತ್ಮಿಕತೆಯನ್ನು ಬೆಳೆಸಲು ದೇವಾಲಯಗಳನ್ನು ಕಟ್ಟಿಸುವುದು, ಮನರಂಜನೆ ಮತ್ತು ಜ್ಞಾನಾಭಿವೃದ್ಧಿಗೆ ಕಲೆ–ಸಾಹಿತ್ಯಗಳನ್ನು ಬೆಳೆಸುವುದು, ಪ್ರಯಾಣ ಸೌಕರ್ಯಕ್ಕೆ ಸಾಲುಮರಗಳನ್ನು ನೆಡಿಸುವುದು ಮತ್ತು ನೀರಾವರಿ ಸೌಕರ್ಯವನ್ನುಂಟು ಮಾಡಲು ಕೆರೆ, ಕಟ್ಟೆಗಳನ್ನು ಕಟ್ಟಿಸುವುದು ತಮ್ಮ ಕರ್ತವ್ಯವೆಂದು ಭಾವಿಸಿದ್ದರು.

ಕ್ರಿ. ಶ. ಹದಿನಾಲ್ಕನೇ ಶತಮಾನದ ಮಧ್ಯ ಭಾಗದಲ್ಲಿ ಹುಲ್ಲಹಳ್ಳಿ ಮತ್ತು ಸುತ್ತಲ ಪ್ರದೇಶಗಳನ್ನು ಆಳುತ್ತಿದ್ದ ಪೆರ್ಮಿದೇವರಸು ಮತ್ತು ಪೆರುಮಾಳ ದೇವರಸು ಎಂಬ ಸಹೋದರರು ಈ ಪ್ರದೇಶಗಳ ನೀರಾವರಿ ವ್ಯವಸ್ಥೆಗೆ ಆದ್ಯಗಮನ ನೀಡಿದ್ದರು. ಈ ಅರಸು ಸಹೋದರರು ಬಹಳ ಪ್ರಬಲರಾಗಿದ್ದು ತಮ್ಮ ಸೆರೆಯಾಳಾಗಿದ್ದ ಸಮಾಜದ ಕಳ್ಳ ಕಾಕರರು ಮತ್ತು ಶತ್ರು ಪಕ್ಷದ ಸೈನಿಕರನ್ನು ಹುಲ್ಲಹಳ್ಳಿಯ ಅಭಿವೃದ್ಧಿ ಕಾರ್ಯದಲ್ಲಿ ಬಳಸಿಕೊಳ್ಳುತ್ತಿದ್ದರು. ಹುಲ್ಲಹಳ್ಳಿ ಮತ್ತು ಕಣೇನೂರಿನ ನಡುವೆ ಹಾಗೂ ಹುಲ್ಲಹಳ್ಳಿ ಮತ್ತು ಕಾರೆಯದ ನಡುವೆ ಒಂದೊಂದು ಕೆರೆಯನ್ನು ಕಟ್ಟಿಸಿ ದೊಡ್ಡರಸನ ಕೆರೆ ಮತ್ತು ಪುಟ್ಟರಸನ ಕೆರೆ ಎಂದು ಕರೆಯುತ್ತಿ

ದ್ದರು. ದೊಡ್ಡರಸನ ಕೆರೆಯು ಕ್ರಿ. ಶ. 1700ರವರೆಗೂ ನೀರಾವರಿ ಸೌಲಭ್ಯವನ್ನು ಒದಗಿಸುತ್ತಿತ್ತು. ಪುಟ್ಟರಸ ಕೆರೆಯನ್ನು ಇಂದಿಗೂ ಕಾಣ ಬಹುದು.

ಈ ಅರಸರು ತಮ್ಮ ಸೆರೆಯಾಳುಗಳಿಂದಲೇ ಹುಲ್ಲಹಳ್ಳಿಯ ಉತ್ತರ ಭಾಗದಲ್ಲಿ ಕಪಿಲಾನದಿಗೆ ಅಡ್ಡಗಟ್ಟೆಯನ್ನೂ ಹಾಕಿಸಿದರು. ಅಡ್ಡಗಟ್ಟೆ ಎಂದರೆ ನದಿಯ ಎರಡು ದಡಗಳನ್ನೂ ಕೂಡಿಸುವಂತೆ ರಾಶಿ ರಾಶಿ ಕಲ್ಲು ಬಂಡೆಗಳನ್ನು ನದಿಯಲ್ಲಿ ಉರುಳಿಸಿ ಗೋಡೆಯೋಪಾದಿಯಲ್ಲಿ ನಿರ್ಮಿ ಸಿದರು. ಈ ಕಾರ್ಯವು ಎರಡು ಮೂರು ವರ್ಷಗಳವರೆಗೆ ನಡೆದಿರ ಬಹುದು. ನದಿಯ ನೀರು ಈ ಅಡ್ಡಗಟ್ಟೆಯಲ್ಲಿ ನಿಂತು, ಹೆಚ್ಚಿನ ನೀರು ಕಲ್ಲುಗಳ ಮೇಲಿನಿಂದ ಉರುಳಿ ತನ್ನ ಪಾತ್ರದಲ್ಲಿ ಹರಿಯುತ್ತಿತ್ತು. ಈ ಅಡ್ಡಗಟ್ಟೆಯಲ್ಲಿ ನಿಂತ ನೀರಿನಿಂದ ಏತನೀರಾವರಿ ಪದ್ಧತಿಯಲ್ಲಿ ನೆರೆಯ ಭೂಮಿಯು ನೀರಾವರಿಗೆ ಒಳಪಟ್ಟಿತ್ತು. ಕಪಿಲಾನದಿಗೆ ಪ್ರಥಮ ಬಾರಿಗೆ ಹಾಕಿದ ಇತಿಹಾಸ ಪ್ರಸಿದ್ಧವಾದ ಅಡ್ಡಗಟ್ಟೆ ಅಥವಾ ಅಣೆಕಟ್ಟೆಯಿದು. ಮುಂದೆ ಚಾಮರಾಜೇಂದ್ರ ಒಡೆಯರ್ ಅವರು ಮೈಸೂರು ಸಂಸ್ಥಾನದ ಸಿಂಹಾಸನಾರೋಹಣ ಮಾಡಿದ ಮೇಲೆ ಅವರ ಆಳ್ವಿಕೆಯಲ್ಲಿ, ನದಿಗೆ ಹಾಕ ಲಾಗಿದ್ದ ಕಲ್ಲು ಬಂಡೆಗಳ ಅಡ್ಡಗಟ್ಟೆಯನ್ನೇ ಒತ್ತಾಗಿಟ್ಟುಕೊಂಡು 1889 ರಲ್ಲಿ ಭದ್ರವಾದ ಇಟ್ಟಿಗೆ-ಗಾರೆ ಗೋಡೆಯನ್ನು ನಿರ್ಮಿಸಿ ಅಣೆಯನ್ನು ಕಟ್ಟಿ, ನದಿಯ ಎಡ ಮತ್ತು ಬಲ ದಂಡೆಗಳಲ್ಲಿ 55 ಕಿ. ಮೀ. (ರಾಂಪುರನಾಲಾ) ಮತ್ತು 68 ಕಿ. ಮೀ. ಹುಲ್ಲಹಳ್ಳಿ ನಾಲಾ) ಉದ್ದದ ಕಾಲುವೆಗಳನ್ನು ತೋಡಿಸಲಾಯಿತು. ಈ ಅಣೆಕಟ್ಟೆಯ ಉದ್ದ 429 ಮೀಟರ್ ಇದೆ. ಇದರ ಎತ್ತರ 42 ಅಡಿ ಇದೆ. 1500 ಕ್ಯೂಸೆಕ್ಸ್ ನೀರನ್ನು ತಡೆಹಿಡಿ ಯುವ ಸಾಮರ್ಥ್ಯ ಇದಕ್ಕಿದೆ. ಸಮುದ್ರ ಮಟ್ಟಕ್ಕೆ 2199 ಅಡಿ ಎತ್ತರ ದಲ್ಲಿರುವ ಈ ಅಣೆಕಟ್ಟೆಯ ಹುಲ್ಲಹಳ್ಳಿ ನಾಲೆಯಿಂದ 6872 ಎಕರೆ ಪ್ರದೇ ಶವೂ ರಾಂಪುರ ನಾಲೆಯಿಂದ 6,677 ಎಕರೆ ನೀರಾವರಿಗೆ ಒಳಪಟ್ಟಿದೆ. ಈ ಪ್ರದೇಶದ ಜನರಿಗೆ ವರ್ಷದಲ್ಲಿ ಎರಡು ಬಾರಿ ಭತ್ತ ಬೆಳೆಯುವ ಸೌಲಭ್ಯ ವೊದಗಿದೆ. ಪ್ರಸಿದ್ಧ ಹುಲ್ಲಹಳ್ಳಿ ಅಣೆಕಟ್ಟೆಯು ನಂಜನಗೂಡು, ನರಸೀ ಪುರ ಮತ್ತು ಕೊಳ್ಳೇಗಾಲದ ತಾಲ್ಲೂಕಿನ ರೈತರಿಗೆ ಭಾಗ್ಯದೇವತೆಯಾಗಿದೆ.

ಈ ಅಣೆಕಟ್ಟೆಯು ನಂ. 3. ಕಬಿನಿನಾಲಾ ಉಪವಿಭಾಗ, ಹುಲ್ಲ ಹಳ್ಳಿಗೆ ಒಳಪಟ್ಟಿದ್ದು ನೋಡಲು ಮನೋಹರವಾಗಿದೆ. ಪ್ರವಾಹದ ಕಾಲ

ವಾದ ಜೂನ್, ಜೂಲೈ, ಆಗಸ್ಟ್ ತಿಂಗಳಲ್ಲಂತೂ ಜಲದೇವತೆಯು ನರ್ತನವನ್ನೇ ಕಾಣಬಹುದು.

### 4. ಕಾರ್ಯರ್ ಮ್ಯಾಗ್ನಸೈಟ್ ಗಣಿ

'ಭಾರತವು ಬಡವರಿಂದ ಕೂಡಿದ ಶ್ರೀಮಂತ ದೇಶ' ಎನ್ನುವುದು ರೂಢಿ. ಭರತ ಭೂಮಿಯು ಸಂಪತ್ತುಗಳ ಆಗರವಾಗಿದೆ, ಆದರೆ ಅದರ ಬಳಕೆ ಮಾತ್ರ ಸರಿಯಾದ ರೀತಿಯಲ್ಲಿ ಆಗುತ್ತಿಲ್ಲ-ಎಂಬುದು ಇದರ ಭಾವ. ಆದರೂ ನಮ್ಮ ಭೂಗರ್ಭ ವಿಜ್ಞಾನಿಗಳ ಸಂಶೋಧನೆಯ ಫಲವಾಗಿ ಹುಲ್ಲಹಳ್ಳಿಯ ಸಮೀಪದ 'ಕಾರ್ಯರ್ ಮ್ಯಾಗ್ನ ಸೈಟ್ ಗಣಿ' ಯನ್ನು ಪತ್ತೆ ಮಾಡಿ 1982 ರಿಂದ ಮ್ಯಾಗ್ನಸೈಟ್ ಅದುರನ್ನು ಉತ್ಪಾದಿಸಲಾಗುತ್ತಿದೆ. ಈ ಗಣಿ ಉದ್ದಿಮೆಯು ರಾಜ್ಯ ಸರ್ಕಾರದಿಂದ ನಡೆಯುತ್ತಿದ್ದು, ಇದರ ಉತ್ಪಾದನೆಯನ್ನು ಟಾಟಾ ಕಂಪೆನಿ, ಜೆಂಷಡ್‌ಪುರದವರಿಗೆ ಮಾರಾಟ ಮಾಡಲಾಗುತ್ತಿದೆ. ಗಣಿ ಪ್ರದೇಶವು ಮೂವತ್ತು ಎಕರೆ ವಿಸ್ತಾರವನ್ನು ಹೊಂದಿ, 160 ಅಡಿ ಆಳದವರೆಗೂ ಅದುರು ದೊರೆಯುವ ಸಂಭವವಿದೆ. ಅತ್ಯುತ್ಕೃಷ್ಟವಾದ ಈ ಅದುರು ಒಂದು ಟನ್‌ಗೆ ಕನಿಷ್ಠ ರೂ. 400 ರಿಂದ ಗರಿಷ್ಠ ರೂ. 800 ರವರೆಗೂ ಬೆಲೆಯುಳ್ಳದ್ದಾಗಿದೆ. ಪ್ರತಿನಿತ್ಯ 40-55 ಟನ್ ಅದುರನ್ನು ತೆಗೆಯಲಾಗುತ್ತಿದೆ. ಈ ತನಕ ಸುಮಾರು 25,000 ಟನ್ ಮ್ಯಾಗ್ನಸೈಟ್ ಅದುರನ್ನು ಉತ್ಪಾದಿಸಲಾಗಿದ್ದು, ಸುಮಾರು ಮೂವತ್ತು ವರ್ಷಗಳವರೆಗೆ ಈ ಗಣಿ ಉದ್ದಿಮೆ ನಡೆಯಲಿದೆ. ಇಲ್ಲಿ ದೊರೆಯುವ ಮ್ಯಾಗ್ನಸೈಟ್ ಉಪಯೋಗವೂ ಹಿರಿದು. ಕಬ್ಬಿಣವನ್ನು ಕರಗುಸುವಿಕೆಯಲ್ಲಿ ಕುಲುಮೆ (ಡೂಮ್) ಯಂತೆ ಬಳಸಲು, ಒಲೆಕಟ್ಟಲು, ಮೊಜಾಯಿಕ್ಸ್ ಪ್ಲೇಟ್, ಕಾಸ್ಮಾಟಿಕ್ಸ್ ತಯಾರಿಸಲು ಮತ್ತು ಕೆಲವು ರಾಸಾಯನಿಕ ಔಷಧಿಗಳನ್ನು ತಯಾರಿಸಲು ಉಪಯೋಗಿಸುತ್ತಾರೆ.

ಈ ಕಾರ್ಯರ್ ಮ್ಯಾಗ್ನಸೈಟ್ ಗಣಿಯಲ್ಲಿ 500 ಕ್ಕಿಂತಲೂ ಹೆಚ್ಚು ಕಾರ್ಮಿಕರು ದುಡಿಯುತ್ತಿದ್ದಾರೆ. ಇವರಿಗೆ ಸರ್ಕಾರಿ ನೌಕರರ ಸೌಲಭ್ಯಗಳು ದೊರೆಯುತ್ತಿವೆ. ಇಲ್ಲಿನ ಎಲ್ಲ ನೌಕರರು ಸ್ಥಳೀಯರೇ ಆಗಿದ್ದು, ಸುತ್ತಲ ಹಳ್ಳಿಗರಿಗೆ ಈ ಗಣಿ ಒಂದು ವರದಾನವಾಗಿ ನಿರಂತರ ಉದ್ಯೋಗವನ್ನು ನೀಡಿದೆ. ಮುಂದಿನ ದಿನಗಳಲ್ಲಿ ಈ ಗಣಿಯು 500–600 ಜನ ಕಾರ್ಮಿಕರನ್ನು ಹೊಂದಲಿದೆ. ಕಾರ್ಯರ್ ಗಣಿಯ ಉತ್ಪಾದನೆ ಮುಗಿದ

ಬಳಿಕ ಹುಲ್ಲಹಳ್ಳಿಯ ಬಳಿಯೇ ಇರುವ ಮತ್ತೊಂದು ಮ್ಯಾಗ್ನಸೈಟ್ ಗಣಿಯಲ್ಲಿ ಅದುರು ಉತ್ಪಾದನೆ ಪ್ರಾರಂಭಗೊಳ್ಳುವುದು. ಅಂದರೆ ಮುಂದಿನ 70–80 ವರ್ಷಗಳವರೆಗೆ ಹುಲ್ಲಹಳ್ಳಿ ಮತ್ತು ಸುತ್ತಲ ಗ್ರಾಮೀಣರಿಗೆ ಖನಿಜದ ಗಣಿಯಲ್ಲಿ ದುಡಿಯುವ ಸೌಭಾಗ್ಯ ಒದಗಿದೆ.

ಉತ್ತರ ಪ್ರದೇಶ, ತಮಿಳ್ನಾಡು ಹಾಗೂ ಬೆಂಗಳೂರು ಮೈಸೂರು ಜಿಲ್ಲೆಯ ಅಲ್ಲಯ್ಯನಪುರದ ಬಳಿಯ ಶಾಂತಿಪುರ (ನಂಜನಗೂಡು ತಾಲ್ಲೂಕು), ಜಯಪುರ ಬಳಿಯ ಮಾವಿನಹಳ್ಳಿ (ಮೈಸೂರು ತಾಲ್ಲೂಕು), ಕಡಕೊಳಗಳಲ್ಲಿ ಮ್ಯಾಗ್ನಸೈಟ್‌ಗಣಿಗಳಿವೆ. ಆದರೆ ಈ ಕಾರ್‍ಯದ ಗಣಿ ಭಾರತದಲ್ಲೇ ಅತ್ಯುತ್ಕೃಷ್ಟವಾದುದು ಎಂದು ಗುರುತಿಸಲಾಗಿದೆ. ಭಾರತದ ಹೊರಗೆ ಕಾರ್‍ಯದ ಮ್ಯಾಗ್ನಸೈಟನ್ನು ಬಿಡುಗಡೆ ಮಾಡಿಲ್ಲ. ಕಾರಣ ಇದು 'ರೇರ್ ಮಿನರಲ್ಸ್' ಆಗಿದೆ. ಆದ್ದರಿಂದ ಒಳನಾಡಾದ ಒರಿಸ್ಸಾ, ತಮಿಳ್ನಾಡು, ಬಿಹಾರ, ಬೆಂಗಳೂರು, ಆಂಧ್ರಪ್ರದೇಶಗಳಲ್ಲಿ ಮಾತ್ರ ಮಾರಾಟವಾಗುತ್ತದೆ. ಹಾಗೇನಾದರೂ ಹೊರ ರಾಷ್ಟ್ರಗಳಿಗೆ ರಫ್ತು ಮಾಡಿದಲ್ಲಿ ಈ ಕಾರ್‍ಯದ ಮ್ಯಾಗ್ನಸೈಟ್ ಪ್ರಪಂಚದಲ್ಲೇ ಗಣ್ಯದ ಸ್ಥಾನವನ್ನು ಹೊಂದುತ್ತದೆ. ಈ ಕಾರ್‍ಯದ ಗಣಿಯು 'ತೆರೆದ ಗಣಿ' ವರ್ಗಕ್ಕೆ ಸೇರಿದೆ. ಇಂದು ಇಲ್ಲಿಯ ಮ್ಯಾಗ್ನಸೈಟ್ ಉತ್ಪಾದನೆಯ ಶೀಘ್ರತೆಗಾಗಿ ಮಾನವ ಶಕ್ತಿಯ ಜೊತೆಗೆ ಯಂತ್ರವನ್ನೂ ಬಳಸಿ 'ಯಂತ್ರದ ಗಣಿ' ವರ್ಗಕ್ಕೂ ಸೇರಿದೆ.

ಹುಲ್ಲಹಳ್ಳಿಯ ಪರಿಸರವು ಪ್ರಕೃತಿದತ್ತವಾದ ಖನಿಜಸಂಪತ್ತಿನ ಆಗರವನ್ನು ಹೊಂದಿರುವುದು ಒಂದು ಮೇಲ್ಮೆಯೇ ಆಗಿದೆ. ಹುಲ್ಲಹಳ್ಳಿಯ ಬಳಿ ಕಯೋನೇಟ್ ಮತ್ತು ಸಿಲಿಮನೇಟ್‌ಗಳೂ ದೊರೆಯಲಿವೆ.

## 5. ಸಂಗಮ

ಹುಲ್ಲಹಳ್ಳಿಯ ಪಶ್ಚಿಮ ಭಾಗದಲ್ಲಿ 9 ಕಿ. ಮೀ. ದೂರದಲ್ಲಿ, ಭೂಮಿಯನ್ನು ಸೀಳಿಕೊಂಡು ರಾಮಬಾಣದಂತೆ ತೀಕ್ಷ್ಣ ಗತಿಯಲ್ಲಿ ಉತ್ತರಾಭಿಮುಖವಾಗಿ ಹರಿದುಬರುವ ಭೃಗು ನದಿಯು, ವಿಶಾಲ ಪಾತ್ರದಲ್ಲಿ ತುಂಬು ಪ್ರವಾಹದಿಂದ ಮಂದಗಮನೆಯಾಗಿ ಪೂರ್ವಾಭಿಮುಖವಾಗಿ ಹರಿದು ಬರುವ ಪಾವನೆ ಕಪಿಲಾ ನದಿಯನ್ನು ಕೂಡುವ ಪವಿತ್ರ ಸ್ಥಳವೇ 'ಸಂಗಮ' ಎಂದು ಕರೆಯಲ್ಪಡುವ ಸುಕ್ಷೇತ್ರ.

ಈ ಸಂಗಮದ ತಟದಲ್ಲಿ ತ್ರೇತಾಯುಗದಲ್ಲಿ ಶ್ರೀರಾಮಚಂದ್ರನಿಂದ

ಪ್ರತಿಷ್ಠಾಪಿಸಲ್ಪಟ್ಟ ರಾಮೇಶ್ವರ ಲಿಂಗವೂ, ಕ್ರಿ. ಶ. ಹನ್ನೊಂದನೇ ಶತಮಾನದಲ್ಲಿ ಮಹಾನ್ ಶಿವಭಕ್ತನಾದ ರಾಜೇಂದ್ರ ಚೋಳನಿಂದ ಪ್ರತಿಷ್ಠಾಪಿಸಲ್ಪಟ್ಟ ಸಂಗಮೇಶ್ವರ ಲಿಂಗವೂ ಇದೆ. ಈ ಎರಡೂ ಲಿಂಗಗಳು ಒಂದೇ ಗರ್ಭಗುಡಿಯಲ್ಲಿರುವಂತೆ ಚೋಳರಾಜನಿಂದ ದೇವಾಲಯವನ್ನು ನಿರ್ಮಿಸಲ್ಪಟ್ಟ ಈ ಪವಿತ್ರ ಸ್ಥಳವು ಪ್ರಯಾಗಕ್ಕಿಂತಲೂ ಮಿಗಿಲು ಎಂದು ಹೇಳಲಾಗುತ್ತಿದೆ. ಕಾಲಕ್ರಮೇಣ ಈ ದೇವಾಲಯದ ಸುತ್ತಲೂ ಕಾಡು ಬೆಳೆದು ಕ್ರೂರಮೃಗಗಳ ಆವಾಸಸ್ಥಾನವಾಗಿತ್ತು. ಜನ ಸಂಚಾರವೇ ಇಲ್ಲದಿದ್ದ ಈ ಸ್ಥಳದಲ್ಲಿ ಕ್ರಿ ಶ. 1845ರಲ್ಲಿ ಮೊದಲ ಬಾರಿಗೆ ಪವಾಡಪುರುಷ ಕಾರೆಯದ ಸ್ವಾಮಿಗಳು ನೆಲೆಸಿ ತಪೋನಿರತರಾದರು. ಸಂಗಮದ ಪುಣ್ಯತೀರ್ಥದಲ್ಲಿ ಮಿಂದು ಪರಿಶುದ್ಧರಾಗಿ ಸಂಗಮೇಶ್ವರನ ಆರಾಧಕರಾಗಿ ಆತನೊಡನೆ ಸರಸ ಸಂಭಾಷಣೆಯಲ್ಲಿ ತಲ್ಲೀನರಾಗುತ್ತಿದ್ದರು. ಅಂದಿನಿಂದ ಸುತ್ತಲಿನ ಹಳ್ಳಿಯ ಜನರು ಸಂಗಮೇಶ್ವರ ಮತ್ತು ಸ್ವಾಮೀಜಿಯವರ ದರ್ಶನವನ್ನು ಪಡೆದು ಪುನೀತರಾಗಲು ಆಗಮಿಸಲಾರಂಭಿಸಿದರು.

ಮಹಾಮಹಿಮ ಕಾರೆಯ ಸ್ವಾಮಿಗಳ ದಿವ್ಯ ಸ್ಮರಣೆಯನ್ನು ತಂದುಕೊಳ್ಳುವುದೇ ಒಂದು ಮಹದಾನಂದ. ಕ್ರಿ. ಶ. 1839 ರ ಕಾಲ. ಹುಲ್ಲಹಳ್ಳಿಯ ದಕ್ಷಿಣ ಭಾಗದಲ್ಲಿ ಎರಡು ಕಿ. ಮೀ. ದೂರದಲ್ಲಿರುವ ಕಾರೆಯ (ಕಾರ್ಯ) ಗ್ರಾಮದಲ್ಲಿ ಶಿವಭಕ್ತರಾದ ಶಂಭಪ್ಪನವರು ಶ್ರೀಮಂತಿಕೆಯ ವೈಭವದಲ್ಲಿದ್ದರು. ಶಂಭಪ್ಪನವರು ಮನೆಯ ದನಗಳು, ಕುರಿ, ಆಡುಗಳನ್ನು ತಮ್ಮ ಸಹೋದರರಾದ ಮಾದಪ್ಪ, ನಿಂಗಪ್ಪ, ಮತ್ತು ಬಸಪ್ಪನವರಿಗೆ ವಹಿಸಿ, ತಾವು ಮನೆ ಮತ್ತು ತೊಂಭತ್ತು ಏರುಳ ಜಮೀನಿನ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರು.

ಒಂದು ದಿನ ಶಂಭಪ್ಪನವರು ಕಡ್ಲೆ ಹೊಲದಲ್ಲಿ ರಾತ್ರಿ ಕಾವಲಿದ್ದು ಬೆಳಗಿನ ಜಾವದಲ್ಲಿ ಮನೆ ಕಡೆ ಬರುತ್ತಿದ್ದರು. ತಮ್ಮ ಮನೆಯ ಮುಂದಿನ ಜಗಲಿಯ ಮೇಲೆ ಉದ್ದನೆಯ ಕರಿಕಂಬಳಿಯನ್ನು ಹೆಗಲ ಮೇಲೆ ಹಾಕಿಕೊಂಡು, ಕಾವಿಬಟ್ಟೆಯನ್ನು ಧರಿಸಿ, ಲಿಂಗವನ್ನು ಕಟ್ಟಿದ ಕೆಂಪುವಸ್ತ್ರವೊಂದು ಕೊರಳಲ್ಲಿ ಅಲಂಕರಿಸಿ ಕುಳಿತಿದ್ದ ಸುಮಾರು ಹತ್ತು ವರ್ಷ ವಯಸ್ಸಿನ ಬಾಲಕನನ್ನು ಶಂಭಪ್ಪನವರು ನೋಡಿದರು. ಮುದ್ದು ಮುದ್ದಾಗಿ ಆಕರ್ಷಕವಾಗಿದ್ದ ಆ ಬಾಲಕನಲ್ಲಿ ಶಂಭಪ್ಪನವರಿಗೆ ಪ್ರೀತಿ, ಅನುರಾಗದ ಜೊತೆಗೆ ಗೌರವವೂ ಉಂಟಾಯಿತು. ಶಂಭಪ್ಪನವರು ಆ

ಬಾಲಕನನ್ನು ಕುರಿತು, 'ಯಾರಪ್ಪ ನೀನು' ಎಂದರು. 'ನಾನು ಉತ್ತರ ದೇಶ ಅಪ್ಪಾಜಿ' ಎಂದನು ಆ ಬಾಲಕ. 'ಅಪ್ಪಾಜಿ' ಎಂಬ ಶಬ್ದ ಶಂಭಪ್ಪ ನವರಿಗೆ ತುಂಬಾ ಆಪ್ಯಾಯಮಾನವಾಗಿ ಕೇಳಿಸಿತು. 'ನಮ್ಮಟ್ಟೇಲೇ ಇರ್ತೀಯೇನಪ್ಪಾ' ಎನ್ನಲು, 'ಇರ್ತೀನಪ್ಪಾಜಿ' ಎಂದು ಹೇಳಿದ ಬಾಲ ಯತಿಯಂತಿದ್ದ ಆ ಬಾಲಕನನ್ನು ಶಂಭಪ್ಪನವರು ಅತ್ಯಂತ ಸಂತೋಷದಿಂದ ಮನೆಯೊಳಗೆ ಕರೆದೊಯ್ದರು. ಶಂಭಪ್ಪನವರ ಮನೆ ಮಂದಿಗೆಲ್ಲಾ ಬಾಲ ಕನು ಅಚ್ಚುಮೆಚ್ಚಾದನು. ಪ್ರತಿನಿತ್ಯ ಆ ಬಾಲ ಯತಿಯು ಸ್ನಾನಾದಿ ಗಳನ್ನು ಮಾಡಿ ಶಿವ ಪೂಜೆಯನ್ನು ಮಾಡುತ್ತಿದ್ದನು. ಶಂಭಪ್ಪನವರ ಮತ್ತು ಅವರ ತಮ್ಮಂದಿರ ಪತ್ನಿಯರು ಶಿವಪೂಜೆಗೆ ಸಲಕರಣೆಗಳನ್ನು ಒದಗಿಸುತ್ತಿದ್ದರು. ಈ ದಿವ್ಯಬಾಲಕನು ಕಾರೆಯ ಗ್ರಾಮದಲ್ಲಿ ಪವಾಡ ಪುರುಷನಾಗಿ ಮೆರೆದನು.

ತೊಂಭತ್ತು ಏರುಳ ಜಮೀನನ್ನು ಹೊಂದಿದ್ದ ಶಂಭಪ್ಪನವರ ಮನೆ ಯಲ್ಲಿ ಏಳು ಜನ ಜೀತಗಾರರಿದ್ದರು. ದನ, ಕುರಿ, ಆಡುಗಳನ್ನು ಕಾಡಿ ನಲ್ಲಿ ಮೇಯಿಸಿಕೊಂಡು ಬರುವುದು, ಜಮೀನನ್ನು ಉತ್ತು, ಕುಂಟೆ ಹೊಡೆಯುವುದು, ಫಸಲು ಬಂದ ಕಾಲದಲ್ಲಿ ಒಕ್ಕಣೆ ಮಾಡುವುದು ಮೊದಲಾದ ಕೆಲಸಗಳನ್ನು ಜೀತಗಾರರು ಮಾಡುತ್ತಿದ್ದುದನ್ನು ಗಮನಿಸು ತ್ತಿದ್ದ ಬಾಲಯತಿಯು, 'ನಾನೂ ದನ ಕಾಯುತ್ತೇನೆ, ಅಪ್ಪಾಜಿ' ಎಂದು ಶಂಭಪ್ಪನವರಿಗೆ ತಿಳಿಸಿ ದನಗಳನ್ನು ಅಟ್ಟಿಕೊಂಡು ಊರ ಮುಂದಿನ ಕಾಡಿ ನಲ್ಲಿ ಮೇಯಿಸುತ್ತಿದ್ದನು. ಈ ವೇಳೆಯಲ್ಲಿ ಆ ಬಾಲಕನು ಕಾಡಿನಲ್ಲಿ ಕಣ್ಣಿಗೆ ಕಂಡ ಹೆಂಟೆಗೊದ್ದ, ಹಾವುರಾಣಿಗಳನ್ನು ಹಿಡಿದು ಜೀವಸಹಿತ ಕಾಡಿನ ನಡುವೆ ಇದ್ದ ಒಂದು ಕೊಳದ ನೀರಿನಲ್ಲಿ (ಈ ಕೊಳ ಈಗಲೂ ಇದೆ) ಅದ್ದಿ ಮೇಲೆತ್ತಿದರೆ ಅವು ಸುಗಂಧಭರಿತ ಹೂವಿನ ಸರವಾಗು ತ್ತಿದ್ದವು. ಅದನ್ನು ನೋಡಿದ ದನಕಾಯುವ ಹುಡುಗರು ಸಂತೋಷ ಆಶ್ಚರ್ಯದಿಂದ ಕುಣಿದಾಡುತ್ತಿದ್ದರು.

ಮನೆಯಲ್ಲಿ ಹಸುವಿನ ಹಾಲನ್ನು ಕರೆಸಲು ಈ ಬಾಲಕನೇ ಮುಂದಾಗಿ ಬಂದು ಕೊಟ್ಟಿಗೆಯಲ್ಲಿ ಕರುಗಳನ್ನು ಬಿಡುತ್ತಿದ್ದನು. ಈ ಕರುಗಳು ಬಾಲಕನ ಸುತ್ತ ಹುಲಿ ಮರಿಗಳ ರೂಪದಲ್ಲಿ ಕುಣಿದಾಡು ತ್ತಿದ್ದುವು. ಬಾಲಕನು 'ಅಯ್ಯೋ! ಅಯ್ಯೋ! ಹೀಗೆ ನೀವು ಹುಲಿ ರೀತಿ ಕುಣಿದರೆ ನನ್ನ ಮಾನ ಉಳೀತದಾ, ಬೇಡ ಕಣ್ರಪ್ಪೋ, ಮನೆ

ಮುಂದ್ಯಲ್ಲಾ ಹೆದರ್ಕ್ಕೋತಾರೆ' ಎನ್ನುತ್ತಿದ್ದಂತೆಯೇ ಅವು ಮತ್ತೆ ಕರುವಿನ ರೂಪದಲ್ಲಿ ತಮ್ಮ ತಾಯಿ ಹಸುವಿನ ಬಳಿಗೆ ಓಡುತ್ತಿದ್ದುವು. ಬಾಲಕನ ಮಾತುಗಳನ್ನು ಕೇಳಿದ ಶಂಭಪ್ಪನವರ ಪತ್ನಿ ಸುಬ್ಬಮ್ಮನು, 'ಏನ್ಬುದ್ದೀ, ಕರುಗಳ ಜೊತ ಮಾತಾಡ್ತಿದ್ರಿ' ಎಂದರೆ, 'ಈ ಕರುಗಳು ಹೇಳ್ದ ಮಾತ್ನೇ ಕೇಳಲ್ಲ ಕಣ್ರವ್ವೋ, ಸುಮ್ಕೆ ಥಕ ಥಕ ಅಂತ ಕುಣೀತವೆ' ಎನ್ನುತ್ತಿದ್ದನು. ಸುಬ್ಬಮ್ಮನಕ್ಕು ಹಾಲು ಕರೆಯಲು ಹೋಗುತ್ತಿದ್ದಳು.

ಒಂದುದಿನ, ಕಾಡಿನಲ್ಲಿ ಮೇಯಿಸಲೆಂದು ದನಗಳನ್ನು ಅಟ್ಟಿ ಕೊಂಡು ಹೋದ ಬಾಲಕನು ಊರ ಮುಂದಿನ ಶಂಭಪ್ಪನವರ ಅವರೆ ಹೊಲದಲ್ಲಿ ದನಗಳನ್ನು ಬಿಟ್ಟು, ತಾನು ಹೊಲದ ಬಳಿ ಇದ್ದ ವೀರಭದ್ರ ದೇವರ ಗುಡಿಯೊಳಗೆ ಹೋಗಿ ಎಷ್ಟು ಹೊತ್ತಾದರೂ ಹೊರಕ್ಕೆ ಬರಲೇ ಇಲ್ಲ. ಶಂಭಪ್ಪನವರು ತಮ್ಮ ಮನೆಯ ಮುಂದೆ ನಿಂತು ಹೊಲದ ಕಡೆ ನೋಡಿದರು. ಹೊಲದ ತುಂಬಾ ತಮ್ಮದೇ ದನಗಳು ಮೇಯುತ್ತಿದ್ದುವು. ಬಾಲಕನು ಮಾತ್ರ ಕಾಣಲಿಲ್ಲ. ಶಂಭಪ್ಪನವರಿಗೆ ಗಾಬರಿಯಾಗಿ 'ಒಳ್ಳೇ ಬುದ್ಧ್ಯೋರ್ ಆದ್ರಲ್ಲಪ್ಪಾ, ದನಗಳು ಅವರೆ ತಾಳ್ನೆಲ್ಲಾ ಮೇಯ್ತಾ ಇವೆ ಯಲ್ಲಾ' ಎನ್ನುತ್ತಾ ಓಡಿ ಬಂದು ವೀರಭದ್ರ ದೇವರಗುಡಿ ಹತ್ತಿರ ನಿಂತು 'ಓ ! ಬುದ್ಧ್ಯೋರಾ !' ಎಂದು ಕೂಗಿದರು. ಬಾಲಕ ಗುಡಿಯಿಂದ ಹೊರ ಬಂದನು. ಶಂಬಪ್ಪನವರು, 'ದನಗಳ್ನೆಲ್ಲಾ ಹಿಂಗ್ಯಾಕೆ ಬಿಟ್ಟದೀರಿ' ಎನ್ನಲು ಬಾಲಕನು, 'ಅಪ್ಪಾಜಿ, ದನಗಳು ಅವರೆ ತಾಳ್ನ ಮುಟ್ಟಾಕಿಲ್ಲ ಅಪ್ಪಾಜಿ, ಮಧ್ಯೆ ಮಧ್ಯೆ ಬೆಳೆದಿರೋ ಕಳೆಹುಲ್ನ ಮೇಯ್ತವೆ ಅಷ್ಟೇ ಅಪ್ಪಾಜಿ' ಎಂದು ಮೃದು ಮಧುರವಾದ ಧ್ವನಿಯಲ್ಲಿ ನುಡಿದನು. ಶಂಭಪ್ಪ ನವರು ಆಶ್ಚರ್ಯದಿಂದ ಅವರೆ ತಾಳಿನ ಹೊಲವನ್ನೆಲ್ಲಾ ಸುತ್ತಿ ಬಂದರು. ಹೊಲವು ಕಳೆ ರಹಿತವಾಗಿ ಬರಿಯ ಅವರೆ ತಾಳಿನಿಂದಲೇ ತುಂಬಿ ತುಳುಕು ತ್ತಿದ್ದುವು. ಶಂಭಪ್ಪನವರಿಗೆ ತಡೆಯಲಾರದ ಆನಂದವುಂಟಾಗಿ ಕಣ್ಣಿನಲ್ಲಿ ಆನಂದಬಾಷ್ಪಗಳುದುರಿದುವು.

ಹೀಗೆಯೇ ಹಲವು ದಿನಗಳವರೆಗೂ ಬಾಲಕನು ದನಗಳೊಂದಿಗೆ ಕಾಡಿಗೆ ಬರುವುದು, ದನಗಳಿಗೆ ನಿಗದಿಯಾದ ಪ್ರದೇಶವನ್ನು ತೋರಿಸಿ, ಅಲ್ಲಿಯೇ ಮೇಯುವಂತೆ ಹೇಳಿ ವೀರಭದ್ರದೇವರ ಬಳಿ ಏಕಾಂತವಾಗಿ ಮಾತನಾಡುವುದು, ಸಂಜೆಯಾಯಿತೆಂದರೆ ದನಗಳೊಂದಿಗೆ ಮನೆಗೆ ಬರು ವುದು ರೂಢಿಯಾಗಿತ್ತು. ಅಂದು ಮಾವಿನ ಹಣ್ಣಿನ ಕಾಲ. ಮನೆಯ

ಆಳುಗಳ ಜೊತೆಯಲ್ಲಿ ದನಗಳೊಂದಿಗೆ ಕಾಡಿಗೆ ಹೋಗಿದ್ದನು. ಬಾಲಕನು ಆಳುಗಳನ್ನು ದನಗಳ ಬಳಿಯೇ ಬಿಟ್ಟು ತಾನು ಕಾಡಿನ ಮಧ್ಯೆ ಹೋಗಿ ಯಾರಿಗೂ ಕಾಣದ ಸ್ಥಳದಲ್ಲಿ ಕುಳಿತು ತಾನು ತಂದಿದ್ದ ಮಾವಿನ ಹಣ್ಣನ್ನು ತಿಂದು ಅದರ ಓಟೆಯನ್ನು ನೆಲದಲ್ಲಿ ಹೂತು, ತಂಬಿಗೆಯಲ್ಲಿದ್ದ ನೀರನ್ನು ಸುರಿದು, 'ವೃದ್ಧಿಯಾಗು' ಎಂದು ಹೇಳಿ ಧ್ಯಾನಕ್ಕೆ ಕುಳಿತನು. ಧ್ಯಾನ ಸ್ಥಿತಿಯಲ್ಲಿದ್ದ ಬಾಲಕನು ಭೂಮಿಯನ್ನು ಬಿಟ್ಟು ಸುಮಾರು ಹದಿನೈದು ಅಡಿ ಎತ್ತರದಲ್ಲಿ ಅಂತರಿಕ್ಷದಲ್ಲಿ ಕುಳಿತಿದ್ದನು. ಈ ಅದ್ಭುತ ದೃಶ್ಯವನ್ನು ದೂರದಿಂದಲೇ ನೋಡಿದ ದನಕಾಯುವ ಆಳುಗಳು, 'ಓ ! ಬುದ್ಯೋರು ಹ್ಯಾಂಗ್ ಮ್ಯಾಲಕ್ಕೆ ಓಯ್ತಾ ಅವ್ರೆ ನೋಡ್ರೋ' ಎಂದು ಒಂದೇ ಸಮನೆ ಕೂಗಿಕೊಂಡರು. ಕೂಡಲೇ ಬಾಲಕನು ಭೂಮಿಗಿಳಿದು ವೀರ ಭದ್ರ ದೇವರ ಗುಡಿಯತ್ತ ನಡೆದನು. ಈ ಬಾಲಕನು ನೆಟ್ಟ ಮಾವಿನ ಬೀಜವು ಮೊಳೆತು ಹೆಮ್ಮರವಾಗಿ ಸುಮಾರು 125 ವರ್ಷಗಳ ಕಾಲ ಸಮೃದ್ಧ ಫಲವನ್ನು ನೀಡಿತು. (ಈಗ್ಗೆ ಸ್ವಲ್ಪ ದಿನಗಳ ಹಿಂದೆ ಹುಲ್ಲ ಹಳ್ಳಿಯ ವಿರಕ್ತ ಮಠದ ಹಲಗೆ ಮುಂತಾದ ಮರದ ಸಾಮಾನುಗಳ ಬಳಕೆಗೆ ಈ ಮಾವಿನ ಮರವು ಉಪಯೋಗವಾಯಿತು.)

ಹೊಲದಿಂದ ಮತ್ತು ಕಾಡಿನಿಂದ ಮನೆಗೆ ಬರುವಾಗ ಬಾಲಕನು ದಾರಿಯಲ್ಲಿದ್ದ ಸಣ್ಣ ಸಣ್ಣ ಬೆಣಚು ಕಲ್ಲುಗಳನ್ನು ಆರಿಸಿ ಮಡಿಲಿಗೆ ಹಾಕಿಕೊಂಡು ಬಂದು ಮನೆಯಲ್ಲಿ ಸುಬ್ಬಮ್ಮನಿಗೆ, 'ಅವ್ವಾ, ಬೆಣಚು ಕಲ್ಲಿನ ತಾಳ್ದ ಮಾಡ್ಕೊಡವ್ವ' ಎಂದು ಮೊರದಲ್ಲಿ ಸುರಿದನು. ಸುಬ್ಬಮ್ಮನು, 'ಹಂಗಂದ್ರೇನ್ ಬುದ್ಧೀ, ಬೆಣಚು ಕಲ್ನಲ್ಲಿ ತಾಳ್ದ ಮಾಡೋಕಾಯ್ತದಾ' ಎಂದು ಆಶ್ಚರ್ಯದಿಂದ ಕೇಳಿದರೆ, 'ನೀ ಸುಮ್ನೆ ಮಾಡ್ಕೊಡವ್ವಾ, ಆಯ್ತದೆ' ಎಂದ ಆ ಬಾಲಕನ ಮಾತಿನಲ್ಲಿ ಅಪಾರ ನಂಬಿಕೆಯನ್ನು ಹೊಂದಿದ್ದ ಸುಬ್ಬಮ್ಮನು ಆ ಬೆಣಚು ಕಲ್ಲುಗಳನ್ನು ನೀರಿನ ಪಾತ್ರೆಯಲ್ಲಿ ಸುರಿದು ಒಲೆಯ ಮೇಲಿಟ್ಟು ಬೇಯಿಸಿ ತೆಗೆದರೆ ಬೆಂದ ಹಲಸಿನ ಬೀಜಗಳಾದುವು. ಮನೆಮಂದಿಯೆಲ್ಲಾ ಅದನ್ನು ತಿಂದು ಸಂತೋಷ ಮತ್ತು ಆಶ್ಚರ್ಯವನ್ನು ಹೊಂದಿದರು.

ಒಂದು ಸಂಜೆ ಬಾಲಕನು ಕಾಡಿನಲ್ಲಿ ಮೇಯ್ದ ದನಗಳನ್ನು ಆಳುಗಳ ಜೊತೆಯಲ್ಲಿ ಮನೆಗೆ ಕಳುಹಿಸಿ ವೀರಭದ್ರ ದೇವರ ಗುಡಿಯ ಬಳಿ ಇರುವ ಕೊಳದತ್ತ ನಡೆದನು. ತನ್ನ ಬಟ್ಟೆಗಳನ್ನು ಕಳಚಿ ನೀರಿಗಿಳಿದು

ಸ್ನಾನವನ್ನು ಮಾಡಿ ದೇಹದ ಹೊರಭಾಗವನ್ನು ತಿಕ್ಕಿ ತೊಳೆದನು. ನಂತರ ಸುತ್ತಲೂ ನೋಡಿ ಕೊಳದ ಬಳಿ ಯಾರೂ ಇಲ್ಲವೆಂಬುದನ್ನು ಖಚಿತ ಪಡಿಸಿಕೊಂಡು, ಹೊಟ್ಟೆಯ ಒಳಭಾಗದ ಅಂಗಾಂಗಗಳನ್ನು ತನ್ನ ಗುದ ದ್ವಾರದಿಂದ ಹೊರತೆಗೆದು ಅವುಗಳನ್ನು ನೀರಿನಲ್ಲಿ ಶುಚಿಗೊಳಿಸಿ ಮತ್ತೆ ದೇಹದೊಳಕ್ಕೆ ಸೇರಿಸಿಕೊಳ್ಳುತ್ತಿದ್ದನು. ಈ ರೀತಿಯ ಹಠಯೋಗದಿಂದ ಶುಚಿತ್ವವನ್ನು ತಿಂಗಳಿಗೊಮ್ಮೆ ಮಾಡುತ್ತಿದ್ದನು. ಒಂದುದಿನ ಆಕಸ್ಮಾತ್ತಾಗಿ ಈ ದೃಶ್ಯವು ಯಾರೋ ಒಬ್ಬರ ಕಣ್ಣಿಗೆ ಬೀಳಲು ಊರ ಲ್ಲೆಲ್ಲಾ ಈ ಸುದ್ದಿ ಹಬ್ಬಿತು.

ಈ ಬಾಲಕನು ಅತ್ಯಂತ ಜನಪ್ರಿಯನಾಗಿ, ಹಲವಾರು ಜನರು ತಮ್ಮ ತೊಂದರೆಗಳನ್ನೋ, ವಾಸಿಯಾಗದ ರೋಗಗಳನ್ನೋ ಈತನ ಬಳಿ ಹೇಳಿಕೊಂಡು ಪರಿಹಾರವನ್ನು ಪಡೆಯುತ್ತಿದ್ದರು. ರೋಗಗ್ರಸ್ತ ಜನರಿಗೆ ಬಾಲಕನು ವಿಭೂತಿಯನ್ನು ಮಂತ್ರಿಸಿ ಕೊಟ್ಟರೆ ಅದನ್ನು ಸೇವಿಸಿದ ಮಾತ್ರ ದಿಂದಲೇ ಗುಣ ಮುಖರಾಗುತ್ತಿದ್ದರು. ಒಂದು ದಿನ ಶಂಭಪ್ಪನವರ ತಮ್ಮ ಕುರಿನಿಂಗಪ್ಪನ ಸುಮಾರು ಮೂರು ವರ್ಷದ ಮಗುವಿಗೆ ವಿಪರೀತವಾದ ಜ್ವರ ಬಂದಿತು. ಮನೆಯಲ್ಲಿದ್ದ ಈ ಬಾಲಯೋಗಿಯು ಮಗುವಿನ ಸ್ಥಿತಿ ಯನ್ನು ನೋಡಿ ವಿಭೂತಿಯನ್ನು ಮಂತ್ರಿಸಿ, ಮಗುವಿನ ಹಣೆಗಿಟ್ಟು, ಬಾಯಿಗೆ ಒಂದು ಚಿಟಿಕೆಯನ್ನು ಹಾಕಿದನು. ಮಗುವಿನ ತಾಯಿಯು ಗಾಬರಿಯಿಂದ 'ಮಗು ಗುಣವಾದರೆ ನಂಜನಗೂಡಿನ ಶ್ರೀಕಂಠೇಶ್ವರನಿಗೆ ಪೌರ್ಣಮಿ ಸೇವೆ ಮಾಡ್ತೀನಿ' ಎಂದೂ ಹರಕೆ ಹೊತ್ತಳು. ಮಗು ಒಂದೇ ದಿನದಲ್ಲಿ ಸಂಪೂರ್ಣ ಆರೋಗ್ಯವನ್ನು ಹೊಂದಿ ಆಟವಾಡುವಂತಾ ಯಿತು. ಮಗುವಿನ ತಾಯಿ ಹರಸಿಕೊಂಡಿದ್ದ ಪೌರ್ಣಮಿ ಹತ್ತಿರ ಬಂದಿತು. ಆಕೆಯು ಗಂಡನಿಗೆ, 'ನಾನು ಮಗೂನ ಕರ್ಕೊಂಡು ಹೋಗಿ ನಂಜನಗೂಡಿನಲ್ಲಿ ಪೌರ್ಣಮಿ ಸೇವೆ ಮಾಡ್ಕೊಂಡು ಬರ್ತೀನಿ' ಎಂದು ಹೇಳಿದಳು. ಬಳಿಯಲ್ಲೇ ಇದ್ದ ಶಿವಯೋಗಿ ಬಾಲಕನು, 'ಯಾಯ್ದೇವರ ಮುಂದೆ ಪ್ಯಾಯ್ದೇವರ ? ಸುಮ್ಕಿರವ್ವೋ, ನಿನ್ನ ಕೂಸ್ಗೆ ಯಾವ ತೊಂದ್ರೆ ಆದರೂ ನಾಸಿದೀನಿ' ಎಂದನು. ಆಕೆಯು, 'ಸುಮ್ನಿರಿ. ಬುದ್ಯೋ, ನಾನು ಹರಸ್ಕೊಂಡಿವ್ನಿ ಹೋಗ್ ಬತ್ತೀನಿ.' ಎಂದು ನಂಜನಗೂಡಿಗೆ ದೇವರ ಸೇವೆಗೆಂದು ಹೋಗುತ್ತಿದ್ದ ಇನ್ನೂ ಕೆಲವು ಜನರ ಜೊತೆಯಲ್ಲಿ ಮಗುವನ್ನು ಎತ್ತಿಕೊಂಡು ಹೊರಟಳು. ಸಂಚಾರ ಸೌಲಭ್ಯವಿಲ್ಲದ ಆ

ಕಾಲದಲ್ಲಿ ಕಾಡಿನ ಮಧ್ಯೆ ನಡೆದೇ ಹೋಗಬೇಕಾಗಿತ್ತು. ಕಾರೆಯದಿಂದ ಹೊರಟ ಈ ಜನರು ಹುಲ್ಲಹಳ್ಳಿ, ಹೆಗ್ಗಡಹಳ್ಳಿಯನ್ನು ದಾಟಿ ದೇಬೂರಿನ ಬಳಿಗೆ ಬಂದರು. ಅಷ್ಟರಲ್ಲಿ ತಾಯಿಯ ಕಂಕುಳಲ್ಲಿದ್ದ ಮಗು ತನ್ನ ತಲೆಯನ್ನು ಜೋತು ಬೀಳಿಸಿತು. ಮಗುವಿನ ಸ್ಥಿತಿಯನ್ನು ಕಂಡು ಆ ಜನರಿಗೆ ಹೆದರಿಕೆಯಾಯಿತು. ಮಗುವಿನ ತಾಯಿಯು ದಾರಿಯಲ್ಲೇ ಕುಳಿತುಕೊಂಡು ಮಗುವನ್ನು ತೊಡೆಯ ಮೇಲೆ ಹಾಕಿಕೊಂಡಳು. ಮಗು ಕಣ್ಮುಚ್ಚಿತು. ಪ್ರಾಣಪಕ್ಷಿ ಹಾರಿಹೋಯಿತು. ಗುಂಪಿನಲ್ಲಿದ್ದ ಕೆಲವರು ಈಕೆಗೆ ಸಮಾಧಾನ ಹೇಳಿ ಪ್ರಯಾಣವನ್ನು ಮುಂದುವರಿಸಿದರು. ಮೂರ್ನಾಲ್ಕು ಮಂದಿ ಈಕೆಯ ಸಹಾಯಕ್ಕೆ ನಿಂತು, ದಾರಿಯ ಬದಿಯಲ್ಲಿ ಒಂದು ಹಳ್ಳವನ್ನು ತೋಡಿ ಮಗುವನ್ನು ಹೂತರು. ಆಕೆಯೊಂದಿಗೆ ತಮ್ಮ ಊರಿಗೆ ಮರಳಿದರು. ಅಂದಿನಿಂದ ಯೋಗಿ ಬಾಲಕನು ಮಗುವಿನ ಸಾವಿಗೆ ಕಾರಣಳಾದ ಆಕೆಯನ್ನು 'ತನ್ನ ಶಿವಪೂಜೆಗೆ ಸಹಕರಿಸಬೇಡ, ಏನನ್ನೂ ಇಡಬೇಡ' ಎಂದು ಹೇಳಿದನು.

ಬಾಲಕನಿಗೆ ಜೀವದಯೆ ಬಹಳವಾಗಿತ್ತು. ಶಂಭಪ್ಪನವರ ಮನೆಯಲ್ಲಿದ್ದ ಒಂದು ಬೆಕ್ಕು ಮನೆಯ ಹಾಲನ್ನು ಕುಡಿದು ಓಡಾಡಿಕೊಂಡಿತ್ತು. ಒಂದು ದಿನ ಆ ಬೆಕ್ಕು ಅಡಿಗೆ ಮನೆಯಲ್ಲಿದ್ದ ಹಾಲನ್ನು ಕದ್ದು ಕುಡಿಯಿತು ಎಂಬ ಕೋಪದಿಂದ ಕೂವೆ ಬಸಪ್ಪನ ಹೆಂಡತಿಯು ಒಂದು ಸೌದೆ ಸೀಳಿನಿಂದ ಬಲವಾಗಿ ಹೊಡೆಯಲು ಆ ಏಟಿಗೆ ಬೆಕ್ಕು ಪ್ರಾಣವನ್ನು ಬಿಟ್ಟಿತು. ಬೆಕ್ಕನ್ನು ಕೊಂದ ಬಸಪ್ಪನ ಹೆಂಡತಿಯನ್ನೂ ಶಿವಪೂಜೆಯ ವೇಳೆಯಲ್ಲಿ ಬಾಲಕನು ಹತ್ತಿರ ಸೇರಿಸುತ್ತಿರಲಿಲ್ಲ.

ಈ ಬಾಲಯೋಗಿಯು ಕಾರೆಯ ಗ್ರಾಮಕ್ಕೆ ಬಂದು ಈಗಾಗಲೇ ಆರು ವರ್ಷಗಳಾಗಿದ್ದುವು. ಬಾಲಕನು ಈ ಗ್ರಾಮವನ್ನು ಬಿಟ್ಟು ಹೊರಡುವ ಕಾಲ ಬಂದಿತು. ಶಂಭಪ್ಪನವರ ಹೊಲದಲ್ಲಿ ಜೋಳವು ಕುಯ್ಲಿಗೆ ಬಂದಿತ್ತು. ಪ್ರತಿನಿತ್ಯ ಶಂಭಪ್ಪನವರು ಮತ್ತು ಅವರ ಮೂವರು ತಮ್ಮಂದಿರು ಹೊಲದಲ್ಲಿ ಅಟ್ಟಿ ಕಟ್ಟಿಸಿಕೊಂಡು ರಾತ್ರಿವೇಳೆ ಕಾವಲಿರುತ್ತಿದ್ದರು. ಈ ಬಾಲಕನೂ ಒಂದು ದಿನ 'ಅಪ್ಪಾಜಿ, ನನಗೂ ಒಂದು ಅಟ್ಟಿ ಕಟ್ಟಿಸಿಕೊಡು, ನಾನೂ ಕಾವಲಿಗೆ ಬರ್ತೀನಿ' ಎಂದು ಹಠ ಹಿಡಿದನು. ಶಂಭಪ್ಪನವರು ಬಾಲಕನ ಮಾತನ್ನು ಎಂದೂ ತಿರಸ್ಕರಿಸಿದವರಲ್ಲ. 'ಆಗಲಿ ಬನ್ನಿ ಬುದ್ಧಿ' ಎಂದು ಬಾಲಕನಿಗೆ ಪ್ರತ್ಯೇಕವಾದ ಅಟ್ಟಿಯನ್ನು

ಕಟ್ಟಿಸಿಕೊಟ್ಟರು. ರಾತ್ರಿ ಮನೆಯಲ್ಲಿ ಊಟವನ್ನು ಮಾಡಿ ಶಂಭಪ್ಪನವರು ಮತ್ತು ಅವರ ತಮ್ಮಂದಿರು ಬಾಲಕನೊಡನೆ ಹೊಲದತ್ತ ನಡೆದು ಅಟ್ಟಿಯನ್ನು ಏರಿ ಕುಳಿತರು. ಚಂದ್ರನ ಬೆಳಕು ಹಾಲಿನಂತೆ ಚೆಲ್ಲಿತ್ತು. ಸುಮಾರು ಮಧ್ಯರಾತ್ರಿಯ ಸಮಯ, ಕೊನೇ ಹಳ್ಳದಿಂದ ಒಂದು ಭಯಂಕರವಾದ ಹುಲಿ ಗರ್ಜಿಸುತ್ತಾ ಬಂದು ಜೋಳದ ಹೊಲದಲ್ಲಿ ಹಾಕಿದ್ದ ಅಟ್ಟಿಯ ಬಳಿ ನಿಂತು, ತನ್ನ ಎರಡೂ ಮುಂಗಾಲುಗಳ ಉಗುರುಗಳಿಂದ ನೆಲವನ್ನು ಕೆರೆಯುತ್ತಾ ಎದೆ ಬಿರಿಯುವಂತೆ ಗರ್ಜಿಸತೊಡಗಿತು. ಅಟ್ಟಿಯಲ್ಲಿದ್ದ ಶಂಭಪ್ಪನವರು ಮತ್ತು ಅವರ ತಮ್ಮಂದಿರು ಕುಳಿತಲ್ಲೇ ಭಯದಿಂದ ನಡುಗತೊಡಗಿದರು. ಬಾಲಕನು ಎಲ್ಲರಿಗೂ ಧೈರ್ಯವನ್ನು ಹೇಳಿ ತನ್ನ ಅಟ್ಟಿಯನ್ನು ಇಳಿದು ಬಂದು, ಹುಲಿಯ ತಲೆ ಮತ್ತು ಬೆನ್ನನ್ನು ನೇವರಿಸಿ 'ಯಾಕಪ್ಪ ಬಂದೆ, ನಮ್ಮ ಅಪ್ಪಾಜಿ ಹೆದರ್ಕ್ಯೋತಾರೆ. ಗಲಾಟೆ ಮಾಡ್ಬೇಡ ಹೋಗಪ್ಪ ಹೋಗು' ಎಂದು ಪ್ರೀತಿಯಿಂದ ಹೇಳಲು ಆ ಹುಲಿಯು ಬಾಲಕನ ಮುಖವನ್ನು ತನ್ನ ನಾಲಿಗೆಯಿಂದ ನೆಕ್ಕಿ, ಕಿವಿಯ ಬಳಿ ಏನನ್ನೋ ಪಿಸುಗುಟ್ಟಿ ಸದ್ದಿಲ್ಲದೇ ಹೊರಟು ಹೋಯಿತು. ಬಾಲಕನು ಅಟ್ಟಿಯನ್ನೇರಿ ಹಾಯಾಗಿ ಮಲಗಿದನು. ಶಂಭಪ್ಪನವರು ಅವರ ತಮ್ಮಂದಿರು ಭಯಗ್ರಸ್ತರಾಗಿ ಮುದುರಿಕೊಂಡು ಕುಳಿತು ಹೇಗೋ ರಾತ್ರಿಯನ್ನು ಕಳೆದರು. ಬೆಳಕು ಮೂಡಿತು. ಎಲ್ಲರೂ ಮನೆಗೆ ಬಂದರು. ಬಾಲಕನು ಸ್ನಾನವನ್ನು ಮಾಡಿ ಅಂಗಾಂಗಗಳಿಗೆ ಭಸ್ಮಧಾರಣೆ ಮಾಡಿ ಶಿವಪೂಜೆಗೆ ಕುಳಿತನು. ಶಂಭಪ್ಪನವರೇ ಬಹುಭಕ್ತಿಯಿಂದ ಶಿವಪೂಜೆಗೆ ಅಣಿ ಮಾಡಿದರು. ಶಿವಪೂಜಾನಂತರ ತೀರ್ಥಪ್ರಸಾದವನ್ನು ಸ್ವೀಕರಿಸಿದ ಮನೆ ಮಂದಿಯೆಲ್ಲಾ ಶಿವನ ಪ್ರತಿರೂಪದಂತಿದ್ದ ಆ ಬಾಲಕನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಶಂಭಪ್ಪನವರು ತುಂಬ ಗೌರವದಿಂದ ಆ ಬಾಲಕನನ್ನು ಕುರಿತು 'ಬುದ್ಧೀ ತಾವು ದ್ಯಾವ್ರು, ನಮ್ಮಟ್ಟೀಲಿ ದನ ಕಾಯೋದಾಗಲೀ, ಹೊಲ ಕಾಯೋದಾಗಲೀ ಯಾನೂ ಮಾಡಬ್ಯಾಡಿ ಹಿಂಗೇ ಶಿವಪೂಜೆ ಮಾಡ್ಕ್ಯಂಡು ಇದ್ಬುಡಿ, ನಿಮ್ಮ ದಮ್ಮಯ್ಯ' ಎಂದು ಪ್ರಾರ್ಥಿಸಿಕೊಂಡರು. ಆಗ ಆ ಬಾಲಕನು 'ಅಪ್ಪಾಜಿ, ನಾನು ಕಾಯಕ ಮಾಡಿಕೊಂಡೇ ಬದುಕಬೇಕು. ಆದರೆ ನೀವೆಲ್ಲಾ ಇವತ್ತಿನಿಂದ ನನಗೆ ಕಾಯಕ ಮಾಡೋಕೆ ಬಿಡೋದಿಲ್ಲ ಅಂತ ನಂಗೊತ್ತು. ಆದ್ದರಿಂದ ನಾನು ಈ ಊರ್ನೇ ಬಿಟ್ಟು ಈ ದಿನ ಹೋಗ್ತಾ ಇದೀನಿ. ಸಂಗಮೇಶ್ವರನಿಂದ

ನನಗೆ ಕರೆ ಬಂದಿದೆ. ನನ್ನನ್ನು ಇರೂ ಅಂತ ಇಡೀ ಊರೇ ಹೇಳಿದರೂ ನಾನು ಇರೋನಲ್ಲ. ದಯವಿಟ್ಟು ನನ್ನನ್ನು ಕಳುಹಿಸಿ ಕೊಡಿ' ಎಂದು ಕೇಳಿಕೊಂಡನು.

ಶಂಭಪ್ಪನವರಿಗೆ ಶಿವಸ್ವರೂಪಿಯಾಗಿ, ಕಾರ್‍ಯ ಗ್ರಾಮದ ಜನರಿಗೆ ಗುರುವಾಗಿ, ರೋಗಪೀಡಿತರಿಗೆ ವೈದ್ಯನಾಗಿ, ಹಠಯೋಗಿ, ಪವಾಡ ಪುರುಷನಾಗಿ, ಕಾರೆಯುದ ವೀರಭದ್ರ ದೇವರನ್ನು ಸಾಕ್ಷಾತ್ಕರಿಸಿಕೊಂಡವ ನಾಗಿ, ತನ್ನ ನೆನಪಿಗಾಗಿ ಒಂದು ಮಾವಿನ ಮರವನ್ನು ಕಾರೆಯುದ ಊರ ಮುಂದಿನ ಕಾಡಿನಲ್ಲಿ ಬೆಳೆಸಿ, ದಿವ್ಯ ಬಾಳನ್ನು ಸಾಗಿಸಿದ ಬಾಲಯೋಗಿ ಯಾದ ಹದಿನಾರು ವರ್ಷದ ಆ ಬಾಲಕನು ಕಾವಿವಸ್ತ್ರವನ್ನು ಧರಿಸಿ, ಹೆಗ ಲಲ್ಲಿ ಉದ್ದನೆಯ ಕರಿ ಕಂಬಳಿಯನ್ನು ಇಳಿಬಿಟ್ಟು, ಕೈಯಲ್ಲಿ ಒಂದು ಕೋಲನ್ನು ಹಿಡಿದು ಹೊರಟು ನಿಂತನು. ಊರಿನ ಜನರೆಲ್ಲ ಶಂಭಪ್ಪನವರ ಮನೆಯ ಬಳಿ ನೆರೆದರು. ಆ ಬಾಲಕನು ಗ್ರಾಮದ ಜನರನ್ನು ಉದ್ದೇಶಿಸಿ, 'ನನ್ನನ್ನು ಕಾರೆಯುಸ್ವಾಮಿ ಎಂದೇ ಕರೆಯಿರಿ, ನಾನು ಕಪಿಲಾ ಭೃಗು ಸಂಗಮದಲ್ಲಿ ಕೆಲವು ಕಾಲ ಇರುತ್ತೇನೆ. ನನ್ನ ದರ್ಶನ ಪಡೆಯಬಯಸು ವವರು ಸಂಗಮಕ್ಕೆ ಬರಬಹುದು' ಎಂದು ಹೇಳಿ ಸಂಗಮದತ್ತ ಹೊರಟೇ ಬಿಟ್ಟನು. ಶಂಭಪ್ಪನವರಿಗೆ, ಅವರ ಮನೆಯವರಿಗೆ ಮತ್ತು ಊರ ಜನರ ಕಣ್ಣಿನಲ್ಲಿ ನೀರು ತುಂಬಿದುವು.

ಇತ್ತ ಸಂಗಮದಲ್ಲಿ ಕಾರೇ ಸ್ವಾಮಿಗಳು ಬರುವ ಮೂರು ದಿನ ಮುಂಚಿತವಾಗಿ ಒಂದು ಸಣ್ಣ ಘಟನೆ ನಡೆಯಿತು. ಸಂಗಮದ ಬಳಿಯ ತಮ್ಮ ನೆಲಗಡಲೆ ಹೊಲದಲ್ಲಿ ಮಾದನ ಹಳ್ಳಿಯ ಜಮೀನ್ದಾರರಾದ ಹೊಟ್ಟೆ ಪುಟ್ಟಪ್ಪ ಮತ್ತು ಬಸಪ್ಪನವರು ಹಗಲು-ರಾತ್ರಿ ಕಾವಲಿರು ತ್ತಿದ್ದರು. ಒಂದು ಮುಂಜಾನೆ ಸುಮಾರು 5-10ರ ಸಮಯದಲ್ಲಿ ಸಂಗ ಮದ ತೀರದಲ್ಲಿ ಈಗಲೂ ಕಾಣುವ ಕಲ್ಲು ಬಂಡೆಯ ಬಳಿಯ ನೀರಿನಲ್ಲಿ, ಕಾವಿಬಟ್ಟೆ ಮತ್ತು ಕಿವಿ ಕುಲಾವಿ ಹಾಕಿದ ಸುಮಾರು ಆರು ವರ್ಷದ ಒಬ್ಬ ಹುಡುಗ ಮೂರ್ನಾಲ್ಕು ಬಾರಿ ಮುಳುಗಿ ಎದ್ದು, ಒಂದು ದೊನ್ನೆ ಯಲ್ಲಿ ನೀರನ್ನು ತುಂಬಿಕೊಂಡು ಓಡಿ ಹೋಗಿ ಸಂಗಮೇಶ್ವರನ ಗುಡಿ ಯೊಳಗೆ ಹೊಕ್ಕಿಕೊಂಡನು. ಜಮೀನಿನಲ್ಲಿದ್ದ ಹೊಟ್ಟೆ ಪುಟ್ಟಪ್ಪ ಮತ್ತು ಬಸಪ್ಪನವರು ಆ ಹುಡುಗನನ್ನು ನೋಡಿ 'ಈ ಹುಡುಗ ಯಾರಿರಬಹುದು' ಎಂದು ತಮ್ಮಲ್ಲೇ ಮಾತನಾಡಿಕೊಂಡರು. ಸಂಗಮೇಶ್ವರ ಗುಡಿಯ ಬಳಿ

ಹುಲಿ ಆನೆಗಳ ಸಂಚಾರವಿದ್ದುದರಿಂದ ಇವರಿಗೆ ಹೋಗಿ ನೋಡಲು ಧೈರ್ಯ ಬರುತ್ತಿರಲಿಲ್ಲ. ಹೀಗೆಯೇ ಮೂರ್ನಾಲ್ಕು ದಿನಗಳವರೆಗೂ ಮುಂಜಾನೆಯಲ್ಲಿ ಮಾತ್ರ ಕಾವಿವಸ್ತ್ರಧಾರಿ ಬಾಲಕನು ಈ ಜಮೀನ್ದಾರರಿಗೆ ಕಾಣಿಸಿಕೊಳ್ಳುತ್ತಲೇ ಇದ್ದನು. ನಾಲ್ಕನೇ ದಿನ ಆ ಜಮೀನ್ದಾರರು ಧೈರ್ಯಮಾಡಿಕೊಂಡು ಹುಡುಗ ಯಾರೆಂದು ತಿಳಿಯಲು ಸಂಗಮೇಶ್ವರ ಗುಡಿಗೆ ಹೋದರು. ಆ ಬಾಲಕನು ಶಿವಲಿಂಗದ ಮೇಲೆ ಹೂ, ಪತ್ರೆಗಳನ್ನಿಟ್ಟು ಬೇಲದ ಹಣ್ಣನ್ನು ನೈವೇದ್ಯಕ್ಕೆ ಇಟ್ಟಿದ್ದನು. ದೇವರ ಮುಂದೆ ಧ್ಯಾನಾಸಕ್ತನಾಗಿ ಕುಳಿತ್ತಿದ್ದನು. ಜಮೀನ್ದಾರರು ಹತ್ತಿರ ಬರುತ್ತಲೇ ಹುಡುಗನು ಕಣ್ಣು ಬಿಟ್ಟು, 'ನೀವ್ಯಾರು' ಎಂದನು. ಆತನ ಕಣ್ಣಿನ ನೋಟ ಮತ್ತು ಧ್ವನಿ ಆಕರ್ಷಕವಾಗಿದ್ದುವು. ಜಮೀನ್ದಾರರು, 'ನಾವು ಮಾದನಹಳ್ಳಿಯೋರು, ಬುದ್ಧಿ. ಈ ಕಾಡ್ನಲ್ಲಿ ತಾವೊಬ್ಬರೇ ಇದ್ದೀರಿ, ನಮ್ಮೂರಿಗೂ ಬನ್ನಿ ಬುದ್ಧಿ' ಎಂದು ವಿನಯಪೂರ್ವಕವಾಗಿ ಕೇಳಿಕೊಂಡರು. ಆ ಹುಡುಗನು, 'ನಾಳೆ ದಿವ್ಸ ನಿಮ್ಮೂರಿಗೆ ಒಬ್ಬರು ಸ್ವಾಮಿಗಳು ಬರ್ತಾರೆ. ಅವರನ್ನು ಗೌರವದಿಂದ ಬರಮಾಡಿಕೊಳ್ಳಿ, ನಿಮಗೆ ಒಳ್ಳೇದಾಗುತ್ತೆ. ಹೂಂ ! ಹೋಗಿ' ಎಂದು ಮತ್ತೆ ಕಣ್ಮುಚ್ಚಿ ಕುಳಿತನು. ಈ ಜಮೀನ್ದಾರರು ತಮ್ಮ ಊರಿಗೆ ಹೋಗಿ ಜನರಿಗೆ ನಡೆದ ವಿಷಯವನ್ನು ತಿಳಿಸಿದರು.

ಮಾರನೆಯ ದಿನ ಮಾದನ ಹಳ್ಳಿಯ ಜನರೆಲ್ಲರೂ ಸ್ವಾಮಿಗಳ ನಿರೀಕ್ಷಣೆಯಲ್ಲಿರಲು ಕಾರೆಯ ಸ್ವಾಮಿಗಳ ಆಗಮನವಾಯಿತು. ಇವರ ವಯಸ್ಸಿಗೆ ಮೀರಿದ ಬೆಳವಣಿಗೆ, ಕಾವಿವಸ್ತ್ರದೊಡನೆ ಹೊಂದಿಕೊಳ್ಳುವಂತಿದ್ದ ಮುಖದ ಕಾಂತಿಯು ಜನರಲ್ಲಿ ಸಹಜವಾಗಿ ಸ್ವಾಮಿಗಳ ಬಗ್ಗೆ ಗೌರವ ಭಾವನೆಯನ್ನು ತಂದುಕೊಟ್ಟವು. ಕೊಟ್ಟಿ ಪುಟ್ಟಪ್ಪ ಮತ್ತು ಬಸಪ್ಪನವರೇ ಆದಿಯಾಗಿ ಗ್ರಾಮದ ಹಿರಿಯರು ಕಾರೆಯ ಸ್ವಾಮಿಗಳನ್ನು ಬರಮಾಡಿಕೊಂಡು, ಆದರೋಪಚಾರಗಳನ್ನು ಮಾಡಿ, 'ನಮ್ಮಿಂದ ಏನಾಗಬೇಕೆಂದು' ವಿನಂತಿಸಿಕೊಂಡರು. ಕಾರೆಯ ಸ್ವಾಮಿಗಳು, 'ಸಂಗಮೇಶ್ವರ ದೇವಾಲಯದ ಜೀರ್ಣೋದ್ಧಾರವಾಗಬೇಕು. ದೇವಾಲಯದ ಸುತ್ತಲೂ ಇರುವ ಕಾಡನ್ನು ಕಡಿದು ಭಕ್ತಾದಿಗಳು ಬಂದು ಉಳಿದುಕೊಳ್ಳುವಂತೆ ವ್ಯವಸ್ಥೆಯಾಗಬೇಕು. ಇದಕ್ಕಾಗಿ ನಿಮ್ಮ ಸಹಕಾರ ಬೇಕಾಗಿದೆ' ಎಂದರು. ಮಾದನಹಳ್ಳಿಯ ಜನರು ಅತ್ಯುತ್ಸಾಹದಿಂದ

ಕೊಡಲಿ, ಮಚ್ಚು, ಕುಡಗೋಲುಗಳನ್ನು ಹಿಡಿದು ಕಾರೆಯ ಸ್ವಾಮಿಗಳ ಹಿಂದೆ ನಡೆದರು. ಸಂಗಮ ಸ್ಥಳದಲ್ಲಿ ಬೆಳೆದಿದ್ದ ಬೇಲದ ಮರ, ಮಾವು ಹಲಸು, ಅರಳಿ, ಹೊಂಗೆ, ಹುಣಸೆ ಮೊದಲಾದ ಫಲ ಮತ್ತು ನೆರಳನ್ನು ನೀಡುವ ಮರಗಳನ್ನು ಬಿಟ್ಟು, ಮುಳ್ಳು ಪೊದರು ಮೊದಲಾದ ಕಾಡು ಮರಗಳನ್ನು ತರಿದು ಸಂಗಮೇಶ್ವರ ದೇವಾಲಯದ ಸುತ್ತ ಸುಮಾರು 5–6 ಎಕರೆ ಪ್ರದೇಶವನ್ನು ಚೊಕ್ಕಟ ಮಾಡಿದರು. ಸುಮಾರು ಒಂದು ತಿಂಗಳವರೆಗೆ ನಡೆದ ಈ ಕೆಲಸದಲ್ಲಿ ಸುತ್ತಲಿನ ಬೇರೆ ಬೇರೆ ಹಳ್ಳಿಯ ಜನರೂ ಭಾಗವಹಿಸಿದ್ದರು. ಕಾರೇ ಸ್ವಾಮಿಗಳು ಸಂಗಮಕ್ಕೆ ಬಂದ ವಿಷಯವು ಹರದನಹಳ್ಳಿ, ತರಗನಹಳ್ಳಿ, ಕಣೆನೂರು, ಚಂದ್ರವಾಡಿ, ಉಚ್ಛಗಣಿ ಮೊದಲಾದ ಮೂವತ್ತೂರು ಹಳ್ಳಿಗಳ ಜನರಿಗೆ ತಿಳಿದು ಸ್ವಾಮಿಯವರ ದರ್ಶನಾಕಾಂಕ್ಷಿಗಳಾಗಿ ಬರತೊಡಗಿದರು. ಕಾರೇ ಸ್ವಾಮಿಗಳು ಜಾತ ಭೇದವಿಲ್ಲದೆ ಹೃದಯ ಶುದ್ಧಿಯುಳ್ಳವರನ್ನು ಭಕ್ತರೆಂದು ಸ್ವೀಕರಿಸಿದರು. ಕಾರೇ ಸ್ವಾಮಿಗಳ ಭಕ್ತರಲ್ಲಿ ಮಾದನಹಳ್ಳಿಯ ಮುಸ್ಲಿಮರೂ, ಹರದನಹಳ್ಳಿಯ ಹರಿಜನರೂ, ಕಪ್ಪಸೋಗೆಯ ನಾಯಕ ಜನಾಂಗದವರೂ ಸೇರಿದ್ದರು ತಮ್ಮ ನಿಷ್ಠಾವಂತ ಭಕ್ತರಿಂದ ಗಾಡಿಗಳಲ್ಲಿ ಮರಳು, ಇಟ್ಟಿಗೆ ಮತ್ತು ಸುಣ್ಣದ ಹುಡಿಯನ್ನು ತರಿಸಿದರು. ಕಲ್ಲಿನ ಚಕ್ರದಲ್ಲಿ ಸುಣ್ಣ–ಮರಳನ್ನು ಅರೆಸಿ ಗಾರೆಯನ್ನು ತಯಾರಿಸಿದರು. ಕೇವಲ ಗರ್ಭಗುಡಿ, ಕಲ್ಲಿನಕಂಭಗಳು ಮತ್ತು ಚಪ್ಪಡಿಗಳ ಮೇಲು ಹೊದಿಕೆಯನ್ನು ಹೊಂದಿದ್ದ ಸಂಗಮೇಶ್ವರ ದೇವಾಲಯದ ಮೇಲೆ, ಇಟ್ಟಿಗೆ-ಗಾರೆಗಳಿಂದ ಗೋಪುರಗಳನ್ನೂ, ಕಂಭಗಳ ನಡುವೆ ಗೋಡೆಗಳನ್ನೂ ನಿರ್ಮಿಸಿ ಸುಣ್ಣ ಬಣ್ಣಗಳನ್ನು ಬಳಿಸಿ ಸುಂದರ ದೇವಾಲಯವನ್ನಾಗಿ ಮಾಡಿ, ಕಾಡು ಮೇಡುಗಳಿಂದ ನಿರ್ಜನ ಪ್ರದೇಶವಾಗಿದ್ದ ಸಂಗಮವನ್ನು ಜನಭರಿತ ತೀರ್ಥಕ್ಷೇತ್ರವನ್ನಾಗಿ ಪರಿವರ್ತಿಸಿದರು. ದೇವಾಲಯದ ಜೀರ್ಣೋದ್ಧಾರ ಕಾರ್ಯ ಮುಗಿದ ಮೇಲೆ ಕಡೆಯ ದಿನ ಜೀರ್ಣೋದ್ಧಾರ ಕಾರ್ಯದಲ್ಲಿ ಭಾಗವಹಿಸಿದ್ದವರಿಗೆಲ್ಲಾ ಒಂದು ಔತಣ ಕೂಟವನ್ನು ಸ್ವಾಮಿಗಳು ಏರ್ಪಡಿಸಿದರು. ಭಕ್ತಾದಿಗಳೇ ವಿಶಿಷ್ಟ ಅಡಿಗೆ ಸಾಮಗ್ರಿಗಳನ್ನು ತಂದು ಆಹಾರವನ್ನು ತಯಾರಿಸಿದರು. ಸುಮಾರು ಒಂದು ಸಹಸ್ರ ಜನರು ಔತಣಕೂಟದಲ್ಲಿ ಭಾಗವಹಿಸಿದ್ದರು. ಊಟದಲ್ಲಿ ಎಲ್ಲ ಪರಿಕರಗಳಿದ್ದರೂ ತುಪ್ಪವೊಂದು ಇರಲಿಲ್ಲ. ಇದನ್ನು ಗಮನಿಸಿದ

ಕಾರೆಯ ಸ್ವಾಮಿಗಳು ಮಾದನಹಳ್ಳಿಯ ನಂಜಪ್ಪ ಪಟೇಲರನ್ನು (ಈಗಿನ ಮಾಜಿ ಪಟೇಲರ ತಾತ) ಕರೆದು ಅವರ ಕೈಗೆ ಒಂದು ಬಿಂದಿಗೆಯನ್ನು ಕೊಟ್ಟು 'ಹೊಳೆಯಲ್ಲಿ ಹೋಗಿ ತುಪ್ಪವನ್ನು ತೆಗೆದುಕೊಂಡು ಬನ್ನಿ' ಎಂದು ಹೇಳಿದರು. ಪಟೇಲರು ನಗುತ್ತಾ, 'ಹೊಳೇಲಿ ಯಾವ ತುಪ್ಪ ಇದ್ದದು ಬುದ್ಧಿ' ಎನ್ನಲು, ಸ್ವಾಮಿಗಳು, 'ಸುಮ್ಮ ಹೊಳೆಗೆ ಹೋಗಿ, ಬಿಂದಿಗೆ ಮುಳುಗಿಸಿ, ಆ ಬಿಂದಿಗೆಯನ್ನು ನೋಡದೇ ತಲೆಯ ಮೇಲಿಟ್ಟು ಕೊಂಡು ಬನ್ನಿ' ಎಂದರು. ಪಟೇಲರು ಹಾಗೆಯೇ ಮಾಡಿ ಬಿಂದಿಗೆಯನು ಸ್ವಾಮಿಗಳ ಮುಂದಿಟ್ಟರು. ಬಿಂದಿಗೆಯಲ್ಲಿ ನೀರಿಗೆ ಬದಲಾಗಿ ಘಮ ಘಮಿ ಸುವ ತುಪ್ಪವು ತುಂಬಿತ್ತು. ಪಟೇಲರು ಮತ್ತು ಔತಣಕೂಟದಲ್ಲಿ ಸೇರಿದ್ದ ಜನರು ಅಚ್ಚರಿ ಪಟ್ಟರು. ಅದೇ ತುಪ್ಪವನ್ನು ಎಲ್ಲರಿಗೂ ಊಟಕ್ಕೆ ಬಡಿಸ ಲಾಯಿತು.

ಕಾರೆಯ ಸ್ವಾಮಿಗಳು ಸಂಗಮದಲ್ಲಿ ಸಂಗಮೇಶ್ವರನ ರಥೋತ್ಸವ ನಡೆಯುವ ಏರ್ಪಾಡನ್ನು ಮಾಡಿದರು. ಅಲ್ಲದೆ ರಥೋತ್ಸವದ ವೇಳೆಯಲ್ಲಿ ಒಂದೊಂದು ಊರಿನವರಿಗೆ ಒಂದೊಂದು ಕರ್ತವ್ಯವನ್ನು ತಾವೇ ವಹಿಸಿ ಕೊಟ್ಟರು. ಕಾರೆಯ ಸ್ವಾಮಿಗಳು ಮೂವತ್ಮೂರು ಹಳ್ಳಿಯವರನ್ನು ಸೇರಿಸಿ,

1. ಮಾದನಹಳ್ಳಿಯವರು, ಎಲ್ಲಾ ಗ್ರಾಮದವರಿಗೂ ವಿಭೂತಿ ವೀಳ್ಯವನ್ನು ಕೊಟ್ಟು ಅವರನ್ನು ಕರೆಸಿಕೊಂಡು ರಥೋತ್ಸವದ ದಿನವನ್ನು ಗೊತ್ತು ಮಾಡಬೇಕು.

2. ಮೊತ್ತ ಗ್ರಾಮದ ಜನರು ಎಲ್ಲರನ್ನೂ ಎದುರುಗೊಂಡು ಸ್ವಾಗತಿಸಬೇಕು.

3. ಮೂವತ್ಮೂರು ಹಳ್ಳಿಯವರೂ ತಮ್ಮ ತಮ್ಮ ಗ್ರಾಮ ದೇವರ ಬಿರುದು-ಬತ್ತಳಿಕೆಗಳೊಡನೆ ಬರಬೇಕು.

4. ಕಪ್ಪಸೋಗೆಯ ನಾಯಕ ಜನಾಂಗವು ದೇವರ ತೇರನ್ನು ಕಟ್ಟ ಬೇಕು.

5. ಉಚ್ಚಗಣಿ ಗ್ರಾಮದವರು ಗುಡಿಗಾರರಾಗಿ ದೇವಾಲಯದ ಕೆಲಸಗಳನ್ನು ಮಾಡಬೇಕು.

6. ಕಣೇನೂರಿನವರು ಚಪ್ಪರ ಮೊದಲಾದ ವ್ಯವಸ್ಥೆಗಳನ್ನು ಮಾಡಬೇಕು.

7. ಹರದನಹಳ್ಳಿಯ ಹರಿಜನರು ಕೊಂಡಕ್ಕೆ ಬೇಕಾದ ಸೌದೆಗಳನ್ನು ತಂದು ಕೊಂಡ ಹೊತ್ತಿಸಬೇಕು.

8. ಈ ಎಲ್ಲಾ ಕಾರ್ಯಕ್ರಮಗಳ ಜೊತೆಗೆ ಕಾರ್ಯ ಗ್ರಾಮದ ಜನರಿಗೆ ವಿಶೇಷವಾದ ಜವಾಬ್ದಾರಿಯನ್ನು ವಹಿಸಿದರು. ಕಾರೆಯದ ಜನರು ತಮ್ಮ ಗ್ರಾಮ ದೇವತೆಯಾದ ವೀರಭದ್ರ ದೇವರ ಕೊಳಗವನ್ನು (ನಾಗಾಭರಣ) ತಮ್ಮ ಗ್ರಾಮದಿಂದ ಛತ್ರಿ–ಚಾಮರ, ಬಿರುದು–ಬತ್ತಳಿಕೆಗಳೊಡನೆ ಮೆರವಣಿಗೆಯಲ್ಲಿ ತಂದು ಸಂಗಮೇಶ್ವರನ ತೇರಿನಲ್ಲಿಟ್ಟು, ಆ ತೇರನ್ನು ಎಳೆಯಬೇಕು. ರಥೋತ್ಸವದ ಮಾರನೆಯ ದಿನ ದೇವಾಲಯದ ಮುಂಭಾಗದಲ್ಲಿ ನಡೆಯುವ ರುದ್ರಕೊಂಡದಲ್ಲಿ ಕಾರ್ಯದವರು ಮೊದಲು ಕೊಂಡ ಹಾಯಬೇಕು, ನಂತರ ಇತರರೂ, ಹರಕೆ ಹೊತ್ತವರೂ ಕೊಂಡ ಹಾಯಬೇಕು. ಅಂದರೆ ಕಾರೆಯದ ಜನರಿಲ್ಲದೆ ಈ ರಥೋತ್ಸವ ನಡೆಯುವಂತೆಯೇ ಇಲ್ಲ.

ಹೀಗೆ ಮೂವತ್ಮೂರು ಹಳ್ಳಿಯವರಿಗೂ ಒಂದೊಂದು ಕೆಲಸವನ್ನು ಹಚ್ಚಿ ಭಕ್ತಿ–ಶ್ರದ್ಧೆಗಳಿಂದ ರಥೋತ್ಸವವನ್ನು ಜನರ ಜವಾಬ್ದಾರಿಯಿಂದಲೇ ನಡೆಸುತ್ತಾ ಬಂದರು.

ಪ್ರತಿವರ್ಷ ಶಿವರಾತ್ರಿಯ ನಂತರ ಬರುವ ಸೋಮವಾರದಂದು ಸಂಗಮೇಶ್ವರನ ರಥೋತ್ಸವ ಮತ್ತು ಮಾರನೆಯ ಮಂಗಳವಾರದಂದು ರುದ್ರಕೊಂಡವೂ ಮೊದಲಿನಂತೆಯೇ ಇಂದಿಗೂ ನಡೆದುಕೊಂಡು ಬರುತ್ತಿದೆ. ಭಕ್ತಾದಿಗಳು ಈ ಎರಡು ದಿನಗಳು ಶುಚಿರ್ಭೂತರಾಗಿ ಒಪ್ಪೊತ್ತು ಉಪವಾಸವಿದ್ದು ದೇವರ ಸೇವೆಯನ್ನು ಮಾಡುತ್ತಾರೆ. ಜಾತ್ಯಾತೀತ ವ್ಯವಸ್ಥೆಗೆ ಈ ರಥೋತ್ಸವವು ಒಂದು ಅತ್ಯುತ್ಕೃಷ್ಟ ಉದಾಹರಣೆಯಾಗಿದೆ.

ಸಂಗಮೇಶ್ವರನಿಗೆ ನಿತ್ಯ ಪೂಜೆ ನಡೆಯಬೇಕೆಂಬ ಉದ್ದೇಶದಿಂದ ಕಾರೆಯ ಸ್ವಾಮಿಗಳು ಹುಳಿಮಾವು ಗ್ರಾಮದ (ನಂಜನಗೂಡು ತಾಲ್ಲೋಕು) ನಂಜಯ್ಯನ ಭಾವ ಮೈದುನನಾದ ಮರಪ್ಪ ಎಂಬ ಬಾಲಕನನ್ನು ಕರೆದು ತಂದು ಆತನಿಗೆ ಶಿವದೀಕ್ಷೆಯನ್ನು ಕೊಟ್ಟು, ಸಂಗಮದಲ್ಲಿಯೇ ಆತನಿಗಾಗಿ ಒಂದು ಮನೆಕಟ್ಟಿಸಿ, ಸಂಗಮೇಶ್ವರನ ಪೂಜೆಯನ್ನು ನಿರಂತರವಾಗಿ ನಡೆಯುವಂತೆ ಮಾಡಿದರು. ಈ ಮರಪ್ಪನ ವಂಶಸ್ಥರಾದ ಸಂಗಪ್ಪ ಎಂಬುವರು ಇಂದಿಗೂ ಸಂಗಮೇಶ್ವರನ ಅರ್ಚಕರಾಗಿದ್ದಾರೆ.

ಕಾರೆಯ ಸ್ವಾಮಿಗಳು ಸಂಗಮ ಕ್ಷೇತ್ರದ ರಕ್ಷಣೆಗಾಗಿ ಕಪಿಲಾ

ಭೃಗುವಿನ ಮುಖಜ ಭೂಮಿಯಲ್ಲಿ ಒಂದು ಮಾವಿನ ಸಸಿಯನ್ನು ನೆಟ್ಟು ಅದರಲ್ಲಿ ಮುನೀಶ್ವರಿ ದೇವತೆಯನ್ನು ಆಹ್ವಾನಿಸಿದರು. ಇಂದಿಗೂ ಸಂಗಮೇಶ್ವರನ ದರ್ಶನಾಕಾಂಕ್ಷಿಗಳಾಗಿ ಬರುವ ಭಕ್ತಾದಿಗಳ ಪರಿಶುದ್ಧತೆ ಮತ್ತು ನಿಷ್ಠೆಯನ್ನು ಈ ದೇವತೆಯು ಗಮನಿಸುತ್ತದೆ ಎಂಬುದು ಎಲ್ಲರ ನಂಬಿಕೆಯಾಗಿದೆ.

ಮಾದನಹಳ್ಳಿಯ ಹಿರಿಯರು ಕಾರೆಯ ಸ್ವಾಮಿಯವರನ್ನು, 'ನಮ್ಮೂರಲ್ಲಿ ಒಂದು ದೇವಾಲಯವೂ ಇಲ್ಲ. ಒಂದು ಲಿಂಗವನ್ನು ಪ್ರತಿಷ್ಠಾಪಿಸಿ, ಊರ ಜನರು ನಿತ್ಯಪೂಜೆ ಮಾಡುವ ಹಾಗೆ ಕರುಣಿಸಬೇಕು' ಎಂದರು. ಸ್ವಾಮಿಗಳು ಸ್ವಲ್ಪ ಹೊತ್ತು ಧ್ಯಾನಿಸಿ, 'ಆಗಲಿ, ಬನ್ನಿ' ಎಂದು ಎಲ್ಲರನ್ನೂ ಕರೆದುಕೊಂಡು ಮಾದನಹಳ್ಳಿಗೆ ಬಂದರು. ಭೃಗು ನದಿಯ ತೀರದಲ್ಲಿ ನಿಂತು, ನದೀ ಮಧ್ಯದಲ್ಲಿದ್ದ ಒಂದು ಲಿಂಗಾಕಾರದ ಕಲ್ಲನು ತೋರಿಸಿ, 'ಅದನ್ನು ಎತ್ತಿಕೊಂಡು ಬನ್ನಿ' ಎಂದರು. ನಾಲ್ಕೈದು ಮಂದಿ ಹೋಗಿ ನೀರಿನ ನಡುವೆ ಇದ್ದ ಆ ಕಲ್ಲನ್ನು ತಂದರು. ಅದನ್ನು ನದಿಯ ಪೂರ್ವತೀರದಲ್ಲಿ ನೆಲದಲ್ಲಿಯೇ ನೆಡಿಸಿ, ಕಾರೆಯ ಸ್ವಾಮಿಗಳು ಆ ಕಲ್ಲನ್ನು ಮುಟ್ಟಿ 'ಈ ಲಿಂಗವನ್ನು ಇಂದಿನಿಂದ ಮಹದೇಶ್ವರನೆಂದು ಕರೆದು ಪೂಜೆಯನ್ನು ಮಾಡಿರಿ. ಹುಲಿವಾಹನದಲ್ಲಿ ಉತ್ಸವವನ್ನು ಮಾಡಿರಿ.' ಎಂದು ಹೇಳಿ ತಮ್ಮ ಸ್ವಸ್ಥಾನವಾದ ಸಂಗಮಕ್ಕೆ ತೆರಳಿದರು. ಮಾದನಹಳ್ಳಿಯವರು ಇಂದಿಗೂ ಈ ಕಲ್ಲನ್ನೇ ಮಹದೇಶ್ವರನೆಂದು ಪೂಜೆಮಾಡಿ, ಐದು ವರ್ಷಕ್ಕೊಮ್ಮೆ ಉತ್ಸವವನ್ನೂ ಆಚರಿಸುತ್ತಿದ್ದಾರೆ. ನದಿಯಲ್ಲಿ ಪ್ರವಾಹ ಹೆಚ್ಚಾದರೆ ಲಿಂಗವು ನೀರಿನಲ್ಲಿ ಮುಳುಗುತ್ತದೆ. ಪ್ರವಾಹ ಇಳಿದಾಗ ಊರಿನ ಜನ ಲಿಂಗದ ಸುತ್ತಲೂ ಇರುವ ಕೆಸರನ್ನು ತೆಗೆಯುತ್ತಾರೆ. ಸುಮಾರು ಕ್ರಿ.ಶ. 1850 ರಲ್ಲಿ ಸ್ಥಾಪಿಸಿದ ಈ ಲಿಂಗದ ಸುತ್ತಲೂ ಇಂದು ನೂರೊಂದು ಲಿಂಗಗಳು ಸ್ವಯಂ ಉದ್ಭವವಾಗಿವೆ. ಮುಂದಿನ ದಿನಗಳಲ್ಲಿ ಈ ಸ್ಥಳವು ಪವಿತ್ರ ತೀರ್ಥಕ್ಷೇತ್ರವಾಗುವುದರಲ್ಲಿ ಸಂದೇಹವಿಲ್ಲ.

ಕಾರೆಯ ಸ್ವಾಮಿಗಳ ಕೀರ್ತಿಯು ಮೈಸೂರಿನ ಅರಮನೆ ತನಕವೂ ಮುಟ್ಟಿತು. 1850ರ ವೇಳೆಯಲ್ಲಿ ಅರಮನೆಯ ಖಾಸಾ ಮಲ್ಲಿಗಮ್ಮ ಎಂಬುವರಿಗೆ ತೀವ್ರವಾದ ತಲೆನೋವು ಬಂದು ಹಾಸಿಗೆಯನ್ನು ಹಿಡಿದಿದ್ದರು. ಅರಮನೆಯ ವೈದ್ಯರು ಎಷ್ಟೇ ಪ್ರಯತ್ನಿಸಿದರೂ ಗುಣವಾಗಲಿಲ್ಲ. ಈ ವೇಳೆಯಲ್ಲಿ ಮೈಸೂರು ಸಂಸ್ಥಾನದ ಆಡಳಿತವನ್ನು ಬ್ರಿಟಿಷ್ ಕಮಿಷನರ್

ಮೂಲಕ ಕಂಪನಿ ಸರ್ಕಾರವು ನಡೆಸುತ್ತಿತ್ತು. ಆದರೂ ಅರಸುಮನೆತನದವರ ಸಂಪೂರ್ಣ ಜವಾಬ್ದಾರಿ ಮತ್ತು ಕ್ಷೇಮ ಚಿಂತನೆ ಕಮಿಷನರ್ ಅವರಿಗೇ ಸೇರಿತ್ತು. ಖಾಸಾಮಲ್ಲಿಗಮ್ಮನವರ ತಲೆನೋವನ್ನು ಗುಣಪಡಿಸಲು, ಸೂಕ್ತ ವೈದ್ಯರನ್ನು ಕರೆತರಲು ಅಧಿಕಾರಿಗಳಿಗೆ ಕಮಿಷನರ್ ಅವರು ಆಜ್ಞೆಮಾಡಿದರು. ಅಧಿಕಾರಿಗಳು ಸಂಗಮದಲ್ಲಿರುವ ಕಾರೆಯ ಸ್ವಾಮಿಗಳನ್ನು ಹೆಸರಿಸಿದರು. ಕಲೆಕ್ಟರ್ ಸಾಹೇಬರ ಮೂಲಕ ಸ್ವಾಮಿಗಳನ್ನು ಕರೆತರಲು ಆಜ್ಞೆಯಾಯಿತು. ಆ ಪ್ರಕಾರ ಕಲೆಕ್ಟರ್ ಸಾಹೇಬರು ಬಂದು ಸಂಗಮದಲ್ಲಿದ್ದ ಸ್ವಾಮಿಗಳಿಗೆ ಕಮಿಷನರ್ ಅವರ ಹುಕುಂ ಅನ್ನು ತಿಳಿಸಿದರು. ಕಾರೆಯ ಸ್ವಾಮಿಗಳು 'ಇಂದು ಸಂಜೆ ಐದು ಘಂಟೆಗೆ ಸರಿಯಾಗಿ ಅರಮನೆಗೆ ಬರುತ್ತೇನೆ' ಎಂದು ಕಲೆಕ್ಟರಿಗೆ ಹೇಳಿ ಕಳುಹಿಸಿದರು. ಮೈಸೂರು ಅರಮನೆಯ ಮಹಾದ್ವಾರದಲ್ಲಿ ಸೇವಕರು ಛತ್ರಿ ಚಾಮರಗಳನ್ನು ಹಿಡಿದು ಮಂಗಳವಾದ್ಯದೊಂದಿಗೆ ಕಾರೆಯ ಸ್ವಾಮಿಗಳನ್ನು ಸ್ವಾಗತಿಸಲು ಸಿದ್ಧತೆಯನ್ನು ಮಾಡಿಕೊಂಡಿದ್ದರು. ಸಂಜೆಯಾಯಿತು, ರಾತ್ರಿಯಾಯಿತು ಸ್ವಾಮಿಗಳನ್ನು ಕಾಣಲೇ ಇಲ್ಲ. ಅಷ್ಟರಲ್ಲಿ ಮಲ್ಲಿಗಮ್ಮನವರು ತಲೆನೋವಿನಿಂದ ಮುಕ್ತರಾಗಿ ಸಂತೋಷ ಚಿತ್ತದಿಂದಿದ್ದರು. ಅವರ ಸಮೀಪ ವರ್ತಿಗಳು ಮಲ್ಲಿಗಮ್ಮನನ್ನು ವಿಚಾರಿಸಲಾಗಿ, 'ಯಾರೋ ಸ್ವಾಮಿಗಳು ಬಂದು ನನ್ನ ತಲೆಯನ್ನು ಸವರಿ, ತಲೆನೋವು ಹೋಯಿತೇನಮ್ಮ,' ಎಂದರು. ನಾನು (ಹೌದು) ಎಂದೆ. ಅವರು, 'ನಾನಿನ್ನು ಬರುತ್ತೇನೆ' ಎಂದು ಹೊರಟು ಹೋದರು' ಎಂಬುದಾಗಿ ಹೇಳಿದಳು. ಆಗ ಅರಮನೆಯ ಮಂದಿಗೆಲ್ಲಾ ಆಶ್ಚರ್ಯವಾಯಿತು. ಬಂದಿದ್ದವರು ಕಾರೆಯ ಸ್ವಾಮಿಗಳಲ್ಲದೆ ಬೇರೆ ಅಲ್ಲ ಎಂದು ಮನಗಂಡರು. ಈ ವಿಷಯ ಬ್ರಿಟಿಷ್ ಕಮಿಷನರ್ ಅವರಿಗೂ ತಿಳಿದು, ಅವರು ಕಾರೆಯ ಸ್ವಾಮಿಗಳ ಮಹಿಮೆಯನ್ನು ಕೊಂಡಾಡಿ, ಸ್ವಾಮಿಗಳವರಿಗೆ ಸಂಗಮ ಕ್ಷೇತ್ರದ ಬಳಿಯಿರುವ 42 ಎಕರೆ ಪ್ರದೇಶವನ್ನು ಮುಫತ್ತಾಗಿ ಬಿಟ್ಟುಕೊಟ್ಟರು. ಅಲ್ಲದೆ ಬಿರುದು ಬಾವಲಿಗಳನ್ನೂ ಕೊಟ್ಟರೆಂದು ಮೈಸೂರು ಅರಮನೆಯ ದಾಖಲೆಯು ತಿಳಿಸುತ್ತದೆ. ಸಂಗಮೇಶ್ವರ ದೇವಾಲಯಕ್ಕೆ ಇಂದಿಗೂ ಈ ಜಮೀನಿನಿಂದ ಉತ್ಪತ್ತಿ ಬರುತ್ತಿದೆ.

ಕಾರೆಯ ಸ್ವಾಮಿಗಳ ಕಾಲದಲ್ಲಿ ಮಳೆ ಬೆಳೆಗೆ ಎಂದಿಗೂ ಕೊರತೆಯಿರಲಿಲ್ಲ. ರೋಗರುಜಿನಗಳು ಜನರಲ್ಲಿ ಸುಳಿಯುತ್ತಿರಲಿಲ್ಲ. ಸ್ವಾಮಿಗಳು

ಎಲ್ಲ ಹಳ್ಳಿಗಳ ಭಕ್ತಾದಿಗಳ ಮನೆಗೆ ಬಿನ್ನಹಕ್ಕೆ ಹೋಗಿ ಬರುತ್ತಿದ್ದರು. ಕಾರೆಯ ಸ್ವಾಮಿಗಳ ಆಹಾರ ನವಣೆ ಅಕ್ಕಿಯ ಅನ್ನ, ರಾಗಿಮುದ್ದೆ, ಮತ್ತು ಸೊಪ್ಪಿನ ಸಾರು ಇವುಗಳನ್ನು ಬಿಟ್ಟರೆ ಬೇರೆ ಏನನ್ನೂ ಸೇವಿಸು ತ್ತಿರಲಿಲ್ಲ.

ಕಾರೆಯ ಸ್ವಾಮಿಗಳ ಕಾಲದಲ್ಲಿಯೇ ಕೆಂಡಗಣ್ಣ ಸ್ವಾಮಿಗಳು, ಬೂದಿಯಪ್ಪನವರು (ಇವರಿಬ್ಬರೂ ಹುಣಸೂರಿನ ಬಳಿಯವರು) ಮತ್ತು ಹುಲ್ಲಹಳ್ಳಿಯ ಚೆನ್ನಮಲ್ಲಿಕಾರ್ಜುನ ಸ್ವಾಮಿಗಳು ಪ್ರಸಿದ್ಧ ಪವಾಡ ಪುರುಷರಾಗಿದ್ದರು. ಕೆಂಡಗಣ್ಣ ಸ್ವಾಮಿಗಳು ಹುಣಸೂರಿನ ಬಳಿಯಲ್ಲೂ, ಬೂದಿಯಪ್ಪನವರು ಮಾದಳ್ಳಿಯಲ್ಲೂ ಕೈವಲ್ಯವನ್ನು ಹೊಂದಿ ಗದ್ದಿಗೆ ಯಾದರು. ಕಾರೆಯ ಸ್ವಾಮಿಗಳೂ ಸಹಾ ಸಂಗಮವನ್ನು ಬಿಡಲು ತೀರ್ಮಾನಿಸಿದರು. ಕ್ರಿ.ಶ. 1853ರ ಒಂದು ಶುಭದಿನ ಸಂಗಮ ಬಳಿಯ ಕಾಡಿನಲ್ಲಿ ದನಗಳನ್ನು ಮೇಯಿಸುತ್ತಿದ್ದ ಸುಮಾರು 8–10 ಹುಡುಗರನ್ನು ಕರೆದು ತಮ್ಮ ಬರಿಗೈಯಿಂದಲೇ ಮಿಠಾಯಿಯನ್ನು ಕೊಟ್ಟು ತಿನ್ನಿರೆಂದು ಹೇಳಿದರು. ಆ ಹುಡುಗರು ಸಂತೋಷದಿಂದ ಸಿಹಿಯಾದ ಮಿಠಾಯಿ ಯನ್ನು ತಿಂದು ಸ್ವಾಮಿಗಳನ್ನು, 'ಮತ್ತಷ್ಟು ಕೊಡಿ' ಎಂದು ಹಠ ಹಿಡಿದರು. ಸ್ವಾಮಿಗಳು ಮತ್ತೂ ಕೊಟ್ಟರು. ಹುಡುಗರು ಅದನ್ನೂ ತಿಂದರು. 'ಇನ್ನೂ ಮಿಠಾಯಿ ಬೇಕಾ' ಎಂದು ಸ್ವಾಮಿಗಳು ಹುಡುಗ ರನ್ನು ಕೇಳಿದರು. ಹುಡುಗರು ಕುಣಿದಾಡುತ್ತಾ 'ಬೇಕು, ಬೇಕು' ಎಂದರು. ಕಾರೆಯ ಸ್ವಾಮಿಗಳು, 'ಹಾಗಾದರೆ ನಾನು ಹೇಳಿದ ಹಾಗೆ ಕೇಳಿದರೆ, ನೀವು ಕೇಳಿದಷ್ಟು ಮಿಠಾಯಿ ಕೊಡ್ತೀನಿ' ಎಂದರು. ಹುಡು ಗರು 'ಓ ! ಆಗಲಿ' ಎಂದರು. ಸಂಗಮೇಶ್ವರ ದೇವಾಲಯದ ಬಳಿ ಉತ್ತರ ಭಾಗದಲ್ಲಿ ಒಬ್ಬ ಮನುಷ್ಯ ಕುಳಿತುಕೊಳ್ಳಬಹುದಾದಷ್ಟು ಹಳ್ಳವನ್ನು ತೋಡಿ, ಅದರ ಬಳಿ ಒಂದು ಚಪ್ಪಡಿ ಕಲ್ಲನ್ನು ಇಡಲಾಗಿತ್ತು. ಕಾರೆಯ ಸ್ವಾಮಿಗಳು ಆ ಸ್ಥಳಕ್ಕೆ ಹುಡುಗರನ್ನು ಕರೆದುಕೊಂಡು ಬಂದು, 'ನಾನು ಈ ಹಳ್ಳದಲ್ಲಿ ಕುಳಿತುಕೊಳ್ಳುತ್ತೇನೆ. ಈ ಚಪ್ಪಡಿ ಕಲ್ಲನ್ನು ನನ್ನ ಮೇಲೆ ಎಳೆದು ಮುಚ್ಚಿ ಮಣ್ಣನ್ನು ಹರಡಿರಿ' ಎಂದು ಹೇಳಿದರು. ಹುಡುಗರು ಮೊದಲು ಭಯಪಟ್ಟರೂ ಮಿಠಾಯಿಯ ಆಸೆಯಿಂದ ಒಪ್ಪಿದರು. ಕಾರೆಯ ಸ್ವಾಮಿಗಳು ಆ ಹಳ್ಳದಲ್ಲಿ ಪದ್ಮಾಸನವನ್ನು ಹಾಕಿ ಕುಳಿತರು. ಹುಡುಗರು ಚಪ್ಪಡಿ ಕಲ್ಲನ್ನು ಸ್ವಲ್ಪ ಸ್ವಲ್ಪವಾಗಿ ಜರುಗಿಸಿ ಹಳ್ಳದ ಬಾಯನ್ನು

ಮುಚ್ಚುತ್ತಾ ಬಂದರು. ಕಾರೆಯ ಸ್ವಾಮಿಗಳು ಮುಷ್ಟಿ ಹಿಡಿದ ಕೈಯನ್ನು ಹಳ್ಳದ ಅಂಚಿನಿಂದ ಹೊರಕ್ಕೆ ತೂರಿಸಿ 'ಮಿಠಾಯಿಯನ್ನು ತೆಗೆದುಕೊಳ್ಳಿ' ಎಂದರು. ಮಿಠಾಯಿಯ ಒಂದು ಪೊಟ್ಟಣ ಹುಡುಗರ ಕೈಗೆ ಬಂದಿತು. ಹುಡುಗರು ಖುಷಿಯಿಂದ ಹಳ್ಳವನ್ನು ಪೂರ್ಣವಾಗಿ ಮುಚ್ಚಿದರು. ಕಲ್ಲಿನ ಮೇಲು ಭಾಗದಲ್ಲಿ ಮಣ್ಣನ್ನು ಎಳೆದು ನೆಲಸಮ ಮಾಡಿದರು. ಹುಡುಗರು ಮಿಠಾಯಿಯನ್ನು ತಿಂದು ಹತ್ತಿರದ ಜಮೀನಿನಲ್ಲಿದ್ದ ಜನರಿಗೆ, 'ಕಾರೆಯ ಸ್ವಾಮಿಗಳನ್ನು ಮಣ್ಣು ಮಾಡಿದೆವು' ಎಂದು ಹೇಳಿದರು. ಜನರು ಗಾಬರಿ ಯಿಂದ ಒಬ್ಬೊಬ್ಬರಾಗಿ ಸಂಗಮಕ್ಕೆ ಬರತೊಡಗಿದರು. ಹಳ್ಳತೋಡಿ ಮುಚ್ಚಿದ್ದ ಜಾಗವನ್ನು ನೋಡಿ ಕಣ್ಣೀರಿಟ್ಟರು. ಕ್ರಮೇಣ ಮೂವತ್ತೂರು ಹಳ್ಳಿಗೂ ಈ ವಿಷಯ ತಲುಪಿ ಸಹಸ್ರಾರು ಭಕ್ತರು ಬಂದು ನೋಡತೊಡಗಿದರು. 'ಕಾರೆಯ ಸ್ವಾಮಿಗಳು ಮಣ್ಣಾದರು' ಎಂಬ ಸುದ್ದಿ ಮೈಸೂರಿಗೂ ತಲಪಿತು. ಹರದನಹಳ್ಳಿಯ ಚಿಕ್ಕಮುದ್ದಯ್ಯ ಎಂಬ ಹರಿಜನ ಭಕ್ತನು ಮೈಸೂರಿಗೆ ಕಾರ್ಯಾರ್ಥವಾಗಿ ಹೋಗಿರಲು ಅವನಿಗೂ ಈ ವಿಷಯ ತಿಳಿಯಲು, ಅವನು ಮೈಸೂರಿನಲ್ಲಿರಲಾಗದೇ ಸಂಗಮದ ಕಡೆ ಓಡೋಡಿ ಬರತೊಡಗಿದನು. ಹೀಗೆ ಬರುತ್ತಿರಲು ನಂಜನಗೂಡಿನ ಮಲ್ಲನ ಮೂಲೆಯ ಬಳಿ ಕಾರೆಯ ಸ್ವಾಮಿಗಳು ಕುದುರೆಯ ಮೇಲೆ ಮೈಸೂರಿನ ಕಡೆಗೇ ಬರುತ್ತಿದ್ದರು. ಆ ಹರಿಜನ ಭಕ್ತನು ಇವರನ್ನು ಕಂಡು, 'ಬುದ್ಧೀ ಬುದ್ಧೀ, ನಿಮ್ಮನ್ನ ಎಲ್ರೂ ಸಂಗಮದಲ್ಲಿ ಕಾಯ್ಕ ಆದ್ರು ಅಂದ್ರು. ನೀವಿಲ್ಲಿ ಬರ್ತಾ ಇದೀರಲ್ಲಾ ಬುದ್ಧೀ' ಎಂದು ಕೈಮುಗಿದನು. ಕಾರೆಯ ಸ್ವಾಮಿಗಳು ಕುದುರೆಯನ್ನು ನಿಲ್ಲಿಸಿ ಆತನಿಗೆ, 'ನನ್ನನ್ನು ಕಂಡ ವಿಷಯ ಯಾರಿಗೂ ಹೇಳಕೂಡದು ನಾನು ಉತ್ತರ ಕರ್ನಾಟಕಕ್ಕೆ ಹೋಗ್ತಾ ಇದೇನೆ. ನೂರೈವತ್ತು ವರ್ಷ ಆದ್ಮೇಲೆ ಮತ್ತೆ ಬರ್ತೇನೆ. ಒಂದು ವೇಳೆ ಈ ವಿಷಯಾನ ನೀನು ಯಾರಿ ಗಾದರೂ ಬಾಯಿ ಬಿಟ್ಟರೆ ನಿನ್ನ ತಲೆ ಸಿಡಿದು ಹೋಗುತ್ತದೆ.' ಎಂದು ಎಚ್ಚರಿಸಿ ಕುದುರೆಯ ಮೇಲೆ ಪ್ರಯಾಣವನ್ನು ಬೆಳೆಸಿದರು. ಇತ್ತ ಸಂಗಮದಲ್ಲಿ ಜನಸಂದಣಿ ಸೇರಿ ಕಾರೆಯ ಸ್ವಾಮಿಗಳ ಗದ್ದಿಗೆ ನಿರ್ಮಾಣ ದಲ್ಲಿ ನಿರತರಾಗಿದ್ದರು. ಹರದನಹಳ್ಳಿಯ ಈ ಚಿಕ್ಕಮುದ್ದಯ್ಯನೂ ಬಂದು ಈ ಏರ್ಪಾಡನ್ನು ಗಮನಿಸುತ್ತಲೇ ಇದ್ದನು. ಎಲ್ಲರೂ ಸೇರಿ ಒಂದು ಗುಡಿಯನ್ನು ನಿರ್ಮಾಣ ಮಾಡಿ ಅಲ್ಲಿ ಒಂದು ಗದ್ದಿಗೆಯನ್ನು (ಆತ್ಮ

ರೂಪಿ ಲಿಂಗ) ಸ್ಥಾಪಿಸಿ ಕೃತಾರ್ಥರಾದರು. ಜನರು ಕಾರೆಯ ಸ್ವಾಮಿಯ ವರನ್ನೂ, ಅವರ ಮಹಿಮೆಯನ್ನೂ ಕೊಂಡಾಡುತ್ತಾ, 'ಇಷ್ಟು ಬೇಗ ಸ್ವಾಮಿಗಳು ಐಕ್ಯವಾಗಬಾರದಿತ್ತು' ಎಂದು ಮಾತನಾಡಿಕೊಳ್ಳುತ್ತಿದ್ದರು. ಸುಮಾರು ಎರಡು ತಿಂಗಳವರೆಗೂ ಜನರ ಈ ಮಾತನ್ನು ಕೇಳುತ್ತಿದ್ದ ಹರದನಹಳ್ಳಿಯ ಚಿಕ್ಕಮುದ್ದಯ್ಯನಿಗೆ ತಾನು ಕಂಡ ಸತ್ಯವನ್ನು ಮುಚ್ಚಿಡಲು ಆಗಲಿಲ್ಲ. ಒಂದು ದಿನ ಅವನು ತನ್ನ ಹೆಂಡತಿಯ ಜೊತೆ ಊಟಕ್ಕೆ ಕುಳಿತ ಸಮಯದಲ್ಲಿ ತನ್ನ ಮನಸ್ಸಿನಲ್ಲಿಯೇ ಕೊರೆಯುತ್ತಿದ್ದ ವಿಷಯ ಹೊರ ಹೊಮ್ಮಿತು. ಹೆಂಡತಿಯೊಂದಿಗೆ, 'ಅಲ್ಲ ಕಣಮ್ಮಾ, ಕಾರೇ ಸ್ವಾಮಿಗಳು ಐಕ್ಯವಾದ್ರೂ ಐಕ್ಯವಾದ್ರೂ ಅಂತ ಈ ಜನ ಅಂತವ್ರೆ, ಗದ್ಗೆ ಬ್ಯಾರೇ ಕಟ್ಟವ್ರೆ, ಈ ಜನಕ್ಕೆಲ್ಲೋ ಹುಚ್ಚು ಅಂತಿನ್ನಿ' ಎನ್ನುತ್ತಾ ನಗಲು ಪ್ರಾರಂಭಿಸಿದನು. ಆತನ ಹೆಂಡತಿಯು, 'ಅವ್ವೀ, ಅವ್ವೀ, ಅದ್ಯಾಕ್ ಹುಚ್ಚು ಅಂದೈ, ತಪ್ಪು ತಪ್ಪು ಅನ್ನು' ಎನ್ನಲು, ಗಂಡನು, 'ಅಯ್ ಹೋಗು ಮೂದೇವಿ, ಅವತ್ತು ನಾ ಮೈಸೂರಿಂದ ಬರ್ತಾಗ ಕಾರೇ ಸ್ವಾಂಗಳು ಕುದ್ರೆ ಮ್ಯಾಲೆ ಹೋಯ್ತಿದ್ರು ಕಣಮ್ಮಾ, ಆಮ್ಯಾಕೆ, ಅವ್ರೇ ಉತ್ರ ಕರ್ನಾಟಕ್ಕೆ ಓಯ್ತಿನಿ ಅಂದ್ರು ಕಣಮ್ಮಾ, ನೂರೈವತ್ತು ವರ್ಸಕ್ಕೆ ಪುನಾ ಬರ್ತೀನಿ ಅಂದ್ರು ಕಣಮ್ಮಾ, ಅಯ್...ದ್ಯಾವ್ರಾಣೆ ನಿಜ ಕಣಮ್ಮಾ' ಎಂದು ಮೆಲ್ಲನೆ ಹೆಂಡತಿಯ ಕಿವಿಯಲ್ಲಿ ತನ್ನ ಕಣ್ಣುಗಳನ್ನು ಅರಳಿಸುತ್ತಾ ಹೇಳುತ್ತಿದ್ದಂತೆಯೇ ಅವನ ತಲೆಯ ನೆತ್ತಿ ಬಾಯಿ ಪಟ್ ಎಂದು ಒಡೆದು ಅವನ ಪ್ರಾಣಪಕ್ಷಿ ಹಾರಿ ಹೋಯಿತು. ಊಟಕ್ಕೆ ಕುಳಿತಿದ್ದವನು ನೆಲದ ಮೇಲೆ ಉರುಳಿದನು. ಆತನ ಹೆಂಡತಿಗೆ ಸಿಡಿಲು ಬಡಿದಂತಾಗಿ ದಿಕ್ಕೇ ತೋಚದೇ ಬಾಯಿ ಬಡಿದುಕೊಳ್ಳಲಾರಂಭಿಸಿದಳು. ಸುತ್ತಲಿನ ಗುಡಿಸಲಿನಲ್ಲಿದ್ದ ಜನರೆಲ್ಲಾ ಓಡಿ ಬಂದರು. ಆಕೆಯು ಅಳುತ್ತಾ, 'ನನ್ನ ಗಂಡ ಸತ್ತೋದ್ನಲ್ಲಪ್ಪೋ, ಕಾರೇ ಸ್ವಾಂಗಳ್ನ ಕಂಡಿದ್ದೀ, ಉತ್ರ ದೇಸಕ್ಕೋದ್ರು ಅಂತ ಅಂದ ಕಣ್ರಪ್ಪೋ, ನೂರೈವತ್ತು ವರ್ಸ ಆದ್‌ಮ್ಯಾಕೆ ಬತ್ತಾರೆ ಅಂದ ಕಣ್ರಪ್ಪೋ, ಅಷ್ಟಕ್ಕೆ ಪಿರಾಣ ಒಂಟೋಯ್ತಪ್ಪೋ...' ಎನ್ನುತ್ತಾ ರೋದಿಸತೊಡಗಿದಳು. ಈ ವಿಚಿತ್ರ ಸಂಗತಿ ಒಬ್ಬರಿಂದ ಒಬ್ಬರಿಗೆ ಹರಡಿ ಎಲ್ಲರಲ್ಲೂ ಕುತೂಹಲ ವನ್ನುಂಟುಮಾಡಿತು. (ಈಗಲೂ ಈ ಚಿಕ್ಕಮುದ್ದಯ್ಯನ ವಂಶಸ್ಥ ಹೊನ್ನಯ್ಯನ ಮನೆಯವರು ಇದ್ದಾರೆ. ಖಂಡುಗ ರಾಗಿ ಮನೆತನ ಎಂದು ಪ್ರಸಿದ್ಧರಾಗಿದ್ದಾರೆ.) ಮೂವತ್ಮೂರು ಹಳ್ಳಿಯವರೂ

ಸಂಗಮದಲ್ಲಿ ಮತ್ತೆ ಸಭೆ ಸೇರಿದರು. ಆ ಸಮೂಹದಲ್ಲಿ ಉಚ್ಚಗಣಿಯ ನರಸಿಂಹೇಗೌಡ, ಮಾದನಹಳ್ಳಿಯ ಹೊಟ್ಟೆ ಪುಟ್ಟಪ್ಪ, ಬಸಪ್ಪ, ಆಕಲ ಗ್ರಾಮದ ದೇವರಾಜಪ್ಪ ಮೊದಲಾದವರೂ ಕಾರೆಯ ಸ್ವಾಮಿಗಳನ್ನು ಮೈಸೂರಿನ ಬಳಿ ನೋಡಿದ್ದುದಾಗಿ ತಿಳಿಸಿದರು. ಆದರೆ ಗದ್ದಿಗೆಯಾದ ವಿಷಯ ಆಗ ಅವರಿಗೆ ತಿಳಿದಿರಲಿಲ್ಲ ಸ್ವಾಮಿಗಳು ಎಲ್ಲಿ ಹೋದರು ಎಂಬುದೂ ತಿಳಿಯಲಿಲ್ಲ. ಆ ಸಭೆಯಲ್ಲಿ ಹೊಟ್ಟೆ ಪುಟ್ಟಪ್ಪನವರು ಒಂದು ಸಮಾಧಾನದ ಮಾತನ್ನು ಹೇಳಿದರು'ನಾನು ಮತ್ತು ಬಸಪ್ಪ ಈಗೆ ಎಂಟು ವರ್ಷದ ಹಿಂದೆ ನಮ್ಮ ಜಮೀನಿನಲ್ಲಿದ್ದಾಗ ಈ ಸಂಗಮೇಶ್ವರ ದೇವಸ್ಥಾನದಲ್ಲಿ ಒಬ್ಬ ಹುಡುಗ ಇದ್ದ. ಆ ಹುಡುಗನೇ 'ನಾಳೆ ನಿಮ್ಮೂರಿಗೆ ಸ್ವಾಮಿಗಳು ಬರ್ತಾರೆ' ಅಂದ. ಸ್ವಾಮಿಗಳೂ ಬಂದ್ರು. ಆಮ್ಯಾಲೆ ಆ ಹುಡುಗ ಎಲ್ಹೋದ ಅಂತ ನಮಗೆ ಇವತ್ತಿನವರೆಗೂ ಗೊತ್ತಿಲ್ಲ. ಆಂದ್ರೆ ನಂಗೆ ಹಿಂಗನ್ನಿಸ್ತೈತೆ 'ಕಾರೇ ಸ್ವಾಮಿಗಳೇ ಹುಡುಗನಾಗಿ ಬಂದು ನಮಗೆ ಹೇಳಿದರು ಅಂತ.' ಆದ್ದರಿಂದ ಕಾರೆಯ ಸ್ವಾಮಿಗಳು ಮಹಾತ್ಮರು, ದ್ಯಾವ್ರು. ಅವ್ರು ಎಲ್ಲಿ ಬೇಕಾದ್ರೂ ಇರ್ತಾರೆ. ನಮ್ಮ ಸಂಗಮಕ್ಕೆ ಬಂದು ಇಷ್ಟು ವರ್ಷ ನಮ್ಜೊತೆ ಇದ್ರಲ್ಲಾ, ಅಷ್ಟೇ ನಮ್ಮ ಪುಣ್ಯ ಅಂದ್ಕೊಳೋಣ ಈಗ ಕಾರೆಯ ಸ್ವಾಮಿಗಳ ಗದ್ದಿಗೆ ಹ್ಯಾಗೂ ಮಾಡೀವಿ. ತಪ್ಪದೇ ಅದರ ಪೂಜೆ ಮಾಡ್ಕೊಂಡು ಹೋಗೋವಾ' ಎಂದು ಹೇಳಿದಾಗ ಎಲ್ಲರೂ ಇವರ ಮಾತನ್ನು ಒಪ್ಪಿದರು.

ಕಾರೆಯ ಸ್ವಾಮಿಗಳ ಕಾಲದಲ್ಲಿದ್ದ ಜನರು ಈಗ ಇಲ್ಲವಾದರೂ ಅವರ ವಂಶಸ್ಥರೇ ಆಗಿರುವ ಇಂದಿನ ಮೂವತ್ಮೂರು ಹಳ್ಳಿಯ ಜನಾಂಗವು ಕಾರೆಯ ಸ್ವಾಮಿಗಳ ಭವ್ಯ ಜೀವನವನ್ನು ಮರೆತಿಲ್ಲ. ಅಲ್ಲದೇ ಅವರ ಮೇಲಿನ ಭಕ್ತಿ ಚಿರನೂತನವಾಗಿದೆ. ವರ್ಷಕ್ಕೊಮ್ಮೆ ಸಂಗಮೇಶ್ವರನ ರಥೋತ್ಸವ ಮತ್ತು ರುದ್ರಕೊಂಡವನ್ನು ಕಾರೆಯ ಸ್ವಾಮಿಗಳು ತಿಳಿಸಿದ್ದ ಪ್ರಕಾರ ನಡೆಸಿಕೊಂಡು ಬರುತ್ತಿದ್ದಾರೆ.

ಕಾರೆಯ ಸ್ವಾಮಿಗಳ ಭಕ್ತ ಪರಂಪರೆಯಲ್ಲಿ ಒಬ್ಬರಾದ ಕಣೇನೂರು ವೀರಪ್ಪನವರು ನಿಷ್ಠಾವಂತ ವೀರಶೈವರು. ಇವರು ಹನ್ನೆರಡು ವರ್ಷಗಳ ಕಾಲ ಒಂದು ಹೊತ್ತು ಉಪವಾಸವಿದ್ದು ತಮ್ಮ ವ್ರತದ ಅಂತ್ಯದಲ್ಲಿ ದಿನಾಂಕ 3–2–1911 ರಲ್ಲಿ ಸಂಗಮದಲ್ಲಿ 'ಇಪ್ಪತ್ಮೂರು ಪುರಾತನರ ಆರಾಧನೆ'ಯನ್ನು ನಡೆಸಿದರು. ಎಂಟು ದಿನಗಳ ಈ ಬೃಹತ್ ಕಾರ್ಯಕ್ರಮವು ಅಗ್ನಿಹೋತ್ರಾದಿ ಹವನಗಳಿಂದ ನಡೆದು ಮೂವತ್ಮೂರು

ಹಳ್ಳಿಯವರಿಗೂ ಅನ್ನ ಸಂತರ್ಪಣೆ ನಡೆಯಿತು. ಇಂತಹ ಕಾರ್ಯಕ್ರಮವು ಈ ಪ್ರದೇಶದಲ್ಲಿ ಹಿಂದೆಯೂ ನಡೆದಿರಲಿಲ್ಲ, ಮುಂದೆಯೂ ನಡೆದಿಲ್ಲ.

ಇಂದು ಕಣೇನೂರು ವೀರಪ್ಪನವರ ಮಕ್ಕಳಾದ ಶ್ರೀ ಕೆ. ವಿ. ರುದ್ರಪ್ಪನವರು ಕಾರೆಯ ಸ್ವಾಮಿಗಳ ಗದ್ದಿಗೆಗೆ ಜಮೀನನ್ನು ಬಿಟ್ಟಿರುತ್ತಾರೆ. ನಿತ್ಯಪೂಜೆಗಾಗಿ ಅರ್ಚಕರನ್ನೂ ನೇಮಿಸಿರುತ್ತಾರೆ. ವೀರಭದ್ರಯ್ಯ ಉ॥ ಕುಳ್ಳಯ್ಯ, ಬಸಪ್ಪದೇವರು, ಶಿವಪ್ಪದೇವರು ಗದ್ದಿಗೆಯ ಅರ್ಚಕರಾಗಿದ್ದರು. ಇಂದು ವೀರಭದ್ರದೇವರು ಎಂಬುವರು ಕಾರೆಯ ಸ್ವಾಮಿಗಳ ಗದ್ದಿಗೆಯ ಅರ್ಚಕರಾಗಿದ್ದಾರೆ.

ಕಾರೆಯ ಸ್ವಾಮಿಗಳ ಗದ್ದಿಗೆಯ ಪೂಜೆಯನ್ನು 1945 ರಿಂದ 1982 ರವರೆಗೆ ದೀರ್ಘಕಾಲ ಮಾಡಿ ಶಿವೈಕ್ಯರಾದ ಬಸಪ್ಪ ದೇವರ ಸ್ಮರಣಾರ್ಥವಾಗಿ ಈ ಗದ್ದಿಗೆಯ ಎದುರಿನಲ್ಲಿ ಒಂದು ಬಸವ ಮಂಟಪವನ್ನು ನಿರ್ಮಿಸಲಾಗಿದೆ.

ಕಾರೆಯ ಸ್ವಾಮಿಗಳ ಭಕ್ತಾದಿಗಳು ಸಂಗಮ ಕ್ಷೇತ್ರದ ಅಭಿವೃದ್ಧಿಗೆ ಕಾರಣರಾಗಿದ್ದಾರೆ ಸಂಗಮೇಶ್ವರನ ರಥವನ್ನು ಮಾದನಹಳ್ಳಿಯ ಜನರೂ, ಗದ್ದಿಗೆಯ ಮಹಾದ್ವಾರವನ್ನು ಕಾರೆಯದ ಜನರೂ, ಒಂದು ಅತಿಥಿ ಗೃಹ ಮತ್ತು ಒಂದು ನೀರಿನ ಬಾವಿಯನ್ನು ಕೆ. ವಿ. ರುದ್ರಪ್ಪನವರೂ ನಿರ್ಮಿಸಿರುತ್ತಾರೆ. ಹುಲ್ಲಹಳ್ಳಿಯ ಜನರು ಸಂಗಮೇಶ್ವರ ದೇವಾಲಯಕ್ಕೆ ವಿದ್ಯುತ್ ಸೌಲಭ್ಯವನ್ನು ಒದಗಿಸಿರುತ್ತಾರೆ.

## ಸಂಗಮದ ಆಶ್ರಮವಾಸಿ ಶ್ರೀ ಶ್ರೀ ಶ್ರೀ ಸದ್ಗುರು ಮಹದೇವ ತಾತ

ಸಂಗಮ ಕ್ಷೇತ್ರಕ್ಕೆ ಪ್ರವೇಶಿಸಿದೊಡನೆ ಎಲ್ಲರನ್ನೂ ಆಕರ್ಷಿಸುವ ಮತ್ತೊಂದು ಅಂಶವೆಂದರೆ ಶ್ರೀ ಶ್ರೀ ಶ್ರೀ ಸದ್ಗುರು ಮಹದೇವತಾತ ಅವರ ಆಶ್ರಮ. ತಾತ ಅವರು ಈಗ್ಗೆ ಏಳು ವರ್ಷಗಳ ಹಿಂದೆ ಸಂಗಮದಲ್ಲಿ ಬಂದು ನೆಲೆಸಿದರು. ವಯಸ್ಸಾದ ಶರೀರ, ಬಿಳಿಗಡ್ಡಧಾರಿ, ತಮ್ಮ ಭಕ್ತರನ್ನು ಪಾಪಗಳಿಂದ ಮುಕ್ತಗೊಳಿಸಿ ಆ ಪಾಪದ ಹೊರೆಯನ್ನು ತಾವು ಹೊತ್ತಿರುವರೋ ಎಂಬಂತೆ ಶಿರದಿಂದ ಇಳಿಬಿದ್ದಿರುವ ಸುಮಾರು ಹತ್ತು ಅಡಿ ಉದ್ದದ ಕೆಂಜೆಡೆಯನ್ನು ಹೊಂದಿ, ಕಾವಿ ವಸ್ತ್ರಧಾರಿಯಾಗಿರುವ ತಾತ ಅವರು ಸಾಮಾನ್ಯ ಲೌಕಿಕರಿಗೆ ಕಣ್ಣುಕಾಣದ ಕುರುಡರು, ಕಿವಿ

ಕೇಳದ ಕಿವುಡರು. ಆದರೆ ಆಧ್ಯಾತ್ಮದಲ್ಲಿ ಆಸಕ್ತಿಯುಳ್ಳವರಿಗೆ ತಾತ ಅವರು ಮಹಾತಪಸ್ವಿಗಳು, ವಿಶ್ವಸಂಚಾರಿಗಳು, ಲಿಂಗೋದ್ಭವರು ಹಾಗೂ ಚಿರಂಜೀವಿಗಳು.

ತಾತ ಅವರು ಸಂಗಮ ಕ್ಷೇತ್ರವನ್ನು ಶಿವಪುರವೆಂದೂ, ತಮ್ಮ ಆಶ್ರಮದ ಸ್ಥಳವನ್ನು ಗೌರಿಕುಂಡವೆಂದೂ ಕರೆದಿದ್ದಾರೆ. ಆಶ್ರಮದ ಬಳಿ ನಿರಂಜನ ಸ್ವಾಮಿಯವರ ಗದ್ದಿಗೆಯನ್ನು ಬರಿಯ ವಿಭೂತಿ ಘಟ್ಟಯಿಂದಲೇ ನಿರ್ಮಿಸಿ ಅದಕ್ಕೆ ಒಂದು ಸಾವಿರ ವರ್ಷಗಳ ಆಯುಷ್ಯವನ್ನು ನಿಗದಿಪಡಿಸಿದ್ದಾರೆ. ಆಶ್ರಮದ ಬಳಿಯಲ್ಲೇ ಎಪ್ಪತ್ತು ಅಂಕಣದ ರುದ್ರಾಕ್ಷಿ ಮಠವನ್ನು ಸ್ಥಾಪಿಸಲು ಸಿದ್ಧತೆ ನಡೆಸುತ್ತಿದ್ದಾರೆ. ಹುಲ್ಲಹಳ್ಳಿಗೆ ಸುಮಾರು ಎಂಟು ಕಿ.ಮೀ. ದೂರದ ಈಶಾನ್ಯ ಭಾಗದಲ್ಲಿರುವ 'ಅಲಸನ ಕೆರೆ' ಎಂಬ ಗ್ರಾಮದ ಬಳಿ ಶಿಲೆಯ ಬೃಹತ್ ಜೋಡಿ ಬಸವಗಳನ್ನು ಗುರುತಿಸಿದ್ದಾರೆ. ಭೂಮಿಯಲ್ಲಿ ಹುದುಗಿದ್ದ ಈ ಜೋಡಿ ಬಸವಗಳು ಎಲ್ಲಿಂದಲೋ ಬಂದ ಈ ತಾತನವರಿಗೆ ಗೋಚರಿಸಿದ್ದು ಆಶ್ಚರ್ಯದ ಸಂಗತಿಯಾಗಿದೆ. ಈ ಜೋಡಿ ಬಸವಗಳ ತಳಭಾಗದಲ್ಲಿ ಒಂದು ಕಂಚಿನ ರಥವೂ, ರಥದ ತಳಭಾಗದಲ್ಲಿ ಭೂಗರ್ಭದಲ್ಲಿ ವಜ್ರದ ಬಂಡೆಯೂ ದೊರೆಯುತ್ತದೆ ಎಂದು ತಾತನವರು ತಿಳಿಸಿದ್ದಾರೆ ಎನ್ನಲಾಗಿದೆ. ಈಗ್ಗೆ ನಾಲ್ಕು ವರ್ಷಗಳ ಹಿಂದೆ ಮಾದನಹಳ್ಳಿಯ ಜನರು ಮಳೆಯಿಲ್ಲದೆ ಕಂಗಾಲಾಗಿದ್ದರು. ತಾತನವರನ್ನು ನೋಡಿ ತಮ್ಮ ಕಷ್ಟ ಹೇಳಿಕೊಳ್ಳೋಣವೆಂದು ಆ ಜನರು ಸಂಗಮಕ್ಕೆ ಬಂದರು. ತಾತನವರು ಸಂಗಮೇಶ್ವರ ದೇವಾಲಯದ ಮುಂದೆ ದೇವರ ಕಡೆಗೆ ತಲೆಹಾಕಿಕೊಂಡು ನೆಲದ ಮೇಲೆ ಮಲಗಿದ್ದರು. ಮಾದನಹಳ್ಳಿಯ ಜನ ಇವರನ್ನು ಮಾತನಾಡಿಸಲೇ ಇಲ್ಲ. ಭಕ್ತಿಯಿಂದ ನಮಸ್ಕರಿಸಿ ಊರಿಗೆ ಮರಳಿದರು ಅಂದು ಸಂಜೆ ಮಾದನಹಳ್ಳಿಯಲ್ಲಿ ಧಾರಾಕಾರವಾಗಿ ಮಳೆ ಬಿದ್ದಿತು. ತಾತನವರ ಮಹಿಮೆಯೇ ಮಳೆಗೆ ಕಾರಣವೆಂದು ಜನರು ಭಾವಿಸಿದರು.

ಈ ಮಹಿಮಾವಂತ ತಾತನವರು ಬಳ್ಳಾರಿ, ಧಾರವಾಡ, ಅಳ್ಳೀಪುರ, ಮಲಪ್ರಭ–ಘಟಪ್ರಭಾ ಮತ್ತು ಅದವಾನಿಗಳಲ್ಲಿದ್ದು ಒಂದೊಂದು ಮಠವನ್ನು ಸ್ಥಾಪಿಸಿರುತ್ತಾರೆ. ಬಾಂಬೆಯ ವಜ್ರೇಶ್ವರಿ ಅಮ್ಮನವರಿಗೆ ಬೆನ್ನು ಕೊಟ್ಟು ಹನ್ನೆರಡು ವರ್ಷ ತಪಸ್ಸನ್ನಾಚರಿಸಿದ್ದಾರೆ. ಕೆಲವು ವರ್ಷಗಳ ಕಾಲ ಕಾಶಿಯಲ್ಲಿದ್ದು ಮಹಾವಿದ್ವಾಂಸರೆಂದು ಖ್ಯಾತಿಗಳಿಸಿದ್ದಾರೆ.

ಹಡಗಿನಲ್ಲಿ ಪ್ರಯಾಣ ಮಾಡಿ ವಿಶ್ವ ಪರ್ಯಟನ ಮಾಡಿರುತ್ತಾರೆ.

ತಾತನವರ ಬಳಿ ಈಗಲೂ ಒಂದು ರೈಫಲ್ ಇದೆ. ತಾತನವರು ಈ ರೈಫಲನ್ನು 155 ವರ್ಷಗಳ ಹಿಂದೆ ಆದವಾನಿಯಲ್ಲಿ ಪಡೆದಿರುವುದಕೆ ಸರ್ಕಾರಿ ದಾಖಲೆಯನ್ನು ಈಗಲೂ ಕಾಣಬಹುದು. ಇದಕ್ಕಿಂತಲೂ ಸೋಜಿಗದ ವಿಷಯಗಳನ್ನು ತಾತನವರ ಸೇವೆಯನ್ನು 40 ವರ್ಷಕ್ಕಿಂತಲೂ ಮಿಗಿಲಾಗಿ ಮಾಡಿರುವ ಭಕ್ತರು ಹೇಳುವುದುಂಟು. ತಾತನವರು ಸಾಮಾನ್ಯವಾಗಿ ಯಾರೊಡನೆಯೂ ಮಾತನಾಡುವುದಿಲ್ಲ. ತಮ್ಮ ಆಶ್ರಮ ದಲ್ಲಿ ಯಾವಾಗಲೂ ನಿದ್ರಾವಶರಾಗಿರುತ್ತಾರೆ. ದೇಹ ಪೋಷಣೆಗಾಗಿ ಮಾತ್ರ ತಮಗೆ ಬೇಕೆನಿಸಿದಾಗ ತಮ್ಮ ಸೇವಕನು ತಯಾರಿಸಿದ ಸ್ವಲ್ಪ ಮುದ್ದೆ, ಸೊಪ್ಪಿನ ಸಾರನ್ನು ಉಪಯೋಗಿಸುತ್ತಾರೆ. ತಾತನವರನ್ನು ಕಾಣಲು ಭಾರತದ ಹಲವು ಭಾಗಗಳಿಂದ ಸಂಗಮಕ್ಕೆ ಬರುತ್ತಾರೆ. ತಾತ ನವರ ದರ್ಶನ ಪಡೆದು ಅಷ್ಟೋ ಇಷ್ಟೋ ಕಾಣಿಕೆ ಕೊಟ್ಟು ಹೋಗು ತ್ತಾರೆ. ಒಮ್ಮೊಮ್ಮೆ ತಾತನವರು ತಮ್ಮ ಭಕ್ತಾದಿಗಳಲ್ಲಿ ಯಾರನ್ನಾದರೂ ಕರೆದು ಅವರೊಡನೆ ಮಾತನಾಡುವುದುಂಟು. ದೈವಾಂಶ ಸಂಭೂತರಾದ ಶ್ರೀ ಶಂಕರಾಚಾರ್ಯರು, ರಾಮಾನುಜರು, ಮಧ್ವರು, ಬಸವಣ್ಣನವರು, ಗದಗದ ಶರಣ ಮಡಿವಾಳಪ್ಪ, ನವಲಗುಂದದ ನಾಗಲಿಂಗಪ್ಪ ಆದಿಯಾಗಿ ಭಾರತದ ವಿಭೂತಿ ಪುರುಷರು ಅಶರೀರಿಗಳಾಗಿ ಸಂಚರಿಸುತ್ತಿದ್ದಾರೆ. ಅವರಾರೂ ಈ ಲೋಕವನ್ನು ಬಿಟ್ಟು ಹೋಗಿಲ್ಲ ಎನ್ನುತ್ತಾರೆ ತಾತನವರು. ಇದರಿಂದಾಗಿ ತಾತನವರು ತಮ್ಮ ಯೋಗನಿದ್ರಾವಸ್ಥೆಯಲ್ಲಿ ಅಶರೀರಿಗಳಾದ ಪವಿತ್ರಾತ್ಮಗಳ ಜೊತೆ ಮಾತನಾಡುತ್ತಾರೆ ಎಂದು ತಿಳಿದು ಬರುತ್ತದೆ.

ತಾತನವರು ಸಂಗಮದಲ್ಲಿ ಕೆಲವಾರು ತಿಂಗಳುಗಳಿಂದ ಓಡಾಡಿದ್ದೇ ಕಾಣುವುದಿಲ್ಲ. ಆದರೆ ಒಂದು ದಿನ ಪ್ರಾತಃ ಕಾಲ ತಾವೇ ಎದ್ದು ಕಪಿಲಾ ನದಿಯ ಕಡೆಗೆ ಬಂದರು. ನದಿಯ ತೀರವು ತುಂಬಾ ಕಡಿದಾಗಿರುವುದರಿಂದ ಈ ವೃದ್ಧರಿಗೆ ಇಳಿಯಲು ಸಾಧ್ಯವಾಗಲಿಲ್ಲ. ಆಗ ತಾತನವರು ನದಿಯನ್ನು ಕುರಿತು, 'ಅವ್ವ, ಗಂಗವ್ವ, ನಾನು ನಿನ್ನ ಹತ್ತಿರ ಬರೋದಕ್ಕೆ ಆಗೋಲ್ಲ. ನೀನೇ ನನ್ನ ಹತ್ತಿರ ಬಂದು ಸ್ನಾನ ಮಾಡಿಸವ್ವ' ಎಂದರು. ಸ್ವಲ್ಪ ಸಮಯದ ನಂತರ, 'ತೃಪ್ತಿಯಾಯಿತು ಗಂಗವ್ವ, ನೀನು ಹೋಗಿ ಬಾರವ್ವ' ಎಂದರು. ಈ ಮಾತುಗಳನ್ನು ದಡದ ಮೇಲು ಭಾಗದಲ್ಲ ಎತ್ತು ಗಳನ್ನು ಹಿಡಿದುಕೊಂಡು ಮೇಯಿಸುತ್ತಿದ್ದ ಮಾದನಹಳ್ಳಿಯ ಹೆತ್ತಪ್ಪ

ನೆಂಬುವರು ಕೇಳಿಸಿಕೊಂಡರು. 'ತಾತನವರು ಹೀಗೇಕೆ ಹೇಳುತ್ತಿದ್ದಾರೆ' ಎನ್ನುವಷ್ಟರಲ್ಲಿ ತಾತನವರು ಶುಚಿರ್ಭೂತರಾಗಿ ಆಶ್ರಮದ ಕಡೆಗೆ ನಡೆಯುತ್ತಿದ್ದರು. ಮಾನವ ಕೋಟಿಯಲ್ಲದೇ ಪ್ರಕೃತಿಯೂ ತಾತನವರ ಸೇವೆಯನ್ನು ಮಾಡಲು ಸಿದ್ಧವಾಗಿದೆ ಎಂಬುದಕ್ಕೆ ಇದೊಂದು ಜ್ವಲಂತ ಸಾಕ್ಷಿಯಾಗಿದೆ.

ತಾತನವರ ಭಕ್ತಾದಿಗಳು ಹಲವು ಬಾರಿ ತಾತನವರ ಬಾಯಿಂದಲೇ ಕೇಳಿದ ಕೆಲವು ವಿಷಯಗಳನ್ನು ನಂಬುವುದು ಕಷ್ಟವಾದರೂ ಇಲ್ಲಿ ತಿಳಿಸಲು ಪ್ರಯತ್ನಿಸಲಾಗಿದೆ.

1. ಗೆಡ್ಡೆಗೆಣಸುಗಳನ್ನು ತಿಂದು, ಎಲೆ ಮತ್ತು ಮರದ ತೊಗಟೆಯನ್ನು ಉಡುಪಾಗಿ ಬಳಸುತ್ತಿದ್ದ ಹಳೇ ಶಿಲಾಯುಗದ ಜನರನ್ನು ತಾತನವರು ನೋಡಿದ್ದಾರಂತೆ.

2. ತಾತನವರು ರಾಜಾವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದಾಗ ಉಜ್ಜಯಿನಿಯಲ್ಲಿ ಒಂದು ಜ್ಯೋತಿರ್ಲಿಂಗದ ದೇವಾಲಯವನ್ನು ನಿರ್ಮಿಸಿರುವರಂತೆ.

3. ಕಲ್ಯಾಣ ಬಸವಣ್ಣನವರು ಮಂತ್ರಿ ಪದವಿಯಿಂದ ಇಳಿದಾಗ ಹೂವಿನ ಹಡಗಲಿ ತಾಲ್ಲೋಕಿನ ಸಾಲುಮೋರಳ್ಳಿ ಹತ್ತಿರ ಸಾಲಳ್ಳಿ ಮಠ ಮತ್ತು ಅರವತ್ತು ಎಕರೆ ಜಮೀನನ್ನು ಬಸವಣ್ಣನವರಿಗೆ ತಾತನವರು ನೀಡಿದ್ದಾರಂತೆ.

4. ಇಂದಿನ ಮೈಸೂರು ಅರಮನೆಯ ನಿರ್ಮಾಣ ಕಾಲದಲ್ಲಿ ತಾತನವರೂ ಭಾಗವಹಿಸಿದ್ದರು. ಮತ್ತು ಈ ವೇಳೆಯಲ್ಲಿ ಅರಮನೆಯಲ್ಲಿ ತಪಸ್ಸನ್ನಾಚರಿಸಿ ಚಾಮುಂಡೇಶ್ವರಿ ಅಮ್ಮನವರ ದರ್ಶನವನ್ನು ಪಡೆದಿರುವರಂತೆ.

5. ಈಗಿನ ಸಿಂಹಳ ದ್ವೀಪದಲ್ಲಿರುವ ನೂರಾರು ಜನ ಸಾಧು, ಸಂತರು ತಾತನವರ ಆಗಮನವನ್ನು ನಿರೀಕ್ಷಿಸುತ್ತಿರುವರು ಎಂದು ತಿಳಿಯಲಾಗಿದೆ.

ಈ ಮೇಲ್ಕಂಡ ವಿಷಯಗಳು ನಿಜವೇ ಆಗಿದ್ದಲ್ಲಿ ತಾತನವರು 'ಮಾನವ ಲೋಕದ ಮಹಾದ್ಭುತ' ಎಂದೇ ಹೇಳಬೇಕು.

ಸಂಗಮದ ಸುತ್ತಲ ಪ್ರದೇಶದ ಜನರು ಈ ತಾತನವರನ್ನು ತಮ್ಮ ಪವಾಡಪುರುಷ ಕಾರೆಯ ಸ್ವಾಮಿಗಳೇ ಆಗಿರಬೇಕೆಂದು ನಂಬುತ್ತಾರೆ.

